ಬಿ. ಎ. ಹಾಗೂ ಎಂ. ಎ. ತರಗತಿಗಳಿಗಾಗಿ ಉಪಯುಕ್ತವಾದ

# ಕನ್ನಡ ಸಾಹಿತ್ಯ ಚರಿತ್ರೆ

## ಕೈಪಿಡಿ

(REVISED EDITION)

ಪ್ರೊ : ಶಾಸ್ತ್ರಿ
M. A.



Price :
Rs. 4-00

S. S. C. INSTITUTE, GADAG.

# ಕನ್ನಡ ಸಾಹಿತ್ಯ ಚರಿತ್ರೆಯ ಕೈಪಿಡಿ.

ಪ್ರಶ್ನೆ ೧ — ಶಾಸನ ಯುಗದ ಸಾಹಿತ್ಯದ ರೂಪರೇಷೆಗಳನ್ನು ವಿವರಿಸಿರಿ.

ಉತ್ತರ— ಭಾಷೆಯ ಉದಯವೆಂದರೆ ಸಾಹಿತ್ಯದ ಉದಯ. ಅನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ. ಹಿಂದಿನ ಭಾಷೆ ಹೆಚ್ಚು ಕಾವ್ಯಮಯವಾಗಿತ್ತೆಂದು ಬಲ್ಲವರು ಬಲ್ಲ ಮಾತಾಗಿದೆ. ಜನಪದ ಸಾಹಿತ್ಯವೇ ಮೂಲ ಸಾಹಿತ್ಯ. ಇದರ ಪ್ರಭಾವ ಹಿರಿದಾದುದು. ಬಹುಶಃ ಪಳಗಿದ ಎಲ್ಲ ಭಾಷೆಗಳಲ್ಲಿ ಇರುವಂತೆ ಕನ್ನಡ ಭಾಷೆಯಲ್ಲಿಯೂ ಶೀರ ಪ್ರಾಚೀನ ಸಾಹಿತ್ಯ ವಿಪುಲ ಹಾಗೂ ವೈವಿಧ್ಯ ಪೂರ್ಣವಾಗಿದೆ. ಇದಕ್ಕೆ ಆಧಾರ ಕ್ರಿಸ್ತಶಕ ೭ನೆಯ ಶತಮಾನದ ಶಾಸನದಲ್ಲಿಯ ತ್ರಿಪದಿಗಳು, ೮ನೆಯ ಶತಮಾನದಲ್ಲಿಯ ಒನಕೆವಾಡು, ೯ನೆಯ ಶತಮಾನದಲ್ಲಿಯ ಬೆದಂಡೆ–ಚತ್ತಾಣಗಳಲ್ಲಿಯ ಛಂದೋರೂಪಗಳು, ಇವಲ್ಲದೆ ಕ್ರಿಸ್ತಶಕ ೨ನೆಯ ಇಲ್ಲವೆ ೫ನೆಯ ಶತಮಾನದಲ್ಲಿ ರಚಿತವಾದ 'ಶಿಲಿಪ್ಪ ದಿಗಾರಂ' ಎಂಬ ತಮಿಳು ಕೃತಿಯಲ್ಲಿ ವರ್ಣಿಸಲಾದ ನೀಲಗಿರಿಯ ಕನ್ನಡತಿಯರ ಕುಣಿತದ ಹಾಡು ಮೊದಲಾದವುಗಳು ಇದಕ್ಕೆ ನಿದರ್ಶನವಾಗಿವೆ.

ಜನರ ಮಾತು ಸಾಹಿತ್ಯ ಪದವಿಗೆ ಏರಲು: (೧) ಶ್ರವಣ ಪ್ರಿಯ ಬಹು ಜನ ಸಮಾಜ (೨) ಪ್ರತಿಷ್ಠಾ ಪ್ರಿಯ ವಿದ್ವಾನ್ ಪಂಡಿತವರ್ಗ (೩) ಕೀರ್ತಿ ಪ್ರಿಯ ಆಶ್ರಯ ಶೀಲ ರಾಜರು, ಹೀಗೆ ಮೂರು ಕಾರಣಗಳು ಬೇಕೆಂದು ಶ್ರೀ ಬೇಂದ್ರೆ ಅವರು ಹೇಳಿದ್ದಾರೆ. ನಮಗೆ ದೊರೆತ ಮೊದಲನೆಯ ಗ್ರಂಥವೆಂದರೆ ಕ್ರಿಸ್ತಶಕ ೯ನೆಯ ಶತಮಾನದಲ್ಲಿ ರಚಿತವಾದ 'ಕವಿರಾಜ ಮಾರ್ಗ'ವು ಇದಕ್ಕಿಂತಲೂ ಹಿಂದೆ ಕನ್ನಡ ಸಾಹಿತ್ಯವು ಇತ್ತು, ಇಷ್ಟೇ ಅಲ್ಲ, ಒಂದು ಶಿಷ್ಟ ಸಂಪ್ರದಾಯವಾಗಿ ರೂಪುಗೊಳ್ಳುತ್ತಲಿತ್ತು. 'ಕವಿರಾಜ ಮಾರ್ಗ'ದಲ್ಲಿ ಇದಕ್ಕೆ ಪುಷ್ಟಿ ದೊರೆಯುತ್ತದೆ. ಆದರೆ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು

ಅರಿಯಲು ಕೆಳಗೆ ಕೊಟ್ಟ ಆಧಾರಗಳನ್ನು ಆಶ್ರಯಿಸಿ ಅದರ ಮೂರ್ತ ಸ್ವರೂಪವನ್ನು ನಿರೂಪಿಸಬೇಕು. (೧) ಅನ್ಯದೇಶ ಇಲ್ಲವೆ ಅನ್ಯಭಾಷೆಗಳಲ್ಲಿಯ ಪ್ರಾಚೀನ ಅವಶೇಷಗಳು, (೨) ಕರ್ನಾಟಕದಲ್ಲಿಯ, ಅದರಲ್ಲಿಯೂ ಕನ್ನಡದಲ್ಲಿ ಬರೆದ ಪ್ರಾಚೀನ ಶಾಸನಗಳು (೩) 'ಕವಿರಾಜ ಮಾರ್ಗ'ದಲ್ಲಿ ದೊರೆತ ಆಧಾರಗಳು, (೪) ಇತರ ಗ್ರಂಥಗಳಲ್ಲಿ ದೊರೆತ ಆಧಾರಗಳು ಇವೇ ಮುಖ್ಯ ಆಧಾರಗಳು.

ವೇದ ಪೂರ್ವ ಇಲ್ಲವೇ ವೇದಕಾಲದಿಂದ ಅಲ್ಲದಿದ್ದರೂ ಕ್ರಿಸ್ತ ಶಕ ೨ನೆಯ ಶತಮಾನದಿಂದಂತೂ ಕನ್ನಡ ನಾಡು ನುಡಿಗಳ ಅಸ್ತಿತ್ವದಲ್ಲಿ ಅನ್ಯ ಅಭಿಪ್ರಾಯವಿಲ್ಲ. ಇಜಿಪ್ತದಲ್ಲಿ ಗ್ರೀಕ ಪ್ರಹಸನದಲ್ಲಿ ದೊರೆತ ಮಾತು ಕನ್ನಡವೆಂದು ಶ್ರೀ ಗೋವಿಂದ ಪೈಗಳವರು ತೋರಿಸಿ ಕೊಟ್ಟಿದ್ದಾರೆ. ೧-೨ ಶತಮಾನದ 'ಗಾಥಾಸಪ್ತಶತಿ' ಎಂಬ ಪ್ರಾಕೃತ ಭಾಷೆಯ ಪದ್ಯ ಕಾವ್ಯದಲ್ಲಿ ಪೊಟ್ಟ(ಹೊಟ್ಟೆ) ತುಪ್ಪ ಮೊದಲಾದ ನಾಮಪದಗಳನ್ನೂ ಪೆಟ್ಟು (ಹೊಡೆ), ತೀರ್ (ಶಕ್ಯವಾಗು) ಮೊದಲಾದ ಕ್ರಿಯಾಪದಗಳನ್ನೂ ಬಳಸಿಕೊಳ್ಳಲಾಗಿದೆ. ಅಂದಮೇಲೆ ಆಗಲೇ ಕನ್ನಡ ಸಾಹಿತ್ಯವು ಬೆಳೆದಿರಬೇಕು ಇಲ್ಲವೆ ಬೆಳೆಯುತ್ತಿರಬೇಕು.

೩ನೆಯ ಶತಮಾನದ ಅಶೋಕನ ಕಾಲದಿಂದಲೂ ಶಿಲಾಲಿಪಿಗಳೂ, ತಾಮ್ರ ಪಟಗಳು ದೊರೆತರೂ ಅವೆಲ್ಲ ಪ್ರಾಕೃತ ಇಲ್ಲವೆ ಸಂಸ್ಕೃತದಲ್ಲಿವೆ. ನಿರ್ದಿಷ್ಟ ಶಕವನ್ನು ಹೇಳಿಕೊಂಡ ಕ್ರಿಸ್ತ ಶಕ ೨,೩,೪ನೆಯ ಶತಮಾನದವೆನ್ನುವ ೩-೪ ಕನ್ನಡ ಶಾಸನಗಳ ಕಾಲದ ಬಗ್ಗೆ ಭಿನ್ನಾಭಿಪ್ರಾಯವಿದೆ. ಆದರೂ ಶ್ರೀ ರಾಯಿಸರು ೫ನೆಯ ಶತಮಾನದ್ದೆಂದು ಹೇಳುವ ಶಾಸನವೊಂದು ಗದ್ಯದಲ್ಲಿ ಇದ್ದರೆ ಇನ್ನೊಂದು ಅಂದವಾದ ಪದ್ಯವಾಗಿದೆ ಎಂದು ಹೇಳಿದ್ದಾರೆ. ಇದರ ಆಧಾರದ ಮೇಲಿಂದ ಶ್ರೀ ಗೋವಿಂದ ಪೈಗಳವರು "ಕ್ರಿಸ್ತ ಶಕ ೨-೩ನೆಯ ಶತಕದಿಂದಲಾದರೂ ಸಂಸ್ಕೃತ ಮಿಶ್ರಿತವಾದ ಹಾಗೂ ಸಂಸ್ಕೃತ ಛಂದೋ ಬದ್ಧವಾದ ಕನ್ನಡ ಸಾಹಿತ್ಯವಿದ್ದಿರಬೇಕು" ಎಂದು ಅಭಿಪ್ರಾಯಪಟ್ಟಿದ್ದಾರೆ.

ಶಾಸನಗಳ ರಚನೆಗೆ ಮೊದಲು ಸಮೃದ್ಧವಾದ ಸಾಹಿತ್ಯವಿರಬೇಕು. ಇಲ್ಲಿಯ ಪದ್ಯಗಳು ಸಂಸ್ಕೃತದಲ್ಲಿಯೂ ಹೊಸದಾದ ಕೆಲವು ಸಂಸ್ಕೃತ ವೃತ್ತಗಳಲ್ಲಿ ಇವೆ. ಕನ್ನಡದ ಶೈಲಿ ಛಂದಸ್ಸುಗಳಿಗಿಂತ [illegible] ಸಂಸ್ಕೃತ ಪದಗಳ ಹೆಚ್ಚಳವಿದೆ.

ಅಂದರೆ ೬೩೫-೭೮೨ ರೊಳಗೆ ರಚಿಸಲ್ಪಟ್ಟಿರಬಹುದಾದ ಹಲ್ಮಿಡಿಯ ಶಾಸನದ ಪೂರ್ವದಲ್ಲಿಯೇ ಸಂಸ್ಕೃತ ಮಿಶ್ರಿತವಾದ ಕನ್ನಡ ಸಾಹಿತ್ಯವು ಇದ್ದಿರಬೇಕು.

ಶಾಸನಗಳ ವಿಷಯವು ತಾತ್ಕಾಲಿಕ ಚರಿತ್ರೆಯನ್ನು ಮೂಡಿಸುವಂತೆ ಆದರ ರಚನೆಯು ಆಯಾ ಕಾಲದ ಭಾಷೆಯ ಮಾದರಿಯನ್ನು ಮೂಡಿಸುತ್ತದೆ. ಅಂದರೆ ಕ್ರಿಸ್ತಶಕ ೫ನೆಯ ಶತಮಾನದಲ್ಲಿ ಆಗಲೇ ಪದ್ಯ ರಚನೆ ಕನ್ನಡ ಸಾಹಿತ್ಯದಲ್ಲಿ ಆಗುತ್ತಿರಬೇಕು. ಕನ್ನಡ ಭಾಷೆ ಸಾಹಿತ್ಯಗಳು ಸಾಕಷ್ಟು ಸಂಸ್ಕೃತದ ಪ್ರಭಾವದಿಂದಲೇ ಹುಟ್ಟಿ ಬೆಳೆದಿರಬೇಕು. ಆದರೂ ಅಚ್ಚಗನ್ನಡ ದೇಶಿ ಹಾಗೂ ಛಂದಸ್ಸಿನ ಎಳೆಗಳನ್ನು ಕನ್ನಡದ ನೇಯ್ಗೆಯಲ್ಲಿ ಗುರುತಿಸ ಬಹುದು. ತ್ರಿಪದಿ ಬೆದಂಡೆ-ಚತ್ತಾಣಗಳು ಕನ್ನಡದ ವಿಶಿಷ್ಟ ಕಾವ್ಯರೂಪ ಗಳಾದರೂ ವೃತ್ತ ಕಂದಗಳ ಜೊತೆಗೆ ಮಾತ್ರ ಅಚ್ಚಗನ್ನಡ ಛಂದಸ್ಸಿಗೆ ಎಡೆ ದೊರೆತಿದೆ. ಸಂಸ್ಕಾರ ಹೊಂದಿದ ಶಾಸನ ಗದ್ಯ ಇಲ್ಲವೇ ಪದ್ಯವು ತನ್ನ ಕಾಲಕ್ಕಿಂತ ಒಂದೆರಡು ಶತಮಾನಗಳ ಹಿಂದೆಯಾದರೂ ಭಾಷೆ, ಸಾಹಿತ್ಯ ಬೆಳೆದಿರಬೇಕೆಂಬುದನ್ನು ತೋರಿಸುತ್ತದೆ.

ಹಲ್ಮಿಡಿಯ ಶಾಸನದಿಂದ (೧) ಪ್ರೌಢವಾದ ಕನ್ನಡವು ೫ನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಚೆನ್ನಾಗಿ ಬೆಳೆದಿತ್ತು. (೨) ಬಳಕೆಯಲ್ಲಿ ಶುದ್ಧ ಕನ್ನಡವಿದ್ದರೂ ಪಂಡಿತ ಬರವಣಿಗೆಯು ಸಂಸ್ಕೃತಮಯವಾಗಿತ್ತು. (೩) ವ್ಯಾಕರಣನಿಯಮ ನಿಬಂಧನೆಗೊಳಗಾದ ಪೂರ್ವದ ಕನ್ನಡ ಚೆನ್ನಾಗಿ ಬಲಿತ ಭಾಷೆಯಾಗಿತ್ತು (೪) ಕನ್ನಡ ಭಾಷೆ ಹಾಗೂ ವಾಙ್ಮಯಗಳು ಕೆಲ ಶತಮಾನಗಳ ಹಿಂದೆಯೇ ಬೆಳೆದು ಬಂದಿರಬೇಕು. ಇದರಲ್ಲಿಯ "ಪೆತ್ತಜಯನ್" "ಪೊಗಳೆ ಪೊಟ್ಟಣ" ಗಳು ಸಂಸ್ಕೃತದ ಪ್ರಭಾವಕ್ಕೆ ಸಾಕ್ಷಿಯಾಗಿವೆ.

ದುರ್ವಿನೀತನ ಚರಿತ್ರಾಂಶವುಳ್ಳ ಕ್ರಿ. ಶ. ೪೮೦ ರಲ್ಲಿಯ ಗಂಗರಾಜರ ಶಾಸನವು ಪೂರ್ವದ ಹಳಗನ್ನಡದ್ದಾಗಿದೆ. ಬದಾಮಿಯ ಚಾಲುಕ್ಯರಾಜ ಮಂಗಲೀಶನ ಕ್ರಿ. ಶ. ೫೭೮ರ ಶಾಸನದಲ್ಲಿ ಷಷ್ಠಿಯ ದೀರ್ಘಾದೇಶ ಮುಂತಾಗಿ ಹಳನುಡಿಯ ಪಡಿಯಚ್ಚಿದೆ. ಇವೆಲ್ಲ ಸಾಹಿತ್ಯ ಗುಣಗಳಿಲ್ಲದವುಗಳು.

ಕ್ರಿಸ್ತಶಕ ೭ನೆಯ ಶತಮಾನದಲ್ಲಿಂದ ಮಾತ್ರ ಸಾಹಿತ್ಯ ಗುಣವುಳ್ಳ ಹೇರಳವಾದ ಶಾಸನಗಳನ್ನು ಬದಾಮಿ ಹಾಗೂ ಶ್ರವಣಬೆಳ್ಗೊಳಗಳಲ್ಲಿ ಕೆತ್ತ

ಲಾಗಿದೆ. ಕಪ್ಪೆ ಅರಭಟ್ಟನ ಸ್ವಭಾವ ಚಿತ್ರವುಳ್ಳ "ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ" ಎಂಬ ಬದಾಮಿಯ ಶಾಸನವು ಅನೇಕ ದೃಷ್ಟಿಯಿಂದ ಸ್ಮರಣೀಯವಾಗಿದೆ. ಕನ್ನಡದ ಛಂದಸ್ಸಿನ ತಾಯಿಬೇರಾದ ತ್ರಿಪದಿಯ ಮೊಟ್ಟ ಮೊದಲನೆಯ ರೂಪವು ಅದರಲ್ಲಿದೆ ಅದರಲ್ಲಿ. ಭಾವಗೀತ ಸತ್ವವೂ ತುಂಬಿದೆ. ಸಾಹಿತ್ಯ ಗುಣವಲ್ಲದೆ ಒಬ್ಬ ನಟ ಹಾಗೂ ಸಾಹಿತ್ಯಕನ ವರ್ಣನೆಯು ಪಟ್ಟದಕಲ್ಲಿನ ೮ನೆಯ ಶತಮಾನದ ಒಂದು ಶಾಸನದಲ್ಲಿ ದೊರೆಯುತ್ತದೆ.

ಗಂಗರಾಜನಾದ ೨ನೆಯ ಮಾಧವನು ದತ್ತಕ ಸೂತ್ರದ ಮೇಲೆ ಗ್ರಂಥವನ್ನು ರಚಿಸಿದಂತೆ ಪ್ರಾಚೀನ ಗಂಗ ಶಾಸನದಲ್ಲಿ ಹೇಳಿದೆ. ಅದರ ಕಾಲ ೩ ನೆಯ ಶತಮಾನವಿರಬೇಕು. ಅದು ಕನ್ನಡ ಶಾಸನವೆಂದು ಶ್ರೀ ಇ. ಪಿ. ರಾಯಿಸರ ಅಭಿಪ್ರಾಯವಿದೆ. ಕ್ರಿಸ್ತಶಕ ೬೩೪ ರಲ್ಲಿ ಐಹೊಳೆ ಶಾಸನವನ್ನು ಬರೆದ ರವಿಕೀರ್ತಿಯ ಸಾಹಿತ್ಯ ಪ್ರತಿಭೆಯೂ ಗಣನೀಯವಾಗಿದೆ.

ಶಾಸನಗಳು ಕನ್ನಡ ನಾಡಿನಲ್ಲಿ ಹೇರಳವಾಗಿ ದೊರೆಯುತ್ತವೆ. ಶಿಲಾಭೇರಿ ಎಂಬ ಭಾವಗೀತೆಯಲ್ಲಿ ಕುವೆಂಪು ಅವರು ಅವುಗಳ ಸತ್ವವನ್ನು ಚನ್ನಾಗಿ ಬಿಂಬಿಸಿದ್ದಾರೆ. ಕೆಲ ಮುಖ್ಯ ಶಾಸನಗಳ ಅವತರಣಿಕೆಗಳನ್ನು ಉದ್ಧರಿಸುವ ಮೊದಲು ಶಾಸನಗಳಲ್ಲಿ ಪ್ರಾಕೃತ ಸಂಸ್ಕೃತಗಳ ಹೇರಳವಾದ ಮಿಶ್ರಣವಿತ್ತೆಂದೂ ಹಳಗನ್ನಡ ವ್ಯಾಕರಣ ನಿಯಮಗಳಿಂದಲೂ ಸಿದ್ಧಮಾಡಲಾಗದ ಕೆಲ ಅಪೂರ್ವ ಪದಗಳು ದೊರೆಯುವದರಿಂದ ಪೂರ್ವದ ಹಳಗನ್ನಡಕ್ಕೆ ವ್ಯಾಕರಣವೂ ಬೇರೆಯಾಗಿರಬೇಕೆಂದೂ ಇಲ್ಲದಿದ್ದರೆ ಹೆಚ್ಚಾಗಿ ಬಳಕೆಯ ಮಾತುಗಳನ್ನು ಶಾಸನಗಳಲ್ಲಿ ಬಳಸುತ್ತಿರಬೇಕೆಂದೂ ಅದೇ ಕಾರಣದಿಂದಲೆ ಜನಪದ ಸಾಹಿತ್ಯದ ಛಂದೋ ರೂಪಗಳಲ್ಲಿ ಅವುಗಳನ್ನು ಬರೆಯಲಾಯಿತೆಂದೂ ಹೇಳಬಹುದಾಗಿದೆ.

ಅತ್ಯಂತ ಪ್ರಾಚೀನ ಕನ್ನಡ (ಹಲ್ಮಿಡಿ) ಶಾಸನ

ಜಯತಿ ಶ್ರೀ ಪರಿಷ್ವಙ್ಗ ಶಾರ್ಙ್ಗ (ವ್ಯಾನತಿ) ರಚ್ಯುತಃ
ದಾನವಾಕ್ಷ್ಣೋಯು ಗಾನ್ತಾಗ್ನಿಃ (ಶಿಷ್ಟಾನಾನ್ತು) ಸುದರ್ಶನಃ

೫ನೆಯ ಶತಮಾನದ ಶಾಸನದ ಮಾದರಿ

ಬಿಣಮಣಿ (ಫಲಮಣಿ) ಅನ್ತುಭೋಗಿ ಬಿಣ (ಫಣ) ದುಳ್ಮಣಿ
ಮಿಲ್ಮನದೋನ್

ರಣ ಮುಖದುಳ್ಳ ಕೋಲಂ ನೆರಿಯಕ್ಕ್ರ್ಕ ಮನಿಸ್ಯಂ ಗುಣನ್ |
ಪ್ರಣಯಿ ಜನಕ್ಕೆ ಕಾಮನಸಿ ತೋತ್ಪಲವರ್ಣ್ಣನವನ್ |
ಗುಣಮಧುಃಕಾಂಕ್ಕ ದಿವ್ಯ ಪುರುಷನ್ ಪುರುಷ ಪ್ರವರನ್ |

ಕಪ್ಪೆ ಅರಭಟ್ಟನ ಸ್ವಭಾವ ಚಿತ್ರದ ಬದಾಮಿಯ ಶಾಸನ

ಸಾಧುಗೆ ಸಾಧು ಮಾಧುರ್ಯನ್ಗೆ ಮಾಧುರ್ಯಂ |
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ |
ಮಾಧವ ನೀತನ್ ಪೆರನಲ್ಲ ||
ಒಳ್ಳಿತ್ತ ಕೆಯ್ವೊದಾರ್ ಪೊಲ್ಲದುಮದರಂತೆ |
ಒಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ |
ಮಿಲ್ಲಿ ಸಂದಿಕ್ಕು ಮದು ಒಂದು ||
ಕಟ್ಟಿದ ಸಿಂಘಮನ್ ಕೆಟ್ಟೋದೇ ನೆಮಗೆಂದು |
ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕ್ಕಳ್ |
ಕೆಟ್ಟರ್ ಮೇಣ್ ಸತ್ತರವಿಚಾರಂ ||

ಪ್ರಶ್ನೆ ೨ — ಕವಿರಾಜ ಮಾರ್ಗದಿಂದ ಅದರ ಪೂರ್ವದಸಾಹಿತ್ಯದ ಬಗ್ಗೆ ತಿಳಿದು ಬರುವ ಸಾಹಿತ್ಯದ ಅಂಶಗಳೇನು ? ವಿವರಿಸಿರಿ.

ಉತ್ತರ — 'ಕವಿರಾಜ ಮಾರ್ಗ'ವು ಉಪಲಬ್ಧವಾದ ಮೊದಲನೆಯ ಗ್ರಂಥ. ಅನೇಕ ದೃಷ್ಟಿಯಿಂದ ಅದು ಬೆಲೆಯುಳ್ಳ ಗ್ರಂಥ. ಅದರ ಮೇಲಿಂದ ಅದರ ಹಿಂದಿನ ಸಾಹಿತ್ಯದ ಲಕ್ಷಣಗಳೇನು? ಅದರ ಸತ್ಯವೇನು? ಕನ್ನಡ ಆಗ ಬೆಳೆಯಿಸಿಕೊಂಡ ತನ್ನ ತನವೇನು ? ಇವೇ ಮೊದಲಾದ ಪ್ರಶ್ನೆಗಳನ್ನು ಕಂಡು ಕೊಳ್ಳಬಹುದಾಗಿದೆ. ಆದರೂ ಉಪಲಬ್ಧವಾಗದ ಬಹುಭಾಗ ಸಾಹಿತ್ಯವೇ ಅದರ ಕೇವಲ ಛಾಯೆಯಿಂದ ತನ್ನ ಸುಗಂಧವನ್ನು ಸೂಸುತ್ತದೆ.

ಇದು ದಂಡಿಯ ಕಾವ್ಯಾದರ್ಶನ ಅನುವಾದವೇ ಆಗಿರದೆ ರೂಪಾಂತರ ವಾಗಿದೆ. ಅದು ಸ್ವತಂತ್ರವೂ ಆಗಿದೆ. ಕನ್ನಡ ನಾಡು ನುಡಿಗಳ ದೃಷ್ಟಿಯಿಂದ ಅದು ಕನ್ನಡ ನಾಡು ನುಡಿಗಳ ಸ್ವರೂಪ, ಸಾಹಿತ್ಯ ಸ್ಥಿತಿ, ಕವಿಗಳಿಗೆ ರಾಜ ಮಾರ್ಗವನ್ನು ತೋರುವ ವಿಮರ್ಶಾತ್ಮಕ ವಿಚಾರ ಪ್ರಣಾಲಿಗಳಿಂದ ಸ್ವತಂತ್ರ

ವಾದ ಮತ್ತು ಬೆಲೆಯುಳ್ಳ ಪ್ರಮಾಣಗ್ರಂಥವಾಗಿದೆ. ಇದರಿಂದ ನಮ್ಮ ಸಾಹಿತ್ಯೋದಯದ ಬಗ್ಗೆ ಜ್ಞಾನವು ಅಧಿಕವಾಗುತ್ತದೆ.

'ಕನ್ನಡ ಗಬ್ಬಂಗಳೊಳ್' ಚಿರಂತನಾಚಾರ್ಯರು ಅಗಣಿತಗುಣ ಗದ್ಯ ಪದ್ಯ ಸಮ್ಮಿಶ್ರಿತವನ್ನು ಗದ್ಯ ಪದ್ಯ ಪ್ರಣೀತಿಯಿಂದ ಹೇಳುತ್ತಾರೆ ಎಂದಿರುವದರಿಂದ ಆಗ ಗದ್ಯ ಪದ್ಯ ಮಿಶ್ರಿತ ಸಾಹಿತ್ಯವಿತ್ತೆಂದು ತಿಳಿದು ಬರುತ್ತದೆ. ಚತ್ತಾಣ ಬೆಂದಂಡೆಗಳೆಂಬ ಹೆಸರಾದ ಕಬ್ಬದಲ್ಲಿ ಪುರಾತನ ಕವಿಗಳು ಒಡಂ ಒಡಂ ಮಾಡಿದರು ಎಂಬುದರ ಮೇಲಿಂದ ಕನ್ನಡದ ಛಂದಸ್ಸಿನಲ್ಲಿ ಬರೆದ ಪ್ರಸಿದ್ಧ ಕವಿಗಳು ಇದ್ದರೆಂದೂ ವಿದಿತವಾಗುತ್ತದೆ. 'ಪುರಾಣ ಕವಿಗಳ್' 'ಪೂರ್ವಾಚಾರ್ಯರ್', 'ಕವಿವೃಷಭರಾ ಪ್ರಯೋಗಂಗಳ್', 'ಪೂರ್ವ ಕಾವ್ಯ ರಚನೆಗಳಂ', 'ಪರಮ ಕವಿ ಪ್ರಧಾನರಾ ಕಾವ್ಯಂಗಳ್', 'ಪುರಾಣ ಕಾವ್ಯ ಪ್ರಯೋಗದೊಳ್', 'ಬಗೆದು ನೋಡಿ ಪುರಾಣ ಕವಿಪ್ರಭು ಪ್ರಯೋಗಾವಿಲ ಸದ್ಗುಣೋದಯಮಂ' ಮೊದಲಾದ ಪ್ರಯೋಗಗಳು ಬಹು ಪುರಾತನ ಕಾಲದಲ್ಲಿಯೇ ಕನ್ನಡದಲ್ಲಿ ಪುರಾಣಗಳೂ, ಕಾವ್ಯಗಳೂ ನಿರ್ಮಾಣವಾಗಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ.

ಕನ್ನಡ ಭಾಷೆ ಹಾಗೂ ಸಾಹಿತ್ಯವು ಆ ಕಾಲದಲ್ಲಿ ಒಂದು ಮಟ್ಟಕ್ಕೆ ಬಂದು ನಿಂತಿತ್ತೆಂದು ತೋರಿಸುವ ಒಂದು ಪದ್ಯವೂ ಇಲ್ಲಿ ಇದೆ. 'ನೆಲಸಿದ ಕಾವ್ಯವು.... ಪಳಗನ್ನಡವನ್ನು ಪೊಲಗಿಡಿಸಿ ನುಡಿವರು' ಎಂದು ಇರುವದನ್ನು ವಿಮರ್ಶಿಸಿದರೆ 'ಕವಿರಾಜ ಮಾರ್ಗ'ದ ಕಾಲಕ್ಕೆ ಪಳಕನ್ನಡ ಎಂಬ ಸ್ವರೂಪ ಕನ್ನಡಕ್ಕೆ ಇತ್ತೆಂಬುದು ನಿರ್ವಿವಾದವಾಗಿ ವ್ಯಕ್ತವಾಗುತ್ತದೆ.

ಇದರಲ್ಲಿ ಕನ್ನಡ ನಾಡಿನ ವಿಸ್ತಾರ, ತಿರುಳ್ಗನ್ನಡ ಸೀಮೆ, ಕನ್ನಡ ನಾಡವರ ಹಿರಿಮೆಯನ್ನು ಹೇಳುತ್ತ ಚೆದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದು ಅವರನ್ನು ಹೊಗಳಲಾಗಿದೆ. ಆ ಕಾಲದ ಕನ್ನಡಿಗರಲ್ಲಿ ಅಪಂಡಿತರೂ ಕೂಡ ಸಹೃದಯರೂ ಸಹಜ ಕವಿಗಳೂ ಆಗಿದ್ದರೆಂದೂ ಆಗ ಕನ್ನಡ ಕಾವ್ಯ ಪರಂಪರೆ ಸಮೃದ್ಧವೂ ಅವ್ಯಾಹತವೂ ಆಗಿದ್ದಿತೆಂದು ತಿಳಿದು ಬರುತ್ತದೆ.

'ನೃಪತುಂಗದೇವ ಮತ', 'ಅತಿಶಯ ಧವಳೋಕ್ತಿ ಕ್ರಮ' ಇವನ್ನು ಅನುಸರಿಸಿ ಅಭಿಪ್ರಾಯ ಹೇಳಿದಂತಿದೆ. ಪೂರ್ವಶಾಸ್ತ್ರ ವಿಧಿಯನ್ನು ತೆರೆದಿರೆ

ಕನ್ನಡದಲ್ಲಿ ಇಷ್ಟು ಹೇಳುವೆ, ಪುರಾಣ ಕವಿಗಳ ವಿದಿತಾಂತರವನ್ನು ಹೇಳುತ್ತವೆ ಎನ್ನುವದರ ಮೇಲಿಂದ ಈ ಮೊದಲು ಕನ್ನಡದಲ್ಲಿ ಅಲಂಕಾರ ಗ್ರಂಥಗಳು ಇದ್ದವೆಂದು ಊಹಿಸಬಹುದಾಗಿದೆ. ಸಂಸ್ಕೃತ ಅಲಂಕಾರಗಳ ಅಭಿಪ್ರಾಯಕ್ಕೆ ಪೂರಕವಾಗಿ ಕನ್ನಡ ಮಾತುಗಳು ಇಲ್ಲಿ ಇವೆ. ಪೂರ್ವ ಶಾಸ್ತ್ರವಿಧಿಯೆಂದರೆ ಸಂಸ್ಕೃತ ಲಾಕ್ಷಣಿಕರ ವಿಧಿಯೇ ಆಗಿದೆ.

ಕನ್ನಡದ ಗದ್ಯ ಪದ್ಯ ಸಾಹಿತ್ಯದ ಸಮೃದ್ಧಿಯನ್ನು ತೋರಿಸಲು ಕವಿಗಳ ಹೆಸರುಗಳನ್ನು ಕೊಡಲಾಗಿದೆ. "ವಿಮಳೋದಯ, ನಾಗಾರ್ಜುನ, ಜಯಬಂಧು ದುರ್ವಿನೀತಾದಿಗಳ್ ನೆಗಳ್ಚಿ ಗದ್ಯಾಶ್ರಮಪದ ಗುರುತಾ ಪ್ರತೀತಿಯಂ ಕೆಯ್ ಕೊಂಡರ್" ಎಂಬಲ್ಲಿ ಪ್ರಸಿದ್ಧ ಗದ್ಯಕಾರರ ಹೆಸರುಗಳಿವೆ. ಕನ್ನಡಗಬ್ಬಗಳಲ್ಲಿ ಚಿರಂತನಾಚಾರ್ಯರು ಹೇಳಿದ ಅಗಣಿತ ಗುಣದ ಗದ್ಯ ಕಥೆಯ ಉಲ್ಲೇಖ, ಎಲ್ಲ ಕಲೆ, ಭಾಷೆ, ಲೋಕ, ಶಾಸ್ತ್ರ ಮುಂತಾದ್ದರ ವರ್ಣನೆಯುಳ್ಳ ವಸ್ತು ವಿಸ್ತರವನ್ನು ಅರಿಯದವನಿಂದ ಗ್ರಂಥ ರಚನೆ ಆಗದೆಂಬ ಉಕ್ತಿ ಇವು ಹಿಂದಿನ ಪದ್ಯದಲ್ಲಿರುವದನ್ನು ನೆನೆದರೆ ಕನ್ನಡ ಗದ್ಯಕಾರರು ಅಸಾಮಾನ್ಯರೆಂದು ತಿಳಿಯದೇ ಇರಲಾರದು. ಆದರೆ ಅವರು ಬರೆದಿರುವ ಗ್ರಂಥಗಳ ನಾಮ ನಿರ್ದೇಶ ಇಲ್ಲಿ ಇಲ್ಲ.

ವಿಮಲನು ೭೭೭ ರಲ್ಲಿ ವಿಮಲಚಂದ್ರ ಗುರುವಾಗಿರಬೇಕು. ಉದಯ ನಾರೋ ತಿಳಿದಿಲ್ಲ. ನಾಗಾರ್ಜುನನು "ನಾಗಾರ್ಜುನ ಕಕ್ಷಪುಟ" ಎಂಬ ವೈದ್ಯ ಗ್ರಂಥದ ಕರ್ತೃವಾಗಿರಬೇಕು. ದುರ್ವಿನೀತನು ಗಂಗರಾಜನು "ಅನೇಕ ಕಾವ್ಯ ಕಥಾನಾಟಕ ಪ್ರಣಯನ ಪ್ರರೂಢ ಪಾಟವೇನ" ಎಂಬ ಅವನ ಸ್ತುತಿಯೇ ಅವನ ಹಿರಿಮೆಗೆ ಸಾಕ್ಷಿಯಾಗಬಲ್ಲದು. ಇವನು ಬೃಹತ್ ಕಥೆಯನ್ನು "ವಡ್ಡ ಕಥಾ" ಎಂಬ ಹೆಸರಿನಿಂದ ಕನ್ನಡಿಸಿರಬೇಕು. "ಶಬ್ದಾವತಾರ" ಇವನ ಮೂರನೆಯ ಗ್ರಂಥ. ಇದು ವ್ಯಾಕರಣವಾಗಿರಬೇಕು.

ಪದ್ಯಕಾರರಲ್ಲಿ ಪರಮ ಶ್ರೀವಿಜಯ, ಕವೀಶ್ವರ, ಪಂಡಿತ ಚಂದ್ರ, ಲೋಕಪಾಲಾದಿಗಳನ್ನು ಉಲ್ಲೇಖಿಸಲಾಗಿದೆ. ಆದರ "ನಿರತಿಶಯ ವಸ್ತು ವಿಸ್ತರ ವಿರಚನೆ ತದಾದ್ಯ ಕಾವ್ಯಕ್ಕೆ ಎಂದುಂ ಲಕ್ಷ್ಯಂ" ಎಂದುದರಿಂದ ಅವರೆಲ್ಲರೂ ಮಹಾಕಾವ್ಯ ರಚನೆಯಿಂದ ಶ್ರೇಷ್ಠತ್ವವನ್ನು ಪಡೆದರೆಂದು ಧ್ವನಿತವಾಗುತ್ತದೆ. ಶ್ರೀ ದ. ರಾ. ಬೇಂದ್ರೆ ಅವರ ಊಹೆಯಂತೆ ಶ್ರೀವಿಜಯ ಅಂದರೆ ಸುಮಂತಭದ್ರ, ಕವೀಶ್ವರ ಅಂದರೆ ಕವಿಪರಮೇಷ್ಠಿ, ಪಂಡಿತ ಅಂದರೆ

ಪೂಜ್ಯವಾದ ಅವರಾಗಿದ್ದಾರೆ. ಚಂದ್ರನು ಮಳೆಯ ಶಾಸ್ತ್ರ ಬರೆದ 'ಚಂದಿರ ಭಟ್ಟ'ನಾಗಿರಬೇಕು. ಇವನು ಭಾಗವತ ಧರ್ಮದ ಬ್ರಾಹ್ಮಣ ಕಾವ್ಯವನ್ನೂ ಪ್ರಾರಂಭಿಸಿದನು. ದುರ್ಗಸಿಂಹ ಮೊದಲಾದ ವೈಷ್ಣವ ಕವಿಗಳು ಇವನನ್ನು ನೆನೆದಿದ್ದಾರೆ. ಪರ್ಯಾಯವಾಗಿ ಜೈನರೂ ಇವನನ್ನು ಸ್ತುತಿಸಿದ್ದಾರೆ.

ಈ ಗ್ರಂಥಕಾರರಲ್ಲದೆ ಅವತರಣವಾಗಿ ಬೇರೆ ಕೆಲವು ಪದ್ಯಗಳನ್ನೂ ಎತ್ತಿ ಕೊಳ್ಳಲಾಗಿದೆ. ಕನ್ನಡ ಜೈನ ರಾಮಾಯಣದ ಪದ್ಯಗಳನ್ನು ಇಲ್ಲಿ ಉದ್ಧರಿಸ ಬಹುದು. ಇಲ್ಲಿ ಸಂಸ್ಕೃತ ಸಮಾಸ ಪ್ರಚುರತೆಯಿದೆ. ಇವುಗಳ ಶೈಲಿ ಕವಿರಾಜ ಮಾರ್ಗವಿದೆ ಶೈಲಿಗೆ ಭಿನ್ನವಿದ್ದಂತೆ ತೋರುತ್ತದೆ. ಈ ಜೈನ ರಾಮಾಯಣದಲ್ಲಿ ವಾಲ್ಮೀಕಿ ರಾಮಾಯಣದ ಪ್ರಭಾವ ಕಂಡು ಬರುತ್ತದೆ. ಇವೇ ಮೊದಲಾದ ವಿವೇಚನೆಗಳಿಂದ ಕವಿರಾಜ ಮಾರ್ಗಕ್ಕಿಂತ ಮೊದಲು ಸಾಹಿತ್ಯ ಸೃಷ್ಟಿಯಾಗಿ ತ್ತೆಂದೂ ೪-೫ ಶತಮಾನಗಳ ಹಿಂದಿನಿಂದ ಅದು ಪರಂಪರೆಯಾಗಿ ಬೆಳೆಯು ತ್ತಿರಬೇಕೆಂದೂ ಊಹಿಸಲು ಅವಕಾಶವಿದೆ.

ಆಗ ಹಳಗನ್ನಡ ಪ್ರವರ್ಧಮಾನ ಸ್ಥಿತಿಯಲ್ಲಿತ್ತೆಂದು ತಿಳಿಯಲು ಎಡೆ ಯಿದೆ. ಅಲ್ಲಿ ವ-ಮಕಾರಗಳ ಪ್ರಾಸವಿದೆ. ಈ ಪದ್ಯ ಹಳೆಯ ಕೃತಿಯಿಂದ ಎತ್ತಿದ್ದು ಇದು ಕೃಚಿತ್ಪ್ರಯೋಗ. ಕವಿರಾಜ ಮಾರ್ಗದಲ್ಲಿ ಹೇಳಿದ ಪ್ರಾಸ ನಿಯಮ ಇದಲ್ಲ. ಮಮಗಳಲ್ಲಿಯ ರೂಪನಾದೃಶ್ಯದಂತೆ ಉಚ್ಚಾರ ಸಾಮ್ಯವೂ ಒಮ್ಮೆ ಇರಬೇಕಷ್ಟೇ. ಕಾವ್ಯ, ಶಾಸನಗಳಲ್ಲಿ ಇದನ್ನು ಬಳಸಲಾಗಿದೆ.

ಕವಿರಾಜ ಮಾರ್ಗದ ಮೊದಲು ಕನ್ನಡದ ವ್ಯಾಕರಣಗಳು ಇರಬೇಕು. ಅದಕ್ಕೂ ಮೊದಲು ಸಾಹಿತ್ಯವೂ ಇರಬೇಕು. ಸಂಸ್ಕೃತದಲ್ಲಿ ದೊರೆಯದ ಕೆಲ ಅಕ್ಷರ ವೃತ್ತಗಳನ್ನು ಕನ್ನಡದಲ್ಲಿ ಬಳಸಲಾಗಿದೆ. ಆದರೆ ಕನ್ನಡದಲ್ಲಿ ಗದ್ಯ ಕಥೆಗಳೂ ಬೆದಂಡೆ-ಚತ್ತಾಣಗಳೂ ಇದ್ದುವೆಂದು ಹೇಳಿದೆ. ಒಟ್ಟನಲ್ಲಿ ೩೦೦ ವರ್ಷಗಳ ಹಿಂದಿನಿಂದಾದರೂ ಕನ್ನಡದಲ್ಲಿ ಉತ್ಕೃಷ್ಟವಾದ ಬಹುಮುಖ ವಾದ ಸಾಹಿತ್ಯವಿದ್ದಿರಬೇಕು. ಆದರೆ ವ್ಯಾಕರಣ, ಛಂದಸ್ಸು, ಅಲಂಕಾರ ಗ್ರಂಥ ಗಳು ಮಾತ್ರ ಇದ್ದವೆಂದು ಹೇಳಲು ಸಾಕಷ್ಟು ಆಧಾರಗಳು ದೊರೆಯವು. ಕವಿ ರಾಜ ಮಾರ್ಗವು ಪ್ರೌಢವಾದ ಗದ್ಯಪದ್ಯ ಕಾವ್ಯಕ್ಕೆ ಮಾರ್ಗದರ್ಶಿಯಾಗಿರು ವಂತೆ ದೇಶಿ ಮಾರ್ಗಗಳ ಪೂರ್ವ ಪರಂಪರೆಗೆ ಸಾಕ್ಷಿಯೂ ಆಗಿರುತ್ತದೆ.

ಪ್ರಶ್ನೆ ೩— ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಭಾಗಗಳನ್ನು ಮಾಡಬಹುದೇ? ಹಾಗಿದ್ದರೆ ಈ ದಿಶೆಯಲ್ಲಿ ಅನುಸರಿಸಬೇಕಾದ ಮಾರ್ಗವಾವುದು ? ಉದಾಹರಣೆಗಳಿಂದ ವಿವರಿಸಿರಿ.

ಉತ್ತರ— ಕನ್ನಡ ಸಾಹಿತ್ಯಕ್ಕೆ ಸುಮಾರು ೨೦೦೦ ವರ್ಷಗಳ ಇತಿಹಾಸವಿದೆ. ಇಲ್ಲಿ ತರತರದ ರೂಪಗಳೂ ಹಲವಾರು ಕೃತಿಗಳೂ ಇವೆ. ಆದ್ದರಿಂದ ಅದರ ಅಭ್ಯಾಸ ಸುಗಮವಾಗಲು ವಿಭಾಗಗಳು ಅವಶ್ಯ ಹಾಗೂ ಅಗತ್ಯ. ಆದರೆ ವಿಭಾಗಗಳನ್ನು ಮಾಡಲು ಒಂದು ಯೋಗ್ಯ ಸೂತ್ರಬೇಕು. ಕ್ರಮಬೇಕು, ತತ್ವ ತಳಹದಿಬೇಕು. ವಿಭಾಗ ಮಾಡುವಲ್ಲಿ ಸಾಕಷ್ಟು ಮತಭೇದವೂ ಇದೆ. ಕನ್ನಡ ಸಾಹಿತ್ಯದ ಸ್ವರೂಪ, ಕಾಲಕಾಲದ ವೈಶಿಷ್ಟ್ಯಗಳು ಮೊದಲಾದವುಗಳ ಬಗ್ಗೆ ದೃಷ್ಟಿದೋಷವು ಕಂಡು ಬರುತ್ತದೆ. ಆದುದರಿಂದಲೇ ಈ ಬಗ್ಗೆ ಸೂಕ್ಷ್ಮ ವಿವೇಚನೆ ಅತ್ಯಗತ್ಯವಾಗಿದೆ.

ಕರ್ನಾಟಕ ಕವಿಚರಿತೆಯನ್ನು ಒದಗಿಸಿದ ದಿವಂಗತ ಆರ್. ನರಸಿಂಹಾಚಾರ್ಯರು ಕನ್ನಡ ಕವಿಗಳನ್ನು ಸ್ಥೂಲವಾಗಿ ಜೈನರು, ವೀರಶೈವರು, ವೈಷ್ಣವರು ಎಂದು ವಿಂಗಡಿಸಿ, ಬೇರೆ ಬೇರೆ ಕಾಲಗಳಲ್ಲಿ ಆಯಾಮತೀಯ ಕವಿಗಳು ವಿಶೇಷ ಗ್ರಂಥ ರಚನೆ ಮಾಡಿದ್ದನ್ನು ಗಮನಿಸಿ ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗವೆಂದು ಕಾಲ ವಿಭಾಗ ಮಾಡಿದರು. ಆದರೆ ಆಯಾ ಕಾಲಗಳಲ್ಲಿ ಇತರ ಕವಿಗಳು ಇರಲಿಲ್ಲವೆಂದಲ್ಲ. ಸಾಹಿತ್ಯ ಆರಂಭದಿಂದ ೧೨ನೆಯ ಶತಮಾನದ ಮಧ್ಯದ ವರೆಗೆ ಜೈನಯುಗ. ಅಲ್ಲಿಂದ ೧೫ನೆಯ ಶತಮಾನದ ವರೆಗೆ ವೀರಶೈವಯುಗ ಮುಂದೆ ೧೯ ನೆಯ ಶತಮಾನದ ವರೆಗೆ ಬ್ರಾಹ್ಮಣ ಯುಗವೆಂದು ಹೇಳಲಾಯಿತು.

ಇ. ಪಿ. ರಾಯಸರು ಕನ್ನಡ ಸಾಹಿತ್ಯವನ್ನು ಶಾಖೆಗಳನ್ನು ಬರಮಾಡಿಕೊಂಡು ಹಿಗ್ಗುತ್ತ ಹೊರಟ ಹೊಳೆಗೆ ಹೋಲಿಸಿದ್ದಾರೆ. ಧಾರ್ಮಿಕ ಹಿನ್ನಲೆಯಲ್ಲಿ ಮಾತ್ರವಲ್ಲದೆ ಸಾಹಿತ್ಯರೂಪಗಳಲ್ಲಿಯೂ ಈ ಯುಗಗಳು ಬೇರೆ ಬೇರೆಯಾಗಿವೆ. ಜೈನ ಗ್ರಂಥಗಳು ಸಾಮಾನ್ಯವಾಗಿ ಚಂಪೂ ರೂಪದಲ್ಲಿವೆ. ವೀರಶೈವ ಕೃತಿಗಳಲ್ಲಿ ಗದ್ಯ ಹೆಚ್ಚಾಗಿದ್ದು, ಪದ್ಯ ಬಹುಶಃ ಷಟ್ಪದಿ, ತ್ರಿಪದಿ, ರಗಳೆಗಳಲ್ಲಿದೆ. ದೀರ್ಘವಾದ ಬ್ರಾಹ್ಮಣ ಕೃತಿಗಳು ಷಟ್ಪದಿಯಲ್ಲಿದ್ದರೂ ಚಿಕ್ಕವು ಕೀರ್ತನೆಗಳ ರೂಪದಲ್ಲಿವೆ.

ಕಿಟೆಲ್‌ರವರು ಈ ದಿಶೆಯಲ್ಲಿ ಮತಪರವಾದ ವಿವೇಚನೆಯನ್ನೇ ಮಾಡಿದ್ದಾರೆ. ಅಲ್ಲದೆ ಭಾಷಾ ದೃಷ್ಟಿಯಿಂದ ಜೈನಯುಗದಲ್ಲಿ ಹಳಗನ್ನಡ, ವೀರಶೈವ ಯುಗದಲ್ಲಿ ನಡುಗನ್ನಡ, ಬ್ರಾಹ್ಮಣಯುಗದಲ್ಲಿ ಹೊಸಗನ್ನಡ ಪ್ರಮುಖವಾಗಿತ್ತೆಂದು ಹೇಳಿದ್ದಾರೆ. ಈ ರೀತಿಯಾಗಿ ಮತಧರ್ಮ, ಸಾಹಿತ್ಯರೂಪ, ಭಾಷಾವಸ್ಥೆ ಈ ಮೂರರಿಂದಲೂ ಮೇಲ್ಕಾಣಿಸಿದ ಮೂರು ಯುಗಗಳು ಬೇರೆ ಎಂಬ ವಿಚಾರವು ಬೇರೂರಿದಂತಿದೆ.

ಆದರೆ ಕರ್ನಾಟಕ ಸಾಹಿತ್ಯಚರಿತ್ರೆಯನ್ನು ಐದು ಭಾಗ ಮಾಡಬಹುದು. ಅವೆಂದರೆ (೧) ಮೂಲಕನ್ನಡ ಕಾಲ ಕ್ರಿಸ್ತಶಕ ೭೫೦ರ ವರೆಗೆ (೨) ಹಳಗನ್ನಡ ಕಾಲ ೭೫೦-೧೧೫೦ರ ವರೆಗೆ (೩) ಮಧ್ಯಕನ್ನಡ ಕಾಲ ೧೧೫೦-೧೫೦೦ ರ ವರೆಗೆ (೪) ಹೊಸಗನ್ನಡ ಕಾಲ ೧೫೦೦-೧೮೫೦ ರ ವರೆಗೆ ಹಾಗೂ (೫) ನವಗನ್ನಡಕಾಲ ೧೮೫೦ರ ಮುಂದೆ.

ಮತಾನುಸಾರವಾದ ಕಾಲ ವಿಭಾಗವನ್ನು ಪ್ರತಿಭಟಿಸಿ 'ಕನ್ನಡವಕ್ಕಿ' ಅವರ ಈ ವಿಭಾಗಕ್ರಮವು ಶುದ್ಧ ಸಾಹಿತ್ಯ ದೃಷ್ಟಿಯಿಂದ ಅಷ್ಟು ಸಮರ್ಪಕವಾಗಿಲ್ಲ. ಕಾಲ, ದೇಶ, ಕಾರಣ ನಿಮಿತ್ತಗಳನ್ನು ಲೆಕ್ಕಿಸಿ ಕವಿಕರ್ಮಕ್ಕೆ ಮೂಲ ಕಾರಣವಾದ ಸ್ಫೂರ್ತಿ ವಿಶೇಷವನ್ನು ಗಮನಿಸಿ, ಕಾವ್ಯಕ್ಕೆ ರಸವೇ ಆತ್ಮವೆಂಬುದನ್ನು ಜ್ಞಾಪಕದಲ್ಲಿಟ್ಟುಕೊಂಡು ಕರ್ನಾಟಕ ವಾಙ್ಮಯೇತಿಹಾಸವನ್ನು ಕ್ಷಾತ್ರ ಯುಗ, ಮತಪ್ರಚಾರಕಯುಗ, ಸಾರ್ವಜನಿಕಯುಗ ಮತ್ತು ಆಧುನಿಕಯುಗ ಎಂಬುದಾಗಿ ನಾಲ್ಕು ವಿಭಾಗಗಳನ್ನು ಮಾಡಿದರು.

ಕ್ಷಾತ್ರ ಯುಗದಲ್ಲಿ ಕವಿಕರ್ಮಕ್ಕೆ ವೀರರಸವೇ ಪ್ರಧಾನವಾದ್ದರಿಂದ ಆ ಯುಗಕ್ಕೆ ಆ ಹೆಸರು ಯೋಗ್ಯವೇ ಆಗಿದೆ. ಮತಪ್ರಚಾರಕ ಯುಗದಲ್ಲಿ ಧರ್ಮಗಳು ಒಂದನ್ನೊಂದು ಎದುರಿಸಿದವು, ಹೊಸಮತಗಳು ಉದಯಿಸಿದವು. ಪುರಾಣಗಳ ಬರವಣಿಗೆ ನಡೆಯಿತು. ಸ್ವಮತ ಶ್ರೇಷ್ಠತೆ ಹಾಗೂ ಪರಮತ ದೂಷಣೆಯೂ ನಡೆಯಿತು. ಇಲ್ಲಿ ಶೃಂಗಾರ ರಸವೇ ಪ್ರಧಾನವಾಯಿತು.

ಸಾರ್ವಜನಿಕ ಯುಗದಲ್ಲಿ ಧರ್ಮವನ್ನು ಸಾರ್ವಜನಿಕ ಮಾಡುವ ಸದುದ್ದೇಶದಿಂದ ಮಾಧ್ವಹರಿದಾಸರು ಉದಯಿಸಿದರು. ಇಲ್ಲಿ ಗ್ರಂಥ ರಚನೆ ಸಮಾಜಕ್ಕಾಗಿ, ದೇಶಕ್ಕಾಗಿ ನಡೆಯಿತು. ಸುಲಭವಾದ ಸರಳವಾದ ಸರಣಿಯು ಉಪಯೋಗಿಸಲ್ಪಟ್ಟಿತು. ಭಕ್ತಿರಸವೇ ಈ ಕಾಲದಲ್ಲಿ ಪ್ರಧಾನರಸವಾಯಿತು.

ನಂತರದ ಚರಿತ್ರ ಲೇಖಕರು ನವೀನ ಕ್ರಮಗಳನ್ನು ಸೂಚಿಸಿದರು. ಆರಂಭಕಾಲ, ಪಂಪಯುಗ, ಸ್ವಾತಂತ್ರ್ಯಯುಗ, ಚಿಕ್ಕದೇವರಾಯರ ಕಾಲ, ಸಂಧಿಕಾಲ ಎಂಬ ಸೂಚನೆ ಮುಂದೆ ಬಂದಿತು. ಯಾವ ಕಾಲದಲ್ಲಿಯೂ ಒಂದೇ ಮತದ ಕವಿಗಳು ಇಲ್ಲದ್ದರಿಂದ ಆಯಾ ಕಾಲದ ಶ್ರೇಷ್ಠ ಕವಿಯ ಹೆಸರು ಕೊಡಬೇಕೆಂಬುದೇ ಇಲ್ಲಿಯ ಮುಖ್ಯ ಸೂಚನೆ.

ಇದಲ್ಲದೆ ಕ್ರಿಸ್ತಶಕ ೯೦೦ರ ವರೆಗೆ ಆರಂಭಕಾಲ, ೯೦೦-೧೨೦೦ ಇದು ಚಂಪೂಯುಗ ಅಥವಾ ಪಂಪಯುಗ. ಮುಂದೆ ಬಸವಣ್ಣನವರು ಹೊಸ ಹಾದಿಯನ್ನು ಹಾಕಿಕೊಟ್ಟರು. ವಚನ, ರಗಳೆ ಷಟ್ಪದಿ ಗ್ರಂಥಗಳು ತಲೆದೋರಿದವು. ಭಾಷೆ, ವಿಷಯ ಹಾಗೂ ಛಂದಸ್ಸಿನ ದೃಷ್ಟಿಯಿಂದ ಈ ಕಾಲದಲ್ಲಿ ಸ್ವತಂತ್ರ ಪ್ರವೃತ್ತಿ ಕಂಡು ಬಂದಿತು. ಚಿಕ್ಕದೇವರಾಯರ ಕಾಲದಲ್ಲಿ ಅವರ ಆಶ್ರಯದಲ್ಲಿ ಸಾಹಿತ್ಯ ಪಲ್ಲವಿಸಿತು.

ದಿವಂಗತ ಶ್ರೀ ಅವರ ವಿಚಾರ ಹೀಗಿದೆ. ಕನ್ನಡ ಸಾಹಿತ್ಯವನ್ನು ಕಾಲ ಮತಗಳಿಗೆ ಅನುಸರಿಸಿ ಎರಡು ಭಾಗ ಮಾಡಬಹುದು. ಕಾಲ ಕ್ರಮದ ದೃಷ್ಟಿಯಿಂದ ಭಾಷೆ, ಕಾವ್ಯದ ರೂಪ, ರಾಜವಂಶಗಳು, ಪ್ರಧಾನ ಕವಿಗಳು ಇವನ್ನು ಅನುಸರಿಸಿ ವಿಭಾಗ ಮಾಡಬಹುದು. ಇಲ್ಲಿ ಲಕ್ಷಣ ಸಮನ್ವಯವಾಗಲೀ ಪ್ರಯೋಜನವಾಗಲೀ ಕಂಡುಬಾರದು. ಕನ್ನಡ ಸಾಹಿತ್ಯ ಸಂಸ್ಕೃತದ ಸಂಪ್ರದಾಯವನ್ನೇ ಅನುಸರಿಸಿದೆ, ಕಾಲಕ್ಕೆ ತಕ್ಕಂತೆ ಬದಲಾವಣೆ ಹೊಂದಿಲ್ಲ. ಮತ ದೃಷ್ಟಿಯಿಂದ ಮೂರು ನಾಲ್ಕು ಘಟ್ಟಗಳನ್ನೂ ಮಾಡಬಹುದು. ಆದರೆ ಕನ್ನಡ ಸಾಹಿತ್ಯ ಹೊಳೆ ಏರಿ ಹೊಳೆ ಇಳಿದಂತೆ ಇದೆ. ಒಮ್ಮೆ ಹಿಗ್ಗುತ್ತಲೂ ಇನ್ನೊಮ್ಮೆ ತಗ್ಗುತ್ತಲೂ ನಡೆದಿದೆ. ಕಾಡಿನಲ್ಲಿ ಅಡಗಿದ ಮೂಲ ಸಾಹಿತ್ಯಕ್ಕೆ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯ ಪ್ರವಾಹಗಳು ಒಂದರ ಹಿಂದೊಂದು ಬಂದು ಕೂಡಿ ತ್ರಿವರ್ಣದ ದೊಡ್ಡ ಹೊಳೆಯಾಗಿ ಹರಿದಿದೆ ಕನ್ನಡದ ಕಾವೇರಿ. ಈ ದೃಷ್ಟಿಯಿಂದ (೧) ಆರಂಭ ಕಾಲ; ೧೦ನೆಯ ಶತಮಾನದ ವರೆಗೆ (೨) ಮತ ಪ್ರಾಬಲ್ಯ ಕಾಲ; ೧೦-೧೯ ಶತಮಾನಗಳ (ಜೈನ ಕವಿಗಳು ೧೦ನೆಯ ಶತಮಾನದಿಂದ; ವೀರಶೈವ ಕವಿಗಳು ೧೨ನೆಯ ಶತಮಾನದಿಂದ; ಬ್ರಾಹ್ಮಣ ಕವಿಗಳು (ಮುಖ್ಯವಾಗಿ) ೧೫ನೆಯ ಶತಮಾನದಿಂದ), ವರೆಗೆ (೩) ನವೀನ ಕಾಲ; ೧೯ನೆಯ ಶತಮಾನದಿಂದ ಎಂದು ವಿಭಾಗಿಸಿದ್ದಾರೆ.

ಮತಾನುಸರಿಸಿದ ವಿಭಾಗ ಬಹಳ ಜನರು ಒಪ್ಪಿದ್ದಾರೆಂದು ತೋರುತ್ತದೆ. ಯಾವದಕ್ಕೂ ಪ್ರಬಲವಾದ ಆಧಾರಗಳ ಅಭಾವವಿದೆ. ಈಗಿನ ದೃಷ್ಟಿಕೋನ ದಿಂದ ಕಾಲಮಾನವನ್ನು ನಾವು ಅಳೆಯುತ್ತಿದ್ದೇವೆ. ಮತಧರ್ಮ ಕಾವ್ಯ ಧರ್ಮಗಳು ಒಂದೇ ಎಂದು ತಿಳಿಯುವಷ್ಟರವುಟ್ಟಿಗೆ ನಾವು ಬಂದು ನಿಂತಂತಾಗುತ್ತದೆ. ಕವಿಗಳು ಅನಿವಾರ್ಯವಾಗಿ ಆಗಿನ ಕಾಲದ ಜೀವನ ಚಿತ್ರಣ ನಿರೂಪಿಸಿದ ಮಾತ್ರಕ್ಕೆ ಕವಿಗಳು ದಾರ್ಶನಿಕರೆಂಬುದನ್ನು ಅವರು ಮತಧರ್ಮಗಳ ಘರ್ಷಣೆಯ ಶೆಳವಿನಲ್ಲಿ ಸಾಮಾನ್ಯವಾಗಿ ಸಿಕ್ಕದವರೆಂದೂ ತೋರೆಯುವದೇ ಯೋಗ್ಯವಾಗಿದೆ.

ಸಾಹಿತ್ಯರೂಪ ಭಿನ್ನತೆಯಿಂದ ಯುಗಗಳನ್ನು ನೋಡಿದಾಗ ಮೊದಲ ನೆಯ ಯುಗದಲ್ಲಿ ಚಂಪುವಿಗೆ ಪ್ರಾಧಾನ್ಯ ಬಂದಿತು. ಎರಡನೆಯ ಯುಗದಲ್ಲಿ ವಚನ, ರಗಳೆ ಷಟ್ಪದಿಗಳು ಮೊದಲುಗೊಂಡವು. ಮೂರನೆಯದರಲ್ಲಿ ತ್ರಿಪದಿ, ಸಾಂಗತ್ಯಗಳು ಸಲುವಳಿಯಾದವು. ಆದರೂ ಮೂರನೆಯದನ್ನು ಸ್ಥೂಲವಾಗಿ ಷಟ್ಪದಿಯುಗವೆಂದು ಕರೆಯಲಡ್ಡಿಯಿಲ್ಲ. ಆದರೂ ಈ ಯುಗದ ಉತ್ತರಾರ್ಧ ದಲ್ಲಿ ಚಂಪುವಿನ ಉದಯವಾಯಿತು.

ಜೈನ ಯುಗದಲ್ಲಿ ಮಾರ್ಗನಿಷ್ಠರತೆ ( Classical Trend ), ವೀರಶೈವಯುಗದಲ್ಲಿ ಮಾರ್ಗದಿಂದ ದೇಸಿಗೆ ಸಂಕ್ರಮಣ (Transition from classical to the popular), ಬ್ರಾಹ್ಮಣಯುಗದಲ್ಲಿ ದೇಸಿ ನಿಷ್ಠತೆ ಇಲ್ಲವೇ ದೇಶಿಯ ಪ್ರಾಚುರ್ಯ (popular Trend) ಎಂದು ಹೇಳ ಬಹುದು. ಭಾಷಾದೃಷ್ಟಿಯಿಂದ ಹಳಗನ್ನಡ, ನಡುಗನ್ನಡ, ಹೊಸಗನ್ನಡವೆಂದು ಯುಗಗಳ ಪ್ರತ್ಯೇಕತೆಯನ್ನು ವರ್ಣಿಸಬಹುದಾದರೂ ಮುಂದು ಮುಂದಿನ ಯುಗಗಳಲ್ಲಿ ಸಮ್ಮಿಶ್ರತೆ ಹೆಚ್ಚುವದೆಂಬುದನ್ನು ಭಾಷಾವಸ್ಥೆಗಳ ಸ್ವರೂಪವು ಕಾಲಮರ್ಯಾದೆಯೊಂದಿಗೆ ಹೊಂದಲಾರದೆಂಬುದನ್ನೂ ಗಮನಿಸಬೇಕು.

ಕನ್ನಡ ವಕ್ಕಿಗಳ ವಿಭಜನೆಯ ಕ್ರಮ ಮೂಲ ದೃಷ್ಟಿಗೆ ಎರವಾಗಿದೆ. ವೀರ ರಸ ಪ್ರಧಾನವಾದ ಪಾತ್ರಯುಗದಲ್ಲಿ ಶಾಂತರಸವೂ ತನಿಗೊಂಡಿದೆ. ಮತ ಪ್ರಚರಕ ಯುಗದಲ್ಲಿ ಮತಪ್ರಚಾರವು ಸ್ಫೂರ್ತಿ ಕೊಟ್ಟಿದ್ದರೂ ಅದೇ ಮುಖ್ಯವಲ್ಲ ಕವಿ ಕರ್ಮಕ್ಕೆ. ಶರಣರ ವಚನಗಳು, ಹರಿಹರ ರಾಘವಾಂಕರ

ಕಾವ್ಯಗಳು ಕೇವಲ ಮತಪ್ರಚಾರವೇ? ಪಂಪರನ್ನರೂ ಅದನ್ನೇ ಮಾಡಿದರಲ್ಲ? ಇಲ್ಲಿ ಮತ ಪ್ರಚಾರ ಅಧಿಕವಿದ್ದರೂ ಅದೇ ಚರಮಗಮ್ಯವಲ್ಲ. ಶೃಂಗಾರರಸವೇ ಪ್ರಧಾನವಿಲ್ಲಿ. ಅಂದರೆ ವೀರಶೈವ ಸಾಹಿತ್ಯ ಸಮೃದ್ಧಿಗೆ ಶೃಂಗಾರವೇ ಜೀವಾಳವೇ? ಸಾರ್ವಜನಿಕ ಯುಗವು ಅತಿವ್ಯಾಪ್ತಿ ದೋಷದಿಂದ ಕೂಡಿದೆ.

ಶ್ರೀಯವರ ವಿಭಾಗ ಕ್ರಮ ಬೇರೆ ಬೇರೆ ಮೌಲ್ಯಗಳಿಂದ ಕೂಡಿದೆ. ಆದರೆ ಪ್ರಧಾನ ಕವಿಯನ್ನೇ ಪ್ರಾಮುಖ್ಯವಾಗಿಟ್ಟುಕೊಂಡು ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ, ತಿರುಮಲಾರ್ಯಯುಗ ಎಂದು ವಿಭಾಗ ಮಾಡಬಹುದು. ಇವರೆಲ್ಲ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕಾಣಿಕೆ ಸಲ್ಲಿಸಿದ್ದಾರೆ, ಮಾರ್ಗದರ್ಶಕರಾಗಿದ್ದಾರೆ, ಸ್ಫೂರ್ತಿಯ ಸೆಲೆಯಾಗಿದ್ದಾರೆ, ತಮ್ಮ ತಮ್ಮ ಯುಗದ ಮೇಲೆ ಪ್ರಭಾವ ಬೀರಿದ್ದಾರೆ. ಆಯಾ ಧರ್ಮಗಳ ಪ್ರತಿನಿಧಿಗಳಾಗಿ ಜೈನ, ವೀರಶೈವ, ವೈಷ್ಣವ, ಶ್ರೀವೈಷ್ಣವ ಮತಪ್ರಣಾಳಿಗಳನ್ನು ಪ್ರತಿಪಾದಿಸಿದ್ದಾರೆ.

ಇದೇ ರೀತಿಯಲ್ಲಿ ಮುಂದುವರೆದು ಪಂಪ-ರನ್ನ ಬಸವ-ಹರಿಹರ ಕುಮಾರವ್ಯಾಸ-ಪುರಂದರದಾಸ, ತಿರುಮಲಾರ್ಯ-ಷಡಕ್ಷರಿ ಹೀಗೆ ಕವಿದ್ವಯರುಗಳ ಹೆಸರಿನಲ್ಲಿ ಯುಗಗಳನ್ನು ಹೆಸರಿಸಿ ಸಾಹಿತ್ಯಕ ಪ್ರಭಾವಗಳನ್ನು ಸೂಚಿಸಬಹುದು. ಶ್ರೀಕಂಠಯ್ಯನವರ ವಿಚಾರದಂತೆ ಕನ್ನಡ ಸಾಹಿತ್ಯ ಕೇವಲ ಸಂಸ್ಕೃತದ ಪಡಿನೆಳಲಾಗಿ ಬೆಳೆದಿಲ್ಲ. ಅದರ ಅಂಧಾನುಕರಣೆಯೂ ಅಲ್ಲ, ತನ್ನದೇ ಆದ ಸತ್ವವನ್ನು, ಶಕ್ತಿಯನ್ನು ತೇಜಸ್ಸನ್ನು ಓಜಸ್ಸನ್ನು ಅದು ತೋರಿಸಿದೆ.

ಸಾಹಿತ್ಯ ಚರಿತ್ರೆಯಲ್ಲಿ ಮತತತ್ವಕ್ಕಿಂತ ಕವಿ ವ್ಯಕ್ತಿ ಹೆಚ್ಚು ಗಣ್ಯನು, ಕವಿಕೃತಿ ಹೆಚ್ಚು ಬೆಲೆಯುಳ್ಳದ್ದು. ಆದ್ದರಿಂದ ಸಾಹಿತ್ಯ ಚರಿತ್ರೆಯನ್ನು ಪಂಪಪೂರ್ವಯುಗ, ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ, ಆಧುನಿಕ ಯುಗ ಎಂದು ವಿಭಾಗಿಸುವದೇ ಒಳ್ಳೆಯದು.

ಪ್ರಶ್ನೆ ೪— ಟಿಪ್ಪಣಿ ಬರೆಯಿರಿ. ಅ) ಗುಣವರ್ಮ ೧. ಆ) ಕವಿರಾಜಮಾರ್ಗ. ಇ) ವಡ್ಡಾರಾಧನೆ.

ಉತ್ತರ— ಅ) ಗುಣವರ್ಮ ೧:—

ಇವನು ಪಂಪಪೂರ್ವ ಯುಗದಲ್ಲಿಯ ಪ್ರೌಢ ಕವಿಯಾಗಿದ್ದಾನೆ. ಇವನ ಕಾಲ ಸುಮಾರು ಕ್ರಿ.ಶ. ೯೦೦. ಶೂದ್ರಕ, ಹರಿವಂಶ ಎಂಬ ಗ್ರಂಥಗಳನ್ನು ಬರೆದ ಹಾಗೆ ತಿಳಿದುಬರುತ್ತದೆ. ಇನ್ನೊಬ್ಬ ಗುಣವರ್ಮನು ೧೩ ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದನು. ಹೀಗೆ ಗುಣವರ್ಮರು ಇಬ್ಬರಿದ್ದರೆಂದು ತಿಳಿಯಲು ಸಾಕಷ್ಟು ಆಧಾರಗಳಿವೆ.

ಇವನನ್ನು ಮೊದಲು ನೆನೆದವನೆಂದರೆ 'ಧರ್ಮಾಮೃತ' ವನ್ನು ಬರೆದ (೧೧೧೨ರಲ್ಲಿ) ನಯಸೇನನು. ಅದರಲ್ಲಿ ಅಸಗ ಪೊನ್ನರೊಡನೆ 'ಗುಣವರ್ಮನ ಜಾಣ್ಮೆ' ತನ್ನ ಕೃತಿಯಲ್ಲಿ ನೆಲಸಲಿ ಎಂದಿದ್ದಾನೆ. ಮುಂದೆ ರುದ್ರಭಟ್ಟ, ಪಾರ್ಶ್ವ ಪಂಡಿತರೂ ಇವನನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡಿದ್ದಾರೆ. ಕೇಶಿರಾಜ, ೨ನೆಯ ನಾಗವರ್ಮರಂಥ ಲಕ್ಷಣಕಾರರು ಪ್ರಮಾಣವಾಗಿ ಗ್ರಹಿಸಿದ್ದಾರೆ, ಮಲ್ಲಿಕಾರ್ಜುನ, ಅಭಿನವಾರಿ ವಿದ್ಯಾನಂದರಂಥಹ ಸಂಕಲನಕಾರರು ಅವನ ಪದ್ಯಗಳನ್ನು ಎತ್ತಿಕೊಂಡಿದ್ದಾರೆ. ಗಂಗಚಕ್ರಾಯುಧ, ಕಾಮುದ ಮೊದಲಾದ ಬಿರುದುಗಳುಳ್ಳ ಗಂಗರಾಜನ ಸ್ತುತಿ ಇದೆ. ೯೦೭-೯೨೦ರ ವರೆಗೆ ಆಳಿದ ಎರೆಯಪ್ಪನೇ ಆ ರಾಜನಾಗಿರಬೇಕು.

ಅವನ ಗ್ರಂಥಗಳು ದೊರೆಯದಿದ್ದರೂ ಅವುಗಳ ಹೆಸರುಗಳಾದರೂ ದೊರೆತಿವೆ. ಅಭಿನವ ವಿದ್ಯಾನಂದನು 'ಕಾವ್ಯಸಾರ' ದಲ್ಲಿಯೂ, ಮಲ್ಲಿಕಾರ್ಜುನನು 'ಸೂಕ್ತಸುಧಾರ್ಣವದಲ್ಲಿಯೂ, 'ಶೂದ್ರಕ' ದಿಂದ ಪದ್ಯಗಳನ್ನು ಎತ್ತಿಕೊಂಡಿದ್ದಾರೆ. 'ಕಾವ್ಯಸಾರ' ದಲ್ಲಿ 'ಹರಿವಂಶ'ದಿಂದಲೂ ಎತ್ತಿಕೊಂಡ ಪದ್ಯವಿದೆ. ಕೇಶಿರಾಜನ 'ಶಬ್ದಮಣಿ ದರ್ಪಣ' ದಲ್ಲಿ 'ಈಂದ ಪುಲಿಯಾವ್ರೊಲಿದರ್ನ್' ಎಂದು ಗುಣವರ್ಮನ 'ಹರಿವಂಶ ಪ್ರಯೋಗ' ಎಂಬ ಹೇಳಿಕೆ; ಪಾರ್ಶ್ವ ಪಂಡಿತ ಮತ್ತು ೨ನೆಯ ನಾಗವರ್ಮರ ಉಕ್ತಿ ಉದಾಹರಣೆಗಳು ಸಾಕಷ್ಟು ಆಧಾರವಾಗಿವೆ.

ಉಧೃತ ಪದ್ಯಗಳಿಂದ 'ಶೂದ್ರಕ' ದ ಕಥಾವಸ್ತುವಿನ ಪರಿಚಯವಾಗದಿದ್ದರೂ ಅದೊಂದು ಚಂಪೂಗ್ರಂಥವಾಗಿತ್ತೆಂದೂ ಅಲ್ಪಸ್ವಲ್ಪವಾಗಿಯಾದರೂ ಕ್ರಮಬದ್ಧ ಕಥೆ ಅದರಲ್ಲಿ ಒಳಗೊಂಡಿತ್ತೆಂದೂ ಹೇಳಬಹುದು. 'ಕಾವ್ಯಸಾರ' ದಲ್ಲಿ

ಗದ್ಯ ಭಾಗವನ್ನು ಎತ್ತಿಕೊಳ್ಳಲಾಗಿದೆ. ಶೂದ್ರಕ ರಾಜನ ಕತೆಯನ್ನು ಗಂಗ ರಾಜನೊಂದಿಗೆ ತಾದಾತ್ಮ್ಯಗೊಳಿಸಿ ಬರೆದಿರಲೂಬಹುದು. ಹಾಗಿದ್ದರೆ ಗನೆಯ ಗುಣವರ್ಮನ ಪಂಪ-ರನ್ನರಿಗೆ ಲೌಕಿಕ ಕಾವ್ಯಗಳಲ್ಲಿ ರಾಜಕೀಯ ಧ್ವನಿ ಬೆರೆಯಿಸುವದರಲ್ಲಿ ಮಾರ್ಗದರ್ಶಕನೆಂದು ಹೇಳಬಹುದಾಗಿದೆ.

ಸಾಂಪ್ರದಾಯಿಕ ವಿಷಯಗಳಾದ ಸಮುದ್ರ, ಪುರ, ಕಾನನ, ಸ್ತ್ರೀರೂಪ ಮುಂತಾಗಿ ವರ್ಣನೆಗಳು ಸಂಕಲಿತ ಪದ್ಯಗಳಲ್ಲಿ ಇವೆ. ರಾಜ, ಯುದ್ಧ, ಶೌರ್ಯ ಕುರಿತಿದ್ದ ಪದ್ಯಗಳಿಂದ ಶೂದ್ರಕವು ತತ್ಕಾಲೀನ ಚರಿತ್ರೆಯನ್ನು ಸೂಚಿಸುವ ವೀರಪ್ರಚುರವಾದ ಕಾವ್ಯವಿರಬೇಕೆಂದೆನಿಸುತ್ತದೆ. "ಎರೆದರ್. ಸಂತುಷ್ಟರಾದರ್....ಗಂಗಚಕ್ರಾಯುಧಾಂಕಾ" ಎಂಬಲ್ಲಿ ಎರೆಯಪ್ಪನ ಗುಣಗಾನವಿದೆ. ಮುಂದೆ ವೀರಪಟ್ಟವನ್ನು ಧರಿಸಿದ ಭವ್ಯ ವರ್ಣನೆಯಿದೆ. ಅಂತೂ ಆ ಕಾಲದ ಚರಿತೆಯಲ್ಲಿ ಇಣಿಕಿ ಹಾಕುತ್ತಿದೆ.

ಶೂದ್ರಕದಲ್ಲಿ ಪ್ರೌಢವಾದ ವರ್ಣನಾಶಕ್ತಿ ಕಂಡು ಬರುತ್ತದೆ. ಅಲ್ಲದೆ ಶೂದ್ರಕದಿಂದ ಪಂಪಪೂರ್ವಯುಗದಲ್ಲಿಯೇ ಮಾರ್ಗ ಕಾವ್ಯವು ಕನ್ನಡ ಸಂಸ್ಕೃತಗಳ ಶಬ್ದಸಿದ್ಧಿಯನ್ನು ಪಡೆದು, ಕವಿಸಮಯ, ಕಲ್ಪನಾ ಚಮತ್ಕೃತಿಗಳೊಡನೆ ಮೆರೆದು ಪಾಂಡಿತ್ಯದ ಪ್ರತಿಭೆಯನ್ನು ವ್ಯಕ್ತಪಡಿಸುತ್ತಿತ್ತೆಂದು ವಿದಿತವಾಗುತ್ತದೆ. ಶೃಂಗಾರ ವರ್ಣನೆ ಮನಂಬುಗುವಂತಿದೆ. ಆಗೀಗ ಶೈಲಿ ಸಂಸ್ಕೃತಮಯವಾಗಿದೆ. ಕೇವಲ ಶಬ್ದಜಾಲವೇ ಕೆಲಪದ್ಯಗಳಲ್ಲಿ ಇಲ್ಲದಿಲ್ಲ. ಒಟ್ಟಿನಲ್ಲಿ ಹರಿವಂಶ ಹಾಗೂ ಶೂದ್ರಕಗಳಿಂದ ಎತ್ತಿಕೊಂಡ ಪದ್ಯಗಳ ಆಧಾರದಿಂದಲೇ ಗನೆಯ ಗುಣವರ್ಮನು ಪಂಪಪೂರ್ವ ಯುಗದಲ್ಲಿಯ ಪ್ರೌಢ ಕವಿಯೆಂದು ಹೇಳಬಹುದಾಗಿದೆ.

ಆ) ಕವಿರಾಜ ಮಾರ್ಗ— ಕವಿರಾಜ ಮಾರ್ಗವು ಕನ್ನಡದ ಆದ್ಯ ಗ್ರಂಥವಾಗಿದೆ. ಮೊದಲನೆಯ ಉಪಲಬ್ಧ ಗ್ರಂಥವೂ ಅಲಂಕಾರ (ಶಾಸ್ತ್ರ) ಗ್ರಂಥವೂ ಆಗಿದೆಯಲ್ಲದೆ ವಿಚಾರ ಸಂಪತ್ತಿಯಿಂದಲೂ ಕವಿತ್ವದಂಶಗಳಿಂದಲೂ ಕೂಡಿದ ಅಮರ ಕೃತಿಯಾಗಿದೆ. ಹಿಂದಿನಂತೆ ಇಂದೂ ಅದು ಮಾರ್ಗದರ್ಶಕವಾಗಿದೆ.

ಇದರಲ್ಲಿ ರಾಷ್ಟ್ರದ ದೊರೆಯಾದ ನೃಪತುಂಗನ ಉಲ್ಲೇಖವಿರುವದರಿಂದ ಇದರಕಾಲ ೮೧೪-೮೭೭ ಎಂದು ನಿಶ್ಚಯವಾಗಿದೆ. ಆದರೆ ಇದರ ಕವಿಯ ಬಗ್ಗೆ

ವಾದ ವಿವಾದಗಳಿವೆ. ನೃಪತುಂಗ, ಕವೀಶ್ವರ, ಶ್ರೀವಿಜಯ ಹೀಗೆ ಅರಸನಿಂ
ಅರಸನ ಆಸ್ಥಾನದಲ್ಲಿ ಯಾವನೊಬ್ಬ ಪಂಡಿತನು ಇದರ ರಚನೆ ಮಾಡಿರಬಹು
ದೆಂಬ ಊಹೆಗೆ ಆಸ್ಪದವಿದೆ.

ಸಾಮಾನ್ಯವಾದ ತಿಳುವಳಿಕೆ ಇರುವಂತೆ ನೃಪತುಂಗನು ಇದನ್ನು ರಚಿಸಿರಲಿಕ್ಕಿಲ್ಲ. ಯಾಕಂದರೆ ತನ್ನ ಕೃತಿಯಲ್ಲಿ ನೃಪತುಂಗನು ತನ್ನನ್ನೇ ಇಷ್ಟು ಹೊಗಳಿಕೊಳ್ಳುವದು ಎಷ್ಟು ಅಸಹಜವೋ ಅಷ್ಟು ಆಶ್ರಿತ ಕವಿಯೊಬ್ಬನು ಹೊಗಳುವದು ಸಹಜ. ಪ್ರತಿಪರಿಚ್ಛೇದದ ಅಂತ್ಯದಲ್ಲಿ 'ನೃಪತುಂಗ ದೇವಾನು ಮತಮಪ್ಪ ಕವಿರಾಜ ಮಾರ್ಗಂ' ಎಂದಿದೆ ತಾನೇ ಬರೆದಿದ್ದರೆ ನೃಪತುಂಗನು 'ಅನುಮತ' ಎಂಬ ಪದಪ್ರಯೋಗವನ್ನು ಮಾಡುವ ಅವಶ್ಯಕತೆಯೇ ಇಲ್ಲ.

ಇಲ್ಲಿ ದಂಡಿ ಮೊದಲಾದ ಪ್ರಾಚೀನ ಲಾಕ್ಷಣಿಕರ ಅಭಿಪ್ರಾಯಗಳ ಅನುವಾದವಿದ್ದು ತನ್ನ ಒಡೆಯನ ಅನುಮತಿಯಿಂದ ತಾನು ಹಾಗೆ ಮಾಡಿದ್ದೇ ನೆಂಡೂ ತೋರಿಸಲೂ ವಾದಪೂರಕವಾಗಿಯೂ ನೃಪತುಂಗನ ಹೆಸರನ್ನು ತೋರಿಸಿದಂತೆ ಕಾಣುತ್ತದೆ. ಆದರೂ ನೃಪತುಂಗನ ಸ್ವತಂತ್ರ ವಿಚಾರಗಳನ್ನು ತೋರಿಸುವ ಕೆಲ ಪದ್ಯಗಳೂ ಇವೆ. ಇಲ್ಲಿ ದಕ್ಷಿಣೋತ್ತರ ಮಾರ್ಗಗಳಿಗೆ ಕನ್ನಡ ಉದಾಹರಣೆ ಕೊಟ್ಟು ಅವುಗಳ ಭೇದ ತೋರಿಸಿದ ಪದ್ಯಗಳನ್ನು ಹೆಸರಿಸ ಬಹುದು. 'ಅತಿಶಯ ಧವಳೋಕ್ತಿಕ್ರಮದಿನರಿವುವಂ ತದ್ಭವದೋಳ್' ಎಂಬ ಮಾತಿನಿಂದ ನೃಪತುಂಗನಲ್ಲದ ವ್ಯಕ್ತಿ ಗ್ರಂಥಕಾರನಿರಬೇಕೆಂದು ಸ್ಪಷ್ಟ ಪಡಿಸುತ್ತದೆ.

ಕವಿರಾಜ ಮಾರ್ಗಕಾರನು ನೃಪತುಂಗನ ಸಭಾಸದನಾಗಿದ್ದು ಅವನಲ್ಲಿ ಅತ್ಯಂತ ಗೌರವವುಳ್ಳವನಾಗಿದ್ದನು. ಅವನನ್ನು ಅಲ್ಲಲ್ಲಿ ಮನಃಪೂರ್ವಕವಾಗಿ ಹೊಗಳಿದ್ದಾನೆ. ಕಾವ್ಯ ರತ್ನಾಕರವನ್ನು ದಾಟಬೇಕಾದರೆ ನೃಪತುಂಗ ದೇವ ಮಾರ್ಗದಲ್ಲಿಯ ಬೋಧವೆಂಬ ನಾವೆ ಬೇಕೆಂದು ಹೇಳಿದ್ದನ್ನು ನೋಡಿದರೆ ನೃಪತುಂಗನ ಮಾರ್ಗವನ್ನು ಬೇರೆಯವನು ವರ್ಣಿಸುವನೆಂದು ತಿಳಿಯದೇ ಇರದು.

'ಕವಿರಾಜ ಮಾರ್ಗ'ಕಾರನು ಜೈನಮತೀಯನು, ಇದನ್ನು ಬರೆಯು ವಾಗಂತೂ ಅವನಲ್ಲಿ ಜೈನ ಮತದ ಬಗ್ಗೆ ತುಂಬಾ ಆದರಾಭಿಮಾನಗಳು

ತುಂಬಿತುಳುಕುತ್ತಿರಬೇಕು. ದಂಡಿಯ ಮೂಲ ಪದ್ಯಗಳನ್ನು ಜೈನ ಪರವಾಗಿ ಹೊರಳಿಸಿದ್ದಾನೆ. ಶ್ರುತ, ಪರಮಾಗಮ, ವೀತರಾಗಗಳೆಂಬ ಜೈನ ಪರಿಭಾಷೆಯ ಪದಗಳ ಬಳಕೆ ತುಂಬಾ ಇದೆ. ಸರಸ್ವತಿ ಸ್ತುತಿಯಲ್ಲಿ 'ಹಂಸೀ ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್', 'ಜಿನ ಚರಣ ನಖಾದರ್ಶಂ', 'ಮನದೆ ನೆನೆವರ ಕಿಡುಗಂ ಜಿನಾಧಿಪಾ ಸನ್ನ ಪಾಪನಿಚಯಂ ಗುಣಮುಂ' ಎಂಬ ಜೈನ ಪರವಾದ ಭಾಗಗಳನ್ನು ನೋಡಬೇಕು. ಆದರೆ ತನ್ನ ವಿಷ್ಣುವಿಭಕ್ತಿಗೂ ಜೈನ ಪರತೆಗೂ ವಿರೋಧವನ್ನು ಕಾಣದ ಔದಾರ್ಯವು ಅವನಲ್ಲಿ ನೆಲೆಗೊಂಡಿರಬೇಕು.

ಕವಿರಾಜ ಮಾರ್ಗದ ಪ್ರತಿಪರಿಚ್ಛೇದದ ಕೊನೆಯ ಪದ್ಯದಲ್ಲಿ ಶ್ರೀವಿಜಯ ಎಂಬುದು ಗ್ರಂಥ ಕರ್ತನನ್ನು ಸೂಚಿಸುವ ರೀತಿಯಲ್ಲಿ ಬಂದಿದೆ. ೧೦೩೧ ರಲ್ಲಿ 'ಪಂಚತಂತ್ರ'ದಲ್ಲಿ ದುರ್ಗಸಿಂಹನು ಮೊದಲು ಸಲ 'ಶ್ರೀವಿಜಯರ ಕವಿಮಾರ್ಗಂ' ಎಂದು ಗೌರವದಿಂದ ಉಲ್ಲೇಖಿಸಿರುವದು ಕವಿರಾಜ ಮಾರ್ಗಕಾರನ್ನು ಶ್ರೀವಿಜಯನೆಂದು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. 'ಶ್ರೀವಿಜಯರ ಕವಿರಾಜ ಮಾರ್ಗ' ಎಂದರೆ ಕಂದ ಪದ್ಯದ ಒಂದು ಸಾಲಿಗೆ ಮೂರು ಮಾತ್ರೆಗಳು ಹೆಚ್ಚಾಗುವದರಿಂದ ಅರ್ಥಕ್ಕೆ ಹಾನಿಬಾರದ ರೀತಿಯಲ್ಲಿ ಅವನು 'ಕವಿರಾಜ ಮಾರ್ಗ' ವನ್ನು 'ಕವಿಮಾರ್ಗ' ಎಂದು ವ್ಯತ್ಯಸ್ತಗೊಳಿಸಿರಬಹುದಾಗಿದೆ. "ಶ್ರೀವಿಜಯ ಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ" ಎಂಬ ಮಾತಿನಿಂದಲೂ ಕವೀಶ್ವರನು ಅದರ ಕರ್ತೃ ಎಂದು ಧ್ವನಿತವಾಗುತ್ತದೆ.

ಕವಿರಾಜ ಮಾರ್ಗವು ಕೇವಲ 'ಕಾವ್ಯಾದರ್ಶ' ದ ಅನುವಾದವೇನೂ ಅಲ್ಲ. ಹಾಗಿದ್ದರೆ ಅದಕ್ಕೆ ಈಗಿನ ಮಹತ್ವವೆಂದಿಗೂ ದೊರೆಯುತ್ತಿರಲಿಲ್ಲ. ಉದಾರಚರಿತನಾದ ನೃಪತುಂಗನ ಪ್ರೇರಣೆಯಿಂದಲೂ ಕವಿಯ ಬಹುಮುಖ ಆಸಕ್ತಿಯಿಂದಲೂ 'ಕವಿರಾಜ ಮಾರ್ಗವು' ಕನ್ನಡಿಗರ ಕೈಪಿಡಿಯಾಗಿದೆ.

ಚಾರಿತ್ರಿಕ ದೃಷ್ಟಿಯಿಂದ ನೋಡಲಾಗಿ ಅದರಲ್ಲಿ ನೃಪತುಂಗನ ವ್ಯಕ್ತಿತ್ವದ ಮಹಿಮೆ ಆ ಕಾಲದ ರಾಜಕೀಯ ಸ್ಥಿತಿ, ಅಭಿಮಾನ ಪೂರ್ವಕವಾದ ಕನ್ನಡ ನಾಡು ನುಡಿಗಳ ವರ್ಣನೆ ಇಲ್ಲಿ ಕಂಡುಬರುತ್ತದೆ. ಕನ್ನಡ ನಾಡು 'ಕಾವೇರಿಯಿಂದ ಮಾಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ

ಜನಪದಂ' ಎಂದು ಹೇಳಲಾಗಿದೆಯಲ್ಲದೆ "ಅದರೊಳಗಂ ಕಿಸುವೊಳಲಾ ವಿದ್ಯಾ ಮಹಾಕೂಪಣನಗರದಾ...." ಎಂಬಲ್ಲಿ ತಿರುಳಗನ್ನಡ ನಾಡಿನ ಮೇರೆಯನ್ನು ಹೇಳಲಾಗಿದೆ.

ಕನ್ನಡ ನಾಡವರ ಕಾವ್ಯ ಪ್ರಯೋಗ ಪರಿಣತಿ, ಜನ ಸಾಮಾನ್ಯರ ಸಹಜ ವಿವೇಕಗಳನ್ನು ವರ್ಣಿಸಿ ಕನ್ನಡಿಗರು "ಸುಭಟರ್ಕಳ್, ಕವಿಗಳ್ ಸುಪ್ರಭುಗಳ್, ಚೆಲ್ವರ್ಕಳಭಿಜನರ್ಕಳ್" ಎಂದೂ ಹೇಳಲಾಗಿದೆ. ಕನ್ನಡ ಸಂಸ್ಕೃತಿಯ ಸದ್ಗುಣಗಳು ಈ ಪದ್ಯದಲ್ಲಿ ಸಾರಭೂತವಾಗಿ ಬಂದಿವೆ.

ನುಡಿಯ ದೃಷ್ಟಿಯಿಂದ ಕನ್ನಡ ಗದ್ಯ ಪದ್ಯಕಾರರು ಚತ್ತಾಣಬೆದಂಡೆಗಳೆಂಬ ಕಾವ್ಯ ರೂಪಗಳು, ಬೇರೆ ಬೇರೆ ದೇಶಿಯುಳ್ಳ ಕನ್ನಡಂಗಳು, 'ಪಳಗನ್ನಡ' ಎಂಬ ಆಗಿನ ಹೇಳಿಕೆ ಮುಂತಾದ ಚಾರಿತ್ರಿಕ ಸಾಮಗ್ರಿ ಇಲ್ಲಿ ದೊರೆಯುತ್ತದೆ. ಕನ್ನಡ ವ್ಯಾಕರಣದ ಕೆಲ ನಿಯಮಗಳೂ, ಪ್ರಯೋಗಗಳೂ, ಛಂದಸ್ಸಿಗೆ ಸಂಬಂಧ ಪಟ್ಟ ಪ್ರಾಸ ಲಕ್ಷಣ ವಿಭಾಗಗಳೂ ಬಂದದ್ದಲ್ಲದೆ "ಪೂರ್ವಾಚಾರ್ಯರ್ ದೇಸಿಯನೆನಿಲಸಿ ಖಂಡಪ್ರಾಸಮನತಿಶಯವಿದೆಂದು ಯತಿಯಂ ಮಿಕ್ಕರ್" ಎಂಬ ಮಹತ್ವದ ಮಾತನ್ನು ಹೇಳಲಾಗಿದೆ. ಇಲ್ಲಿ ಕವಿರಾಜ ಮಾರ್ಗವು ಗ್ರಾಹ್ಯವಾದ ವಿವೇಕದ ಮಾರ್ಗವನ್ನು ತೋರಿಸಿದೆ.

ಕವಿರಾಜ ಮಾರ್ಗವು ಸ್ವತಂತ್ರ ಹಾಗೂ ಪರಿಣತ ವಿಮರ್ಶೆಯ ಫಲವಾಗಿದೆಯಾದರೂ ದಂಡಿಬಾಹಮರಿಂದ ಉಪಕೃತವಾದದ್ದೇನು ಸುಳ್ಳಲ್ಲ. ಅಲಂಕಾರ ಶಾಸ್ತ್ರಭಾಗದಲ್ಲಿ ಸಾಮಾನ್ಯವಾಗಿ ಅವರ ಅನುವಾದವಿದ್ದರೂ ಲಕ್ಷಣ ಪದ್ಯಗಳಲ್ಲಿ ಹಾಗಿಲ್ಲ. ಈ ಎಲ್ಲ ಕಡೆಗೆ ಸಾಹಿತ್ಯದ ಸ್ವರೂಪ, ಪ್ರಯೋಜನ, ತಾರತಮ್ಯ, ಸಾಹಿತ್ಯಕಾರನು ಮಾಡಬೇಕಾದ ಸಾಧನೆ, ಶೈಲಿಯ ಸಮತೂಕ ಈ ಮುಂತಾದ ಅಂಶಗಳನ್ನು ಕುರಿತು ಸಮರ್ಪಕವಾದ ಉಕ್ತಿಗಳಿವೆ. ಇವುಗಳಿಂದಲೇ ಗ್ರಂಥಕ್ಕೆ ಅಧಿಕ ಬೆಲೆ ಬಂದಿದೆ, ಗ್ರಂಥಕಾರನಿಗೆ ಹಿರಿಯ ವಿಮರ್ಶಕಪಟ್ಟ ಸಂದಿದೆ.

'ಪಸರಿಸಿದಾ ಬಗೆ ಮನದೊಳ್ ಪೊಸತಾಗೆ ನೆಗಳ್ಚಲರಿಯನಾ ರಚನೆಯೊಳೇಂ ಬಸನಂ' ಕಾವ್ಯ ಹೇಗೆ ಇರಬೇಕೆಂಬುದನ್ನು, ಬಗೆಬಗೆದು ಕೇಳ್ದು ಬುಧರೊಲವೊಗೆದಿರೆ ಹೃದಯದೊಳೆ ತಾಳ್ದ ಮಣಿಹಾರಂಬೋಲ್ ಸೊಗಯಿ

ಸುವ ವಚನವಿರಚನೆ ನೆಗಳ್ಗುಂ ಅದರ ಪೆಂಪತಿ ಸುಲಭಂ' ಎಂಬ ಕಾವ್ಯಕ್ಕೆ ಹೃದ್ಯತೆ ಒರೆಗಲ್ಲೆಂದೂ ಹೇಳಲಾಗಿದೆ.

ಶೈಲಿಯಲ್ಲಿ ಕನ್ನಡ-ಸಂಸ್ಕೃತ ಮಿಶ್ರಣ ಹೇಗಿರಬೇಕೆಂಬ ಇಲ್ಲಿಯ ದೃಷ್ಟಿ ಎಂದಿಗೂ ಒಪ್ಪತಕ್ಕಂಥಾದ್ದಾಗಿದೆ. ನೆಗಳಿರ್ದ ಕನ್ನಡಂಗಳೊಳ್ ಅಗಣಿತ ಗುಣ ವಿದಿತ ಸಂಸ್ಕೃತೋಕ್ತ ಕ್ರಮಮಂ ಒಗೆದೊಂದು ಮಾಡಿ' ಮೊದಲಾದ ಉಕ್ತಿಗಳಲ್ಲಿ ಕನ್ನಡ ನುಡಿಗೆ ಹೊಂದಿಕೆಯಾಗುವಂತೆ, ತಲೆಹೊರೆಯಾಗದಂತೆ, ಅನ್ಯದೇಶವನ್ನು ಪ್ರಯೋಗಿಸಬೇಕು. ಎಂದು ಹೇಳಿದ್ದು ಯೋಗ್ಯವೇ ಆಗಿದೆ. ಅರಿಸಮಾಸ ಮಾಡಿದರೆ ಸುಡುವ ಹಾಲಿನಲ್ಲಿ ಮಜ್ಜಿಗೆ ಹನಿಗಳನ್ನು ಬೆರೆಸಿದಂತೆ ಆಗುವದೆಂದು ಹೇಳಿದ್ದನ್ನೂ ಗಮನಿಸಬೇಕು.

"ನುಡಿಗಳೊಡಂಬಡಲ್ ಬಗೆಪವೋಲ್ ಬಗೆಯಂ ಮೀಗಲೀಯದೆ ।
ಣ್ಣುಡಿಯ ಬೆಡಂಗೆ ಕನ್ನಡದ ಮಾತಿನೊಳಾವಿಕಟಾಕ್ಷ ಬಂದೆ ನಾರಂಗಳೊಳ್ ।
ಜೋಡರದೆ, ನಕ್ಕರಂಗಳ ಪರಂ ಪವಣಾಗಿದೆ ಮೆಲ್ಪು ಪೆತ್ತು, ದಾಂ ।
ಗುಡಿವಿಡಿವಂತೆ ನೀಳ್ಪನಿತು ಪೇಳ್ವುದು ನೀತಿನಿರಂತರ ಕ್ರಮಂ ॥

ಎಂಬ ಪದ್ಯದಲ್ಲಿ ಉತ್ತಮ ಕನ್ನಡ ಶೈಲಿಯ ಆದರ್ಶವನ್ನು ವರ್ಣಿಸಲಾಗಿದೆ "ಅಷ್ಟರಸಾ ಶ್ರಯಾ..." ಎಂಬ ದಂಡಿಯು ಎಂಟೇ ರಸಗಳ ಬಗ್ಗೆ ಹೇಳಿದ್ದರೆ ಕವಿರಾಜ ಮಾರ್ಗದಲ್ಲಿ ನವರಸಗಳನ್ನು ಹೇಳಲಾಗಿದೆ. " ಧ್ವನಿಯೆಂಬುದಳಂಕಾರಂ ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ। ನೆನೆವ್ರದ ನಿಂತು ಕಮಳದೊಳನಿಮಿಷಯುಗ ಮೊಪ್ಪಿ ತೋರ್ಪುದಿಂತಿದು ಚೋದ್ಯಂ॥1॥ ಇದು ಸ್ವತಂತ್ರ ಪದ್ಯ ಧ್ವನಿಸತ್ವವನ್ನು ಅಲಂಕಾರ ಮಾಲಿಕೆಯಲ್ಲಿ ಸೇರಿಸುವ ಪ್ರಯತ್ನ ಇಲ್ಲಿದೆ.

ಇದರಲ್ಲಿಯ ವಿವೇಕಪರವಾದ ಭಾಗವು ಹೃದಯ ವೈಶಾಲ್ಯತೆಯನ್ನೂ ಪರಿಪಕ್ವ ಬುದ್ಧಿಯನ್ನೂ ತೋರಿಸುವ ಜೀವನ ವಿವೇಕವಾಗಿದೆ. ಆಳವಾದ ತಿಳುವಳಿಕೆಯ ಪ್ರತೀಕವಾಗಿ ಈ ಮಾತುಗಳು ಹೊರಹೊಮ್ಮಿವೆ, ವ್ಯವಹಾರ ಜ್ಞಾನಭಂಡಾರವಾಗಿವೆ. 'ಹಗೆಯನ್ನು ಕಿರಿದು ಇದ್ದಾಗಿನಿಂದಲೇ ಏಳಿಸಿ ಕೆಡಿಸದಿದ್ದರೆ ಕಾಲದ ಒಲವನ್ನು ತಾಳಿ, ಅವನು ಇರಿಯುತ್ತಾನೆ, 'ವಿಧಿ ಪ್ರತಿಕೂಲನಾಗಿದ್ದರೆ ಮತನಯುವ್ರ ಅಂದರೆ ಸಂಪುತನೀತಿ ಅನುಕೂಲವಾಗಿದ್ದರೂ ಕಾರ್ಯವನ್ನು ಸಾಧಿಸಲಾಗದು. ಹಾಗೆ ಮಾಡಿದರೆ ಸತ್ತವನಿಗೆ ಉಪಕಾರ

ಮಾಡಿದಂತೆ ವ್ಯರ್ಥ ಆಯಾಸ, 'ಮಾಡುವವನ ಇಚ್ಛೆಯನ್ನರಿಯದೆ ತನ್ನಿ
ಯಿಂದ ಕೆಲಸವನ್ನು ಹೇಳುವವನು ರೋಗಿಯ ತೆರವನ್ನರಿಯದೆ ಮದ್ದು ಹೇಳ
ವೈದ್ಯನಂತಾಗುವನು.'

ಇದಲ್ಲದೆ ವೈರಾಗ್ಯ, ಪರಮತಸಹಿಷ್ಣುತೆ ಕರ್ತವ್ಯನಿಷ್ಠೆ, ಸ್ತುತಿ ನಿಂದೆ
'ಬಗ್ಗೆ ಉದಾಸೀನತೆ ಇವುಗಳನ್ನು ಭಾವಪೂರ್ಣವಾಗಿ ಬಣ್ಣಿಸಲಾಗಿ
'ಕಸವರಮೆಂಬುದು ನೆರೆಸೈರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮ
ಪಾಳಿಸಿಲೆಗಳೆ ಬಾಳ್ವುದು ಬೆಳೆಂಬುದು ನಿಕ್ಕುವರಿ' ಎಂಬ ಮಾತು
ಪರವಿಚಾರವನ್ನೂ ಧರ್ಮವನ್ನೂ ಪಾಲಿಸಬೇಕೆಂಬುದನ್ನೂ ಕರ್ತವ್ಯ ಧ
ನಿಲ್ಲುವಂತೆ ಮಾಡಿ ಬಾಳುವದೇ ನಿಜವಾದ ಬಾಳು ಎಂದು ಸ್ಪಷ್ಟಪಡಿಸಲಾಗಿ
ಈ ಬಗೆಯ ವಿಚಾರಗಳು 'ಕವಿರಾಜ ಮಾರ್ಗ' ಕಾರಣ ಪರಿಣತ ಪ್ರಜ್ಞೆ
ಸಾಕ್ಷಿಯಾಗಿ ನಿಂತಿವೆ. ಇಲ್ಲಿ ಕನ್ನಡದಲ್ಲಿ ಮಾಡಿದ ಭಾರತೀಯ ಸಂಸ್ಕೃ
ಸಾವಿರ ವರ್ಷದ ಹಿಂದೆ ಹಿಡಿದ ನಿಲುಗನ್ನಡಿ ಎಂದು ಕಂಡು ಬರುತ್ತಿದೆ,

ಮುಖ್ಯವಾಗಿ ಶಾಸ್ತ್ರಗ್ರಂಥವಾದ ಇದರಲ್ಲಿ ಕವಿತ್ವದಂಶಗಳು ಮಿನು
ತ್ತವೆ. ಇಲ್ಲಿ ಬರುವ ಸಮುಚಿತವಾದ ಹೋಲಿಕೆಗಳೂ ಸುಂದರ ಚಿತ್ರಗ
ಕವಿರಾಜ ಮಾರ್ಗಕಾರನು ಮೇಲಾದ ಕವಿ ಎಂಬುದಕ್ಕೆ ನಿದರ್ಶನಗಳಾಗಿ
ಇದು ದಂಡಿಯ ಕಾವ್ಯಾದರ್ಶನವನ್ನಲ್ಲದೇ ಕನ್ನಡ ಜೀವನ ಸಾರವ
ಅನುವಾದ ಮಾಡಿದ ಶ್ರೇಷ್ಠ ಕೃತಿಯಾಗಿದೆ. ಶ್ರೀವಿಜಯರ ಕವಿಮಾಗ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈಯ್ದೀವಿಗೆಯುಂ' ಎಂದು ದು
ಸಿಂಹನು ಮಾಡಿದ ಪ್ರಶಸ್ತಿ ತುಂಬ ಸಮರ್ಪಕವಾಗಿದೆ.

ಇ) ವಡ್ಡಾರಾಧನೆ— ಇದು ಜೈನ ಧಾರ್ಮಿಕ ಕಥೆಗಳ ಸಂಗ್ರ
ಗದ್ಯಶೈಲಿಯ ದೃಷ್ಟಿಯಿಂದ ಇದು ಕನ್ನಡದಲ್ಲಿ ಅಪೂರ್ವವಾದ ಗ್ರಂಥವಾಗಿ
ಇದನ್ನು ಬರೆದವರ ಹೆಸರು ಶಿವ ಕೋಟ್ಯಾಚಾರ್ಯ ಎಂದು ನಂಬಲಾಗಿ
ಇದರ ಕಾಲ ವಿಚಾರದಬಗ್ಗೆ ಇನ್ನೂ ನಿರ್ಧಾರಕ್ಕೆ ಬರಲಾಗಿಲ್ಲ. ಕವಿಚರಿತೆಕಾರ
ಇದು ೧೧೮೦ರಲ್ಲಿ ರಚಿತವಾದದ್ದೆಂದೂ ಶ್ರೀಗೋವಿಂದ ಪೈಗಳವರು ಇದು ೬ನೇ
ಶತಮಾನಕ್ಕಿಂತ ಈಚೆಯದಲ್ಲವೆಂದೂ ಭಾಷೆಯ ದೃಷ್ಟಿಯಿಂದ ಅಭಿಪ್ರಾ
ಪಟ್ಟರೆ ಅದೇ ದೃಷ್ಟಿಯಿಂದ ಇದು ೧೦ನೆಯ ಶತಮಾನದ ಗ್ರಂಥವೆಂದು ನ

ಕೆಲವರು ಹೇಳಿದರು. ಆ ಮೇಲೆ ಡಾಕ್ಟರ ಉಪಾಧ್ಯೆಯವರು ೯ನೆಯ ಶತಮಾನದ ತರುವಾಯ ಬಹುಶಃ ೧೧ನೆಯ ಶತಮಾನದಲ್ಲಿ ಇದು ರಚಿತವಾಗಿರಬೇಕೆಂಬ ಅಭಿಪ್ರಾಯವನ್ನು ಪಟ್ಟಿದ್ದಾರೆ. ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಇದರ ಕಾಲ ಮೊದಲು ೯೪೦ ಎಂದು ಹೇಳಿ ನಂತರ ೮೯೫ ರ ಈಚೆಗೆ ಇದು ಬರೆಯಲ್ಪಟ್ಟಿರಬೇಕೆಂದು ಹೇಳಿದ್ದಾರೆ.

ಶ್ರೀ ಗೋವಿಂದ ಪೈಗಳವರ ಅಭಿಪ್ರಾಯಕ್ಕೆ ಅದರಲ್ಲಿ ಬಂದಿರುವ ದಿನಾರ ದಮ್ಮ ಎಂಬ ರೋಮ ಹಾಗೂ ಗ್ರೀಕ ನಾಣ್ಯಗಳ ಹೆಸರುಗಳು ಬೆಳ್ಗೊಳಕ್ಕೆ 'ಕಳ್ಬಪ್ಪು' ಎಂದು ಕರೆದಿರುವರು. ಕಳ್ಳದ, ಕಲ್ಪಿಸು, ಬಡ್ಡಿಸು, ಬರ್ದರ್, ಕೆ (ಧಾತು), ಕೇಳ್ಪಿ ಮೊದಲಾದ ವಿಧವಾದ, ಆದರೆ ಹಳೆ ಕನ್ನಡದ ಪ್ರಯೋಗಗಳು, ದೀರ್ಘಾದೇಶವುಳ್ಳ ನಾಮಪದ ಕ್ರಿಯಾಪದಗಳು ಆಧಾರವಾಗಿ ಕೊಡಲಾಗಿದೆ.

ಶ್ರೀ ಉಪಾಧ್ಯೆಯವರ ವಾದ ಹೀಗಿದೆ.. ವಡ್ಡಾರಾಧನೆಯಲ್ಲಿ ಪ್ರಾಕೃತ ಸಂಸ್ಕೃತ ಹಾಗೂ ಕನ್ನಡದಲ್ಲಿಯ ಅವತರಣಿಕೆಗಳಿವೆ. ಇವುಗಳಲ್ಲಿ ಕೆಲವನ್ನು ಮೂಲ ಪ್ರಾಕೃತದಿಂದ ಎತ್ತಿಕೊಂಡಿರಬೇಕು. ಇಲ್ಲಿಯ ಹಲವು ಪದ್ಯಗಳು ಶಿವಕೋಟಿಯ ಭಗವತಿ ಆರಾಧದ, ಪ್ರವಚನಸಾರ, ರತ್ನ ಕರಂಡಕ, ಭರ್ತೃಹರಿಶತಕ, ಇತ್ಯಾದಿಗಳಿಂದ ಎತ್ತಿಕೊಳ್ಳಲಾಗಿದೆ. ಜಟಾನಂದಿಯ 'ವರಾಂಗ ಚರಿತೆ' ಹಾಗೂ ತುಣಭದ್ರನ 'ಉತ್ತರ ಪುರಾಣ'ಗಳಿಂದ ಅವತರಣಿಕೆಗಳನ್ನು ಆಯ್ದುಕೊಳ್ಳಲಾಗಿದೆ. ಶೈಲಿ ಹಾಗೂ ವ್ಯಾಕರಣ ಕ್ರಿಯೆಗಳನ್ನು ನೋಡಿದರೆ ಇದು 'ಚಾವುಂಡರಾಯ ಪುರಾಣ' ಹಾಗೂ 'ಸೋಂಪಿಯ ಕಥೆಗಳ ನಡುವಿನ ಕಾಲದ್ದಿರಬೇಕು.

ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಕೊಡುವ ಕಾರಣಗಳೆಂದರೆ ಶೈಲಿಯಲ್ಲಿ 'ಚಾವುಂಡರಾಯ ಪುರಾಣ' ಹಾಗೂ ಹರಶೇಣನ 'ಕಥಾಕೋಶ' ದೊಡನೆ ಕಥಾ ಸಾಮ್ಯವಿದೆ. ಶಾಂತಿನಾಥನು ತನ್ನ 'ಸುಕುಮಾರ ಚರಿತೆ' ಯಲ್ಲಿ ವಡ್ಡಾರಾಧನೆಯಿಂದ ಎತ್ತಿಕೊಂಡ ಭಾಗಗಳಿವೆ. ಜಿನಸೇನಾಚಾರ್ಯನು 'ಪೂರ್ವ ಪುರಾಣ'ದ ಪದ್ಯಗಳನ್ನು ವಡ್ಡಾರಾಧನೆಯಲ್ಲಿ ಕಾಣಬಹುದು.

ಒಟ್ಟಿನಲ್ಲಿ ಕೇವಲ ಪ್ರಾಚೀನ, ಪ್ರಾಚೀನವಿದ್ದರೂ ಮುಂದೆ ಪ್ರಚಲಿತ ಹಾಗೂ ಅರ್ವಾಚೀನ, ಪ್ರಯೋಗಗಳೂ ಇಲ್ಲಿ ದೊರೆಯುತ್ತವೆ. ಆದ್ದರಿಂದ 'ವಡ್ಡಾರಾಧನೆ'ಯು ಪೂರ್ವದ ಹಳಗನ್ನಡದಲ್ಲಿ ರಚಿತವಾಗಿರದೆ ಹಳಗನ್ನಡ ಕಾಲದಲ್ಲಿ ಅವರಲ್ಲಿಯೂ ಪಂಪ ಪೂರ್ವಕಾಲದಲ್ಲಿ ರಚಿತವಾಗಿರಬೇಕು. ಚಾವುಂಡರಾಯ ಪುರಾಣದ ನಂತರ ಹುಟ್ಟಿದ್ದರೆ ಈಗಿನಷ್ಟು ಪ್ರಾಚೀನ ವರ್ಚಸ್ಸು ಅದು ತೋರುತ್ತಿರಲಿಲ್ಲ.

ಈ ಪೇಳ್ದ ಪತ್ತೊಂಬ್ಬತ್ತು ಕಥೆಗಳು । ಶಿವ ಕೋಟ್ಯಾಚಾರ್ಯರ್ ಪೇಳ್ದ ವಡ್ಡಾರಾಧನೆಯ ಕವಚವು ಮಂಗಳ ಮಹಾ ಶ್ರೀ। ಎಂಬ ಸಮಾಪ್ತ ವಾಕ್ಯವು ಒಂದು ಮೂಲ ಪ್ರತಿಯಲ್ಲಿದೆ. ಇನ್ನೊಂದರಲ್ಲಿ ಯೀ ಪೇಳ್ದ ಪತ್ತೊಂಭತ್ತು ಕಥೆಯು ರೇವಾ (ಶಿವ) ಕೊಟ್ಯಾಚಾರ್ಯಪೇಳ್ದ ವಡ್ಡಾರಾಧನೆಯು ಕವಚ ಮೆಂಬಧಿಕಾರಊ ಎಂದಿದೆ.' ಅಂದರೆ ಇದರಲ್ಲಿ ೧೯ ಕತೆಗಳಿವೆ. ಎಂದೂ ಇದರ ಹೆಸರು ವಡ್ಡಾರಾಧನೆ ಎಂದೂ ಇದು ಶಿವ ಕೋಟ್ಯಾಚಾರ್ಯರು ಬರೆದಿರುವ ರೆಂದೂ ಇತರ ವ್ಯತಿರಿಕ್ತ ಆಧಾರಗಳು ಸಿದ್ಧವಾಗುವವರೆಗೆ ಗ್ರಹಿಸುವದೇ ಯೋಗ್ಯವು.

ಇಲ್ಲಿಯ ಕಥೆಗಳು ಸಾಂಪ್ರದಾಯಿಕ ಹಾಗೂ ಪ್ರಚಾರಕವಾಗಿದ್ದರೂ ಅವುಗಳಲ್ಲಿ ಆಕರ್ಷಣೆ ಇದೆ, ರುಚಿ ಇದೆ. ಶ್ರೀ ಉಪಾಧ್ಯೆಯವರ ಹೇಳಿಕೆ ಯಂತೆ 'ಆರಾಧನೆ' ಎಂದರೆ ಜ್ಞಾನ, ದರ್ಶನ, ಚಾರಿತ್ರ್ಯ, ತಪಸ್ಸು ಈ ನಾಲ್ಕು ಜೈನ ಮತೀಯ ಆದರ್ಶಗಳ ಸಿದ್ಧವಾದ ಸಾಧನೆ ಸಮಾಧಿ ಮರಣದಲ್ಲಿ ಅವನ್ನು ಅನುಸರಿಸಿ ತೋರುವ ಉಚ್ಚತಮವಾದ ಆಚರಣೆ ಜೈನವಾಙ್ಮಯ ದಲ್ಲಿ 'ಭಗವತೀ ಆರಾಧನಾ' ಎಂಬುದು ದೊಡ್ಡ ಪ್ರಾಕೃತ ಗ್ರಂಥ, ಜೈನ ಶೌರ ಸೇನಿಯಲ್ಲಿ ಬರೆದುದು ಶಿವಾರ್ಯ ಅಥವಾ ಶಿವಕೋಟಿ ಅದರ ಲೇಖಕ. ಇವನು ಬಹುಶಃ ಕುಂದ ಕುಂದಾಚಾರ್ಯರ ಪ್ರಾಚೀನ ಕಾಲದವನು. ಮುಂದೆ ಇದರಲ್ಲಿಯ ಕಥೆಗಳು ಧರ್ಮ ನಿರೂಪಣೆಯಿಂದ ಬೇರ್ಪಟ್ಟವು. ಪ್ರಭಾಚಂದ್ರ ಹಾಗೂ ಹರಿಷೇಣ ಇವರ ಕಥಾಕೋಶಗಳು ಬೇರ್ಪಟ್ಟು ಸಂಸ್ಕೃತಕ್ಕೆ ಪರಿವರ್ತನವಾದವು.

ಇಲ್ಲಿಯ ೧೯ ಕಥೆಗಳನ್ನು ಕಣ್ಣುಮುಚ್ಚಿ ಅನುಸರಿಸಲಾಗಿದೆ ಎನ್ನುವಂತಿಲ್ಲ 'ಆಯಂಬಿಲ, ಜಾವಜ್ಜೀವಂ, ಬೋಲಹ ಬೋಲಹ' ಎಂಬ

ಪ್ರಯೋಗಗಳು ಕನ್ನಡ ಗ್ರಂಥಕ್ಕೆ ಪ್ರಾಕೃತ ಮೂಲವಿರಬೇಕೆಂಬುದನ್ನು ತೋರಿಸುತ್ತವೆ. ಕಥೆಗಳಲ್ಲಿ ಮೂಲದಿಂದ ಬದಲಾವಣೆಯಾಗಿದೆ. ಎಂಬುದಕ್ಕೆ ನಾಗಶ್ರೀಯ ಕಥೆ, ಮೊದಲಾದವುಗಳನ್ನು ಎತ್ತಿತೋರಿಸಬಹುದು. ಒಟ್ಟಿನಲ್ಲಿ ಕಥನ ಸಾಮಗ್ರಿಯನ್ನು ಮೂಲದಿಂದ ಎತ್ತಿಕೊಂಡು ಅದನ್ನು ವಿಸ್ತರಿಸಿ ಸ್ವಾರಸ್ಯವಾಗಿ ಹೇಳುವ ಕಥೆಗಾರಿಕೆ 'ವಡ್ಡಾರಾಧನೆ' ಯಲ್ಲಿ ತೋರಿದೆ ಎಂದೆನ್ನಬಹುದು. ಇದಕ್ಕೆ ದೃಷ್ಟಾಂತಗಳನ್ನೂ ಸುಕುಮಾರ ಸ್ವಾಮಿಯ ಕಥೆ ಮೊದಲಾದವುಗಳನ್ನೂ ಕೊಡಬಹುದು.

ಇಲ್ಲಿಯ ಕಥೆಗಳೆಲ್ಲ ಸಾಂಪ್ರದಾಯಿಕ, ನೀತಿಪರ, ವೈರಾಗ್ಯ ಬೋಧಕವಾಗಿದ್ದರೂ ಕಥಾ ಸೂತ್ರಗಳು ಒಂದರೊಳಗೊಂದು ಹೆಣೆದುಕೊಂಡು ಜಟಿಲವಾಗಿದ್ದರೂ ಪುನರುಕ್ತಿಗಳು ಹೇರಳವಾಗಿದ್ದರೂ ಕಥೆಗಳ ಸಾರವತ್ತಾದ ಭಾಗವನ್ನು ತಿರುತಿರುಗಿ ಓದಬೇಕೆಂಬ ಆಶೆ ಹುಟ್ಟುತ್ತದೆ. ಇವಕ್ಕೆ ಕಾರಣವೆಂದರೆ ಸನ್ನಿವೇಶ, ಪಾತ್ರ, ಸಂವಾದ ಈ ಎಲ್ಲದರಲ್ಲಿ ಒಟ್ಟುಗೂಡಿ ತೋರಿದಂಥ ಸಜೀವತೆ, ಮಾನವೀಯತೆ; ಮೂಲವನ್ನು ಬಿಟ್ಟು ಸ್ವತಂತ್ರವಾಗಿ ರಚಿಸುವ ಉದ್ದೇಶವಿರದಿದ್ದರೂ, ಮೂಲ ವಿಸ್ತರಣೆಯ ಒಂದು ಸಹಜ ಕಲೆಯ ಮೂಲಕ 'ವಡ್ಡಾರಾಧನೆ' ಗೆ ಸ್ವತಂತ್ರ ಕೃತಿಯ ಸ್ವಾರಸ್ಯ ಬಂದಿದೆ, ಗದ್ಯ ಕಥೆಗಳ ವಾಙ್ಮಯದಲ್ಲಿ ಮೇಲಾದ ಸ್ಥಾನಕ್ಕೆ ಅರ್ಹತೆಯನ್ನು ತಂದಿವೆ.

ವಡ್ಡಾರಾಧನೆಯ ಗದ್ಯಶೈಲಿ ಇಡೀ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿದೆ. ಇದರಲ್ಲಿ ಕನ್ನಡ ದೇಸಿಗೆ ವಿಶೇಷವಾದ ರೀತಿಯಲ್ಲಿ ಪ್ರಾಧಾನ್ಯವನ್ನು ಕೊಟ್ಟು, ಆದರೂ ಸಂಸ್ಕೃತವನ್ನು ತ್ಯಾಗಮಾಡದ ಒಂದು ಸಮನ್ವಯ ಕಂಡು ಬರುತ್ತದೆ. ಪ್ರಾಕೃತ ಪ್ರಭಾವಿಯೂ ಆದ ವಿಶಿಷ್ಟ ಸಂಪನ್ನದೇಶಿಗೆ, ಪಟ್ಟಿಗಟ್ಟದೆ ಇಲ್ಲಿ. ಶಿವಕೋಟಿಯ ಕಲೆಗಾರಿಕೆಯ ಹಾಗೂ ಶೈಲಿಯ ಮಹಿಮೆ ಇರುವದೇ ಇದರಲ್ಲಿ.

ಶೈಲಿಯೊಂದನ್ನೇ ನೋಡಿದರೂ ಇಲ್ಲಿ ಅಚ್ಚಗನ್ನಡದ ಒಲವು ನಿಚ್ಚಳವಾಗಿದೆ. ವಿರಳವಾಗಿದ್ದ ಸಂಸ್ಕೃತ ಪದಗಳು ಕನ್ನಡದಲ್ಲಿ ಬೆರೆತುಹೋದವುಗಳಾದ ಕಾರಣ ವಿರಸವನ್ನು ಒದಗಿಸಿಲ್ಲ. ಹೀಗೆ ಕನ್ನಡ ದೇಸಿ, ಹಳಗನ್ನಡದ ವ್ಯಾಕರಣ ಪ್ರಕ್ರಿಯೆಯಿಂದ ಮಾರ್ಗವಾಗಿ ನಡುನಡುವೆ ಪೂರ್ವದ ಹಳಗನ್ನಡದ

ಪ್ರಯೋಗದಿಂದ ಪ್ರಾಚೀನ ಕಳೆಯಿಂದ ಕೂಡಿ ಇರುವದೇ ಈ ಗದ್ಯದ ವೈಶಿಷ್ಟ್ಯ. ಸಂವಾದಗಳಲ್ಲಿಯೂ ಇಲ್ಲಿ ದೇಸಿಯ ದಿಗ್ವಿಜಯವಿದೆ. ಅದರಿಂದ ಉಂಟಾಗುವ ಪರಿಣಾಮ ಅನ್ಯಾದೃಶವಾದದ್ದು. ಇಲ್ಲಿಯ ಅನೇಕ ಪ್ರಯೋಗಗಳು ಅಂದಿನಿಂದ ಇಂದಿನ ವರೆಗೂ ದೇಶಿಯ ಮೂಲ ಸ್ವರೂಪವು ಒಂದೇ ಎಂಬುದನ್ನು ಸೂಚಿಸುತ್ತವೆ. ಇಲ್ಲಿಯ ಗದ್ಯವು ಶಕ್ತಿಯುತವೂ, ಅರ್ಥವಾಹಿನಿಯೂ ಆಗಿ ತನ್ನ ಬಲವಾದ ಎಳೆತದಿಂದ ಓದುಗನನ್ನು ಮುಂದೆ ಮುಂದೆ ಕರೆದೊಯ್ಯುತ್ತದೆ.

ಹೀಗೆ 'ವಡ್ಡಾರಾಧನೆ'ಯು ಪಂಪ ಪೂರ್ವಯುಗದಲ್ಲಿಯ ಮೇಲಾದ ಗದ್ಯಗ್ರಂಥವಲ್ಲದೆ ಇಡಿಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಚಿರಂತನವಾಗಿ ನೆನೆಯತಕ್ಕ ವೈಶಿಷ್ಟ್ಯ ಪೂರ್ಣವಾದ ಕೃತಿಯಾಗಿದೆ. ಅದೇನು ಮಹೋನ್ನತ ಕಾವ್ಯವಲ್ಲ. ಕಾವ್ಯದ ಮಹತಿಯೆಂಬುದು ಅಂಶತಃ ಆದರೂ ತೋರಿದ ಕಾವ್ಯವಲ್ಲ. ಅದನ್ನು ಕನ್ನಡಕ್ಕೆ ನೀಡಿದ ಶಿ. ಕೋಟಿ ಕನ್ನಡ ಮಾತಿನ ಜೀವಾಳವನ್ನು ಅರಿತು ಅದನ್ನು ಅಂದವಾಗಿ ಬಳಸಿದ ಗ್ರಂಥಕಾರರಲ್ಲಿ ಮೇಲಾದವನು. 'ವಡ್ಡಾರಾಧನೆ'ಯು ಇಂದಿಗೂ ಒಂದರ್ಥದಲ್ಲಿ ಮಾದರಿಯಾಗಬಲ್ಲದು, ಕನ್ನಡ ನುಡಿಯ ಬೆಳವಣಿಗೆಗೆ ಮುಂದೆಯೂ ನೆರವಾಗಬಲ್ಲದು.

ಪ್ರಶ್ನೆ ೫— ೧೦ ನೆಯ ಶತಮಾನದ ಸಾಹಿತ್ಯದ ರೂಪರೇಷೆಗಳನ್ನು ನಿರೂಪಿಸಿರಿ.

ಉತ್ತರ— ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನವು ಚಂಪೂಶೈಲಿಯ ಸುವರ್ಣಯುಗವು ವೀರರಸ ಪ್ರಧಾನವಾದ ಕಾವ್ಯಗಳ ಜೊತೆಗೆ ಧಾರ್ಮಿಕ ತತ್ವಗಳನ್ನು ಕಾವ್ಯ ಮುಖದಿಂದ ಬೆಳಗಿದ ಕಾಲವು. ರತ್ನತ್ರಯರ ಕನ್ನಡ ಸಾಹಿತ್ಯ ಭಾಂಡಾರಕ್ಕೆ ಅಮೌಲ್ಯವಾದ ಕಾವ್ಯ ರತ್ನಗಳನ್ನು ಒದಗಿಸಿ ಅದರ ಹಿರಿಮೆಯನ್ನು ಬೆಳಗಿದ ಶತಮಾನವಿದು. ಸುಮಾರಾಗಿ ಕ್ರಿಸ್ತಶಕ ೫ನೆಯ ಶತಮಾನದಿಂದಲಾದರೂ ಬೆಳೆಯುತ್ತ ಬಂದ ಪ್ರೌಢ ಸಾಹಿತ್ಯ ಸಂಪ್ರದಾಯವು ಈ ಶತಮಾನದಲ್ಲಿ ಸುಭದ್ರವಾಗಿ ನೆಲೆಯೂರಿ ನಿಂತಿದೆ. ಹಿಂದಿನ ಕಾಲದ ಕಾವ್ಯ ಶಿಖರಗಳು ಮಂಜಿನ ಮುಸುಕಿನಲ್ಲಿ ಮರೆಯಾಗಿದ್ದರೆ ಈ ಶತಮಾನದಲ್ಲಿ ಕೆಲವು ಅತ್ಯುನ್ನತವಾದ ಕಾವ್ಯ ಶಿಖರಗಳು ನಿಚ್ಚಳವಾಗಿ ಕಣ್ಣಿಗೆ ಬೀಳುತ್ತವೆ, ನಲಿವನ್ನೂ ಬೆರಗನ್ನೂ ಉಂಟುಮಾಡುತ್ತವೆ.

ಎಂದಿನಂತೆ ಈ ಶತಮಾನದ ಸಾಹಿತ್ಯದ ರೂಪರೇಷೆಗಳಿಗೆ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತಿಗಳೇ ಕಾರಣವಾಗಿರುವದರಿಂದ ಇವುಗಳ ಸೂಕ್ಷ್ಮ ಪರಿಚಯವನ್ನು ಮೊದಲು ಮಾಡಿಕೊಳ್ಳುವದು ವಿಹಿತವೇ ಸರಿ. ಈ ಶತಮಾನವು ರಾಜಕೀಯ ದೃಷ್ಟಿಯಿಂದ ಉಜ್ವಲವಾದರೂ ಅಸ್ಥಿರವಾದುದು. ಅರಸು ಮನೆತನಗಳೂ, ಮತಗಳೂ ಏಳುಬೀಳುಗಳನ್ನು ಕಂಡರೂ ವೀರಸತ್ವವು ಕನ್ನಡ ನಾಡನ್ನು ಕಾಯ್ದುಕೊಂಡು ಬಂದು ಮತಧರ್ಮಗಳಿಗೆ ಉದಾರಾಶ್ರಯವನ್ನು ನೀಡಿದೆ. ೩ನೆಯ ಕೃಷ್ಣನು ರಾಷ್ಟ್ರಕೂಟ ರಾಜ್ಯವನ್ನು ವಿಸ್ತರಿಸಿದನು. ತಳಕಾಡಿನ ಗಂಗರೂ ವೇಮುಲ ನಾಡಿನ ಚಾಲುಕ್ಯರೂ ಸಾಮಂತ ಪ್ರಮುಖರಾಗಿದ್ದರು. ಈ ಶತಮಾನದ ಕೊನೆಗೆ ಬಾದಾಮಿಯ ಚಾಲುಕ್ಯರು ಸ್ವತಂತ್ರರಾದರು. ಕಲ್ಯಾಣ ಚಾಲುಕ್ಯವಂಶ ತಲೆದೋರಿತು. ಹಬ್ಬುತ್ತಿರುವ ಜೈನ ಧರ್ಮಕ್ಕೆ ಹೊರನಾಡಿನ ಶೈವರಿಂದ ತೊಂದರೆ ಒದಗುತ್ತಿದ್ದರೂ ಒಳನಾಡಿನ ವೈದಿಕ ಮತಗಳೊಡನೆ ಅದಕ್ಕೆ ಪ್ರೋತ್ಸಾಹವು ದೊರೆಯುತ್ತಲೇ ಇತ್ತು.

೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟರೂ ಗಂಗರೂ ಜೈನಧರ್ಮಕ್ಕೆ ವಿಶೇಷವಾದ ಪೋಷಕರಾಗಿದ್ದರು. ವೀರಚಾವುಂಡರಾಯನಿಂದ ಶ್ರವಣಬೆಳ್ಗೊಳದಲ್ಲಿ ಭವ್ಯವಾದ ಗೊಮ್ಮಟೇಶ್ವರ ಮೂರ್ತಿಯ ಪ್ರತಿಷ್ಠಾಪನೆಯಾಯಿತು. ಒಟ್ಟಿನಲ್ಲಿ ೧೦ನೆಯ ಶತಮಾನವೆಂದರೆ ಶೈವ ವೈಷ್ಣವ ಧರ್ಮಗಳ ಪ್ರಸಾರವು ಹೆಚ್ಚಾಗಿ ಜೈನಧರ್ಮವು ಕುಂದಿದ ಕಾಲವೆಂಬ ಅಭಿಪ್ರಾಯವು ಸರಿಯಾಗಲಾರದು. ಸರಿಯಾದ ವಿಚಾರವೆಂದರೆ ಶೈವ ವೈಷ್ಣವ ಧರ್ಮಗಳ ಪ್ರಸಾರವನ್ನು ಮಾಡಿದ ರಾಜರು ಜೈನ ಧರ್ಮವನ್ನು ಪುರಸ್ಕರಿಸಿದರು. ಪಂಡಿತರಲ್ಲಿ ಮತೀಯ ಸಂಘರ್ಷಗಳೂ ವಾದ ವಿವಾದಗಳೂ ನಡೆದಿರಬೇಕು. ಜೈನ ಪ್ರಚಾರಕವಾದ ವಾದಸರಣಿಗೆ ಪುಟ ದೊರೆತಿರಬೇಕು.

ಸಾಮಾಜಿಕ ಜೀವನದಲ್ಲಿ ರಾಜಕೀಯ ಹಾಗೂ ಧಾರ್ಮಿಕ ಸ್ಥಿತ್ಯಂತರಗಳ ಪಡಿನೆಳಲು ಸ್ವಾಭಾವಿಕವಾಗಿ ಮೂಡಿರಬಹುದಾದರೂ ವಿಕೇಂದ್ರೀಕೃತವಾದ ಅಂದಿನ ಜನಜೀವನವು ಒಟ್ಟಿನಲ್ಲಿ ಸ್ವಸ್ಥವಾಗಿ ಸಾಂಪ್ರದಾಯಿಕವಾಗಿ ಬಾಳುತ್ತ ಬಂದಿರಬೇಕು. ಇದಕ್ಕೆ ಆಗಿನ ರಾಜರ ಉದಾರ ದೃಷ್ಟಿಯೇ ಮುಖ್ಯವಾಗಿತ್ತು ಎನ್ನಬಹುದು.

ಸಾಹಿತ್ಯ ದೃಷ್ಟಿಯಿಂದ ಈ ಶತಮಾನವು ಮಾರ್ಗ ಅಥವಾ ಪ್ರೌಢಸಂಪ್ರದಾಯದ ಸ್ಥಿರತೆ ಮತ್ತು ಘನತೆಗಳನ್ನು ಏಕರೂಪವಾಗಿ ಬೆಳಗಿದೆ. ನವರಸಭರಿತವಾದ ಗದ್ಯ ಪದ್ಯ ಕಾವ್ಯಗಳು ರಚಿತವಾಗಿದ್ದರೂ ವೀರ ಹಾಗೂ ಶಾಂತ ರಸಗಳಿಗೆ ಪ್ರಾಧಾನ್ಯ ದೊರೆತಿದೆ. ಇವುಗಳಲ್ಲಿ ಮೊದಲನೆಯದು ಲೌಕಿಕ ಕಾವ್ಯಗಳಲ್ಲಿ ಹಾಗೂ ಎರಡನೆಯದು ಧಾರ್ಮಿಕ ಇಲ್ಲವೆ ಮತೀಯ ಕಾವ್ಯಗಳಲ್ಲಿ ಕಾಣಬಹುದು.

ಇಲ್ಲಿ ಹೆಚ್ಚು ಜನ ಕವಿಗಳು ಜೈನ ಮತೀಯರು. ಸ್ವತಂತ್ರ ಕಾವ್ಯಗಳನ್ನು ರಚಿಸಿದವರೆಲ್ಲರೂ ಅವರೇ. ಕಾವ್ಯ ವಿಷಯದಲ್ಲಿ ಮೇಲೆ ಹೇಳಿದಂತೆ ಲೌಕಿಕ ಹಾಗೂ ಧಾರ್ಮಿಕ ಇಲ್ಲವೇ ಆಗಮಿಕ ಎಂಬ ಹಂಚಿಕೆ ನೆಲೆಗೊಂಡಿದೆ. ಈ ಶತಮಾನದ ಪ್ರಸಿದ್ಧ ಕವಿಚಕ್ರವರ್ತಿಗಳ ರತ್ನತ್ರಯರೂ ಆದ ಪಂಪ, ಪೊನ್ನ, ರನ್ನರು ಒಂದು ಲೌಕಿಕ, ಇನ್ನೊಂದು ಆಗಮಿಕ ಕಾವ್ಯವನ್ನು ರಚಿಸಿದರು. ಈ ಪದ್ಧತಿ ಈ ಮೊದಲೇ ನಡೆದು ಬಂದಿತ್ತೆಂಬುದನ್ನು ೧ನೆಯ ಗುಣವರ್ಮನ ಶೂದ್ರಕ ಹಾಗೂ ಹರಿವಂಶಗಳಿಂದ ವ್ಯಕ್ತವಾಗುತ್ತದೆ.

ಲೌಕಿಕ ಕಾವ್ಯಗಳಲ್ಲಿ ತಮ್ಮ ಆಶ್ರಯದಾತ ರಾಜನ ಚರಿತ್ರೆ, ತಾತ್ಕಾಲೀನ ರಾಜಕೀಯ ಹಾಗೂ ಇತರ ಜನಜೀವನ ಸೂಚಿಸುವ ತಾಂತ್ರಿಕ ಅಂಶಗಳು ಇವೆ. ಈ ಅಂಶಗಳನ್ನು ಬೆಳಗಿಸಲು ರಾಮಾಯಣ ಮಹಾಭಾರತ, ಪುರಾಣಗಳ ಕಥಾವಸ್ತು ಅನುಕೂಲವಾಯಿತು. ನೇರವಾದ ಚರಿತ್ರ ಕಾವ್ಯಗಳಿಗಿಂತ ಬೇರೆಯಾದ ಈ ಸರಣಿ ಕನ್ನಡ ಹಾಗೂ ಭಾರತೀಯ ಸಾಹಿತ್ಯಕ್ಕೆ ವಿಶಿಷ್ಟವಾದದ್ದಾಯಿತು.

ಆಗಮಿಕ ಕಾವ್ಯಗಳು ತೀರ್ಥಂಕರರು, ಚಕ್ರವರ್ತಿಗಳು, ಮಹಾಪುರುಷರ ಇವರ ಮಹಾಜೀವನ ಚರಿತ್ರೆಗಳಾಗಿ ಜೈನ ಧರ್ಮ ಪ್ರಸಾರಕ್ಕೆ ವಾಹಕಗಳಾದುವು. ಇದರಿಂದಾಗಿ ಜೈನ ಪುರಾಣಗಳೆಂಬ ಪ್ರಕಾರವೊಂದು ಮೊದಲಾಯಿತು.

ಚಂಪೂ ಕಾವ್ಯ ರೂಪವು ತನ್ನ ಕೀರ್ತಿ ಶಿಖರಕ್ಕೇರಿತು. ಪ್ರಮಾಣ ಸ್ವರೂಪವನ್ನು ತಾಳಿತು. ಚಂಪೂವಿನ ಚೆಲುವಾದ ರೂಪದಲ್ಲಿ ಗದ್ಯಪದ್ಯದ ಹಿತವಾದ ಬೆರಕೆ, ಕವಿಪ್ರತಿಭೆ, ಕವಿ ಸಮಯಗಳ ಸುಂದರ ಸಮನ್ವಯ ಇಲ್ಲಿ ಕಂಡು ಬರುತ್ತದೆ. ಸಂಸ್ಕೃತ ಮಹಾಕಾವ್ಯದ ಪ್ರಮುಖ ಲಕ್ಷಣಗಳನ್ನು ಒಳಗೊಂಡರೂ ಕಂದವೃತ್ತಗಳ ವಿಶಿಷ್ಟ ರೀತಿಯ ಸ್ಪರ್ಧೆಯಿಂದ ಈ ಶತಮಾನ

ದಲ್ಲಿ ಚಂಪೂ 'ಕನ್ನಡ ಚಂಪೂ', ಆಯಿತು, ಸತ್ಕಾವ್ಯ ಹಾಗೂ ಮಹೋನ್ನತ ಕಾವ್ಯಕ್ಕೆ ಪ್ರಭಾವಿಯಾದ ಸಾಧನವಾಯಿತು. ಜೈನ ಪುರಾಣಗಳ ವಸ್ತು ವಿಶೇಷ ರಸನಿರೂಪಣೆ, ಮತ ಪ್ರತಿಪಾದನೆ ಇವುಗಳನ್ನೊಳಗೊಂಡ ಚಂಪೂ ರೂಪವು ಇನ್ನಷ್ಟು ವೈಶಿಷ್ಟ್ಯ ಸಂಪನ್ನವಾಗಿ ಈ ಶತಮಾನದಲ್ಲಿ ಮೆರೆದಿದೆ.

ಈ ಶತಮಾನದ ಕಾವ್ಯಗಳಲ್ಲಿ ನವರಸಗಳೆಲ್ಲ ಬಂದಿವೆಯಾದರೂ ಒಮ್ಮೆ ವೀರ–ರೌದ್ರ ಒಮ್ಮೆ ಅದ್ಭುತ - ಶಾಂತ ರಸಗಳಿಗೆ ಪ್ರಾಧಾನ್ಯತೆ ದೊರೆತಿದೆ. ಸಂಸ್ಕೃತ ಮಹಾ ಕಾವ್ಯಗಳಲ್ಲಿಯಂತೆ ಶೃಂಗಾರವು ವೀರದ ಸ್ಥಾನದಲ್ಲಿ ಬಂದಿಲ್ಲ. ಧಾರ್ಮಿಕ ಕಾವ್ಯಗಳಲ್ಲಿ ಉಳಿದ ರಸಗಳಿಗೆ ಮುಕುಟ ಪ್ರಾಯವಾಗಿ ಶಾಂತ ರಸವು ಬಂದು ಜೀವನ ಸಮಕ್ ದೃಷ್ಟಿಯನ್ನು ಅರಳಿಸುತ್ತದೆ.

ಅಲಂಕಾರ, ವರ್ಣನೆ, ಕವಿಸಮಯ, ಶೈಲಿ, ಛಂದಸ್ಸು ಇವುಗಳಲ್ಲಿ ಸಂಸ್ಕೃತ ಕಾವ್ಯಗಳ ಹಾಗೂ ಸಂಸ್ಕೃತ ಭಾಷೆಯ ವರ್ಚಸ್ಸು ಈ ಶತಮಾನದ ಕೃತಿಗಳ ಮೇಲೆ ಬಹಳವಾಗಿದ್ದರೂ ಅಪರಿಹಾರ್ಯವಾದಷ್ಟನ್ನೇ ಬಳಸಿಕೊಂಡು ಕನ್ನಡ ದೇಸಿಯ ಪ್ರಭಾವವನ್ನು ತರುವ ಪ್ರಯತ್ನ ನಡೆದಿವೆ. ದೇಸೀ ಮಾರ್ಗ ಗಳ ಸುಂದರ ಸಂಗಮಕ್ಕೆ ತಳಹದಿ ಹಾಕಲಾಗಿದೆ. ಕಥಾರಚನೆ, ವರ್ಣನೆ, ಕಲ್ಪನೆಗಳಲ್ಲಿ ಯಾಂತ್ರಿಕತೆ ಕಂಡುಬರುತ್ತಿದೆಯಾದರೂ ನಾವೀನ್ಯತೆಯು ತಲೆ ದೋರದೇ ಇಲ್ಲ.

'ಗದ್ಯ ಕಥಾ' ಎಂಬುದು 'ವಡ್ಡಾರಾಧನೆ' ಯಲ್ಲಿ ತನ್ನ ಪರಿಣತಿ ಯನ್ನು ತೋರಿ ಈ ಶತಮಾನದ 'ಚಾವುಂಡರಾಯ ಪುರಾಣ' ದಲ್ಲಿ ಶೈಲಿಯು ದೃಷ್ಟಿಯಿಂದ ಒಂದು ವಿಶೇಷ ರೂಪವನ್ನು ತೋರಿದೆ. ಇಲ್ಲಿಯ ಕನ್ನಡ ಗದ್ಯ ಶೈಲಿ ಇಂದಿಗೂ ಆದರ್ಶಪ್ರಾಯವಾಗಿದೆ, ಮಾರ್ಗದರ್ಶಕವಾಗಿದೆ.

ಈ ಕಾಲದ ಕಾವ್ಯಗಳಲ್ಲಿ ಸಂಗೀತ, ನೃತ್ಯ, ನಾಟಕಗಳ ವರ್ಣನೆಯಿದೆ. ನಾಟಕ ಸದೃಶ್ಯವಾದ ದೃಶ್ಯಗಳಿದ್ದರೂ ನಾಟಕಗಳು ಮಾತ್ರ ಇಲ್ಲ. ಬ್ರಾಹ್ಮಣ ಗ್ರಂಥಕಾರರು ಈ ಶತಮಾನದಲ್ಲಿ ತೀರ ಕಡಿಮೆ. ಅವರಲ್ಲಿ ಪ್ರಮುಖನಾದ ೧ನೆಯ ನಾಗವರ್ಮನು ಲೌಕಿಕ ಹಾಗೂ ಶಾಸ್ತ್ರ ಗ್ರಂಥವನ್ನು ಸಾಮಾನ್ಯವಾಗಿ ಅನುವಾದಿಸಿದ್ದಾನೆ. ಈ ಶಾಸ್ತ್ರ ಗ್ರಂಥವು 'ಛಂದೋಂಬುಧಿ' ಯಾಗಿದೆ.

ಭಾಷೆ ಸಂಸ್ಕೃತಮಯವಾಗಿದೆ ಎಂದು ತೋರಿ ಬಂದರೂ ಹದವರಿತು ಯೋಗ್ಯ ಪ್ರಸಂಗಗಳಲ್ಲಿ ತಿರುಳ್ಗನ್ನಡದ ನುಡಿಮುತ್ತುಗಳೂ, ಪಡೆನುಡಿಗಳೂ,

ಇಡಿನುಡಿಗಳೂ, ಜಾಣ್ನುಡಿಗಳೂ, ಗಾದೆಯ ಮಾತುಗಳೂ, ಒಳಕೆ
ಮಾತುಗಳೂ ಬಂದು ಈ ಶತಮಾನದ ಭಾಷೆಗೆ ವಿಶಿಷ್ಟವಾದ ಮೆರುಗನ್ನು
ತಂದುಕೊಟ್ಟಿವೆ. ಕನ್ನಡದ ಸತ್ವದಿಂದ ಚಂಪೂ ಅದ್ಭುತ ಪರಿಣಾಮ ಬೀರಲ
ಶಕ್ತವಾಗಿದೆ. ಕನ್ನಡ ಕಾವ್ಯ ಗಂಗೆಗೆ ಗಂಗೋತ್ರಿಯಾಗಿದೆ.

ಒಟ್ಟಿನಲ್ಲಿ ಈ ಶತಮಾನದ ಲೌಕಿಕ ಹಾಗೂ ಧಾರ್ಮಿಕ ಪ್ರೌ
ಕಾವ್ಯಗಳು ಕನ್ನಡ ಸಾಹಿತ್ಯವನ್ನು, ಸಂಸ್ಕೃತಿಯನ್ನು ಬೆಳಗಿವೆ. ಸಂಸ್ಕೃ
ಪ್ರಭಾವ ಬಹಳವಾಗಿ ಕಂಡರೂ ಕನ್ನಡತನದ ಬಲವಿದೆ. ರಾಜಸ್ಥಾನದಲ್ಲಿಯ
ಸಾಹಿತ್ಯ ಹೆಚ್ಚಾಗಿ ಪೋಷಿಸಲ್ಪಟ್ಟಿದೆ. ಪಂಡಿತ ಪ್ರಚುರವಾಗಿದೆ. ಕನ್ನಡ
ಚಂಪೂ ಪದ್ಧತಿಯು ಹುಟ್ಟಿಕೊಂಡಿದೆ. ವೀರ ಹಾಗೂ ಶಾಂತರಸಗಳ
ಅನುಕ್ರಮವಾಗಿ ಲೌಕಿಕ ಹಾಗೂ ಧಾರ್ಮಿಕ ಕಾವ್ಯಗಳಲ್ಲಿ ಮುಖ್ಯ
ರಸಗಳಾಗಿವೆ.

ಪ್ರಶ್ನೆ ೬— ಟಿಪ್ಪಣಿಗಳನ್ನು ಬರೆಯಿರಿ (ಅ) ಪಂಪ, (ಆ) ಪೊನ್ನ,
(ಇ) ರನ್ನ, (ಈ) ಚಾವುಂಡರಾಯ, (ಉ) ನಾಗವರ್ಮ.

ಉತ್ತರ (ಅ) ಪಂಪ— ಪಂಪನುಡಿಯನೋ ಪಸರಿಪ ಕನ್ನಡಕ್ಕೊ
ರ್ವನೆ ಆದ ಸತ್ಕವಿಯು. ಈ ಮೊದಲು ಹುಲುಸಾಗಿ ಸಾಹಿತ್ಯ ಬೆಳೆದದ್ದರಿಂದ
ಅವನನ್ನು ಆದಿಕವಿ ಎಂದು ಕೆಲವರು ಒಪ್ಪದಿದ್ದರೂ ಕನ್ನಡ ಸಾಹಿತ್ಯಕ್ಕೆ ಹಿರಿ
ದಾದ ಇತಿಹಾಸ ಕಾವ್ಯವನ್ನು ರಚಿಸಿ ಆದಿಕವಿಯಾದನು. ಕವಿಯಲ್ಲದೇ ಅವನು
ಕಲಿಯೂ ಆಗಿದ್ದಾನೆ. ಈ ಮಾತನ್ನು 'ಕವಿತೆ ನೆಗಳ್ತೆಯಂ ಸಿರಿಸೆ ಜೋಳದ ಪಾಳಿ
ನಿಜಾದಿನಾಥನಾಹವದೊಳರಾತಿ ನಾಯಕರ ಪಟ್ಟನೆ ಪಾರಿಸೆ.... ಏಂ ಕಲಿಯೋ
ಸತ್ಕವಿಯೋ ಕವಿತಾಗುಣಾರ್ಣವಂ' ಎಂಬಹೊಗಳಿಕೆಯಿಂದ ವಿದಿತವಾಗುತ್ತದೆ.

ಪಂಪನು ಮತದಿಂದ ಜೈನನಾಗಿದ್ದರೂ ಪರಂಪರೆಯಿಂದ ವೈದಿಕನಾಗಿದ್ದನು.
ಅವನ ಮನೆತನ ಯಜ್ಞ ಯಾಗಾದಿಗಳನ್ನು ಮಾಡಿದ ವೈದಿಕ ಬ್ರಾಹ್ಮಣರದು.
ಅವನ ತಂದೆಯಾದ ಅಭಿರಾಮ ದೇವನೇ ಜೈನ ಧರ್ಮ ಸ್ವೀಕರಿಸಿದವನು.
ಆದ್ದರಿಂದ ಪಂಪನಲ್ಲಿ ವೈದಿಕ ಜೈನ ಪರಂಪರೆಗಳ ಉತ್ತಮ ಸಂಸ್ಕಾರಗಳು
ನೆಲೆಗೊಂಡವು. ಧರ್ಮಾಂತರ ಹೊಂದಿದ್ದರೂ ಧರ್ಮಾಂಧತೆ ಇವನಲ್ಲಿ ಇಲ್ಲ.

ಅವನ ಹುಟ್ಟೂರು ವೆಂಗಿ ಮಂಡಳದ ವೆಂಗಿಪಳು ಎಂಬ ಅಗ್ರಹಾರ.
ಅವನಿಗೆ ಆಶ್ರಯ ಕೊಟ್ಟ ಚಾಲುಕ್ಯ ದೊರೆ ೨ನೆಯ ಅರಿಕೇಸರಿಯ ರಾಜಧಾನಿ

ಪೆಂಗಿ ಮಂಡಲದ ಪಶ್ಚಿಮದ ಕಡೆ ಇದ್ದ ಲೆಂಬುಳ ಪಾಟಕ. ಆದರೂ ಅವನ ನೆನವೆಲ್ಲ ಬನವಾಸಿ ದೇಶದಲ್ಲಿ ವೆಂಬುದು 'ಆರಂಕುಶ ಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂದು ಅರ್ಜುನನ ಮುಖಾಂತರ ಹೇಳಿಕೊಂಡಿದ್ದ ರಿಂದ ವ್ಯಕ್ತವಾಗುವದು. ಅವನು ತನ್ನ ಕಾವ್ಯ ಕುಸುಮಗಳನ್ನು ಅರಳಿಸಿದ್ದು ಪುಲಿಗೆರೆಯ ತಿರುಳ್ಗನ್ನಡದಲ್ಲಿ.

ಪಂಪನ ಮೇರು ಕೃತಿಗಳೆರಡು, ಒಂದು 'ಪಂಪ ಭಾರತ'(ವಿಕ್ರಮಾರ್ಜುನ ವಿಜಯ), ಇನ್ನೊಂದು 'ಆದಿಪುರಾಣ', ಒಂದು ಲೌಕಿಕ ಇನ್ನೊಂದು ಆಗಮಿಕ. 'ಬೆಳಗುವೆನಿಲ್ಲಿ ಲೌಕಿಕ ಮನದಲ್ಲಿ ಜಿನಾಗುಮಮಂ' ಎಂದು ಅವನೇ ಹೇಳಿ ದ್ದಾನೆ. ಎರಡೂ ಪ್ರೌಢ ಚಂಪೂ ಗ್ರಂಥಗಳು. ಅವನ ಉಜ್ವಲ ಪ್ರತಿಭೆ ಪಾಂಡಿತ್ಯಗಳೊಡನೆ ಸಮಗ್ರವಾದ ಜೀವನಾನುಭವ, ವಿಶಾಲ ದೃಷ್ಟಿ, ಸಮನ್ವಯ ಬುದ್ಧಿ ಇವು ಬೆರೆತುಕೊಂಡು ಕನ್ನಡ ಕಾವ್ಯ ಮಾರ್ಗಕ್ಕೆ ಉನ್ನತ ಶಿಖರಗಳಾದ ಈ ಎರಡು ಸಂಸ್ಕೃತಿಗಳನ್ನು ನೀಡಿದವು.

ಆದಿಪುರಾಣವನ್ನು ಅವನು ಪಡೆದ ಪಿದ್ವತ್ತೆ ವಿವೇಕಗಳ ಪ್ರತೀಕವಾದ ಕೃತಿ, ಜಿನಸೇನಾಚಾರ್ಯರ 'ಪೂರ್ವ ಪುರಾಣ' ವೇ ಇದಕ್ಕೆ ಆಕರ. ಕಥಾ ವಸ್ತು, ಕಥನ ಕ್ರಮ ಭಾವ ಸಂಪತ್ತಿ, ಮತೀಯ ತತ್ವಬೋಧೆ ಇವೆಲ್ಲಕ್ಕೆ ಅವನು 'ಪೂರ್ವ ಪುರಾಣಕ್ಕೆ ಋಣಿಯಾಗಿದ್ದಾನೆ. ಆದರೆ ಇಲ್ಲಿ ಪುರಾಣಕ್ಕಿಂತ ಕಾವ್ಯದೃಷ್ಟಿ ಹೆಚ್ಚಾಗಿ ಫಲಿಸಿದೆ. ಇದು ಪ್ರೌಢವಾದ ಚಂಪೂಕಾವ್ಯ. 'ನೆಗಳ್ದಾದಿ ಪುರಾಣದೊಳಿರುವದು ಕಾವ್ಯಧರ್ಮಮಂ ಧರ್ಮಮುಮಂ' ಎಂದು ಅವನೇ ಹೇಳಿದುದು ಇಲ್ಲಿ ಸಾರ್ಥಕವಾಗಿದೆ. ನೀಲಾಂಜನೆಯ ನೃತ್ಯ ಸನ್ನಿವೇಶದಲ್ಲಿ ಇದು ಪೂರ್ಣ ಸಫಲವಾಗಿದೆ. ಆದಿನಾಥನ ಕಥೆಯಲ್ಲಿ ಕಾಮತ್ಯಾಗ, ಭರತನ ಕಥೆಯಲ್ಲಿ ಅಹಂಕಾರ ತ್ಯಾಗ, ಇವು ಸಮ್ಯುಕ್ತ್ವ ಸಿದ್ಧಿಗೆ ಪೂರ್ವ ಭಾವಿಗಳೆಂದು ತೋರಿಸಿದುವೇ ಇಲ್ಲಿಯ ವೈಶಿಷ್ಟ್ಯವಾಗಿವೆ.

ವ್ಯಾಸ ಭಾರತವನ್ನು 'ವಿಕ್ರಮಾರ್ಜುನ ವಿಜಯ'ವನ್ನಾಗಿ ಮಾರ್ಪಡಿಸಿ ದ್ದಾನೆ. ಗುರುಹಂಪದೇವ, 'ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ' ಹೇಳಿದರೆ ನೀನೆ ಹೇಳಬೇಕೆಂಬ ಸೂಚನೆ ಬಂದಾಗ ಭಾರತ ಕಥೆಯೊಂದಿಗೆ ತನ್ನ ದೊರೆಯ ಚರಿತ್ರೆಯನ್ನು ಕೂಡಿಸಿ ಬರೆದಿದ್ದಾನೆ.

'ವರ್ಣಕಂ ಕತೆಯೊಳಡಂಬಡಂ ಪಡೆಯೇ ಪೇಳ್ವೊಡೆ ಪಂಪನ ಪೇಳ್ಗುಂ' ಎ
ಪಂಡಿತರ ಪ್ರಶಂಸೆಯಲ್ಲಿ ಆತ್ಮವಿಶ್ವಾಸವಿದ್ದರೂ 'ವ್ಯಾಸ ಮುನೀಂದ್ರ ರು
ವಚನಾಮೃತವಾರ್ಧಿಯು ನೀಸುವೆಂ ಕವಿವ್ಯಾಸನೆಂಬ ಗರ್ವ ಮೆನಗಿಲ್ಲ' ಎ
ನಮ್ರತೆಯೂ ಇದೆ.

ಇಲ್ಲಿ ತನ್ನ ಒಡೆಯನಾದ ಅರಿಕೇಸರಿಯೇ ನಾಯಕ. ಅವನ
ಅರ್ಜುನನೊಡನೆ ತಾದಾತ್ಮ್ಯಗೊಳಿಸಿದ್ದಾನೆ. ಈ ದೃಷ್ಟಿಯಿಂದ ಭಾ
ಕಥೆಯಲ್ಲಿ ವ್ಯತ್ಯಾಸಗಳು ಅನಿವಾರ್ಯವಾದುವು. ಭಾರತದ ಕಥೆಗೆ ಮು
ಕಾರಣ ದ್ರೌಪತಿಯಾದರೂ ಅರ್ಜುನನೊಡನೆ ಪಟ್ಟವೇರುವವಳು ಸು
ಯಾಗಿದ್ದಾಳೆ. ಆದರೆ ಮುಖ್ಯ ಕಥೆಯ ನಿರೂಪಣೆಯಲ್ಲಿ ಮಾನವನ ಲೋ
ಅಸೂಯೆಗಳು ಭ್ರಾತೃಕಲಹದ ದುರಂತದಲ್ಲಿ ಪರಿಣಮಿಸಿದ್ದನ್ನು ಅದ್ಭುತ
ಆತ್ಮೀಯತೆಯಿಂದ ಬಣ್ಣಿಸಲಾಗಿದೆ.

'ಚಲದೊಳ್ ದುರ್ಯೋಧನಂ....' 'ನೆನೆಯದಿರಣ್ಣ ಭಾರತದೊಳ್
ನಾರುಮನೊಂದೆ ಚಿತ್ತದೋಳ್....' ಮುಂತಾದ ಪದ್ಯಗಳಲ್ಲಿ ಪಂಪನ ಪ
ರಚನಾ ಕೌಶಲ ಹಾಗೂ ಸಂಗ್ರಹಕಾರನ ದೃಷ್ಟಿ ವ್ಯಕ್ತವಾಗುತ್ತದೆ. ದುರ್ಯೋ
ಧನನು ಇಲ್ಲಿ ಸುಯೋಧನನಾಗಿದ್ದಾನೆ, ಉದಾತ್ತ ಚರಿತನಾಗಿದ್ದಾನೆ. ಅದ
ಕರ್ಣನ ವ್ಯಕ್ತಿತ್ವಕ್ಕೆ ಪಂಪನು ಮಾರುಹೋಗಿ 'ಭಾರತ' ವನ್ನು 'ಕರ್ಣ
ಯನ' ವನ್ನಾಗಿಸಿದ್ದಾನೆ.

ಪಂಪನು ಕನ್ನಡದ ಕಾಳಿದಾಸ 'ಹಿತಮಿತ ಮೃದು ವಚನ, 'ಕಿರಿದ
ಳುಪಿದು', 'ರಸಧ್ವನಿ ಪ್ರಣವತೆ', ದೇಸಿಯ ಔಚಿತ್ಯ ಮತ್ತು ಪ್ರಣವತೆ, ಸ
ಸೂಕ್ಷ್ಮತೆ ಮೊದಲಾದ ಗುಣಗಳು ಪಂಪನ ಶೈಲಿ ಹಾಗೂ ವರ್ಣನೆಗ
ಕಾಣುತ್ತೇವೆ. 'ಪ್ರಸನ್ನ ಗಂಭಿರ ವಚನರಚನ ಚತುರಂ' ಎಂದು ಹ
ಕೊಂಡದ್ದು ಸಾರ್ಥಕವೇಸರಿ. 'ಬಗೆಪೊಸತಪ್ಪದಾಗಿ ಮೃದು ಬಂಧುದೊಳೊ
ವದು, ಒಂದಿ ದೇಶಿಯೋಳ್ ಪುಗುವದು, ಪೊಕ್ಕು ಮಾರ್ಗದೊಳೆ ತಳ್ವ
ತಳ್ತೊಡೆ ಕಾವ್ಯ ಬಂಧಪೊಪ್ಪುಗುಂ' ಎಂಬ ಅವನ ಶೈಲಿಯ ಪ್ರತಿಕ್ರಿಯೆ ಅ
ಕೃತಿಗಳಿಗೆ ಒಪ್ಪುತ್ತದೆ.

ಪಂಪನು ಅನೇಕರಿಗೆ ಸ್ಫೂರ್ತಿಯ ಸೆಲೆಯಾಗಿದ್ದಾನೆ. ಯುಗಪುರ
ನಾಗಿದ್ದಾನೆ. ಕನ್ನಡ ತಾಯಿಯ ಮಣಿಹಾರದಲ್ಲಿಯ ನಾಯಕಮಣಿಯಾ

ದ್ದಾನೆ. ಅವನ ಓಜೆ, ಅವನ ಗೀರ್ಗುಂಫನದಪೆಂಪು........ ಹೀಗೆ ಅವನಲ್ಲಿ ಮುಂದಿನ ಕವಿಗಳು ಒಂದೊಂದು ಗುಣವನ್ನು ಕಂಡುಕೊಂಡಿದ್ದಾರೆ. ಅವನು ಕನ್ನಡ ಮೊದಲನೆಯ ಕವಿ, ಅವನ ಕಾಲ ಸುಮಾರು ೯೪೧ (ಕ್ರಿಸ್ತಶಕ), ನಾಡೋಜನಾದ ಪಂಪ' ಬರಿಯ ಆದಿಕವಿ (ಕನ್ನಡದ) ಮಾತ್ರವೇ ಅಲ್ಲ. ಸಾವಿರ ವರ್ಷಕ್ಕೆ ಹಿಂದಿನ ಕನ್ನಡ ರಾಷ್ಟ್ರೀಯ ಪುರುಷರೊಳಗೊಬ್ಬನಾಗಿ ರಾರಾಜಿಸಿದ್ದಾನೆ, ರತ್ನತ್ರಯರಲ್ಲಿ ಶಿರೋರತ್ನವಾಗಿದ್ದಾನೆ.

(ಆ) ಪೊನ್ನ— ಪೊನ್ನನು ರತ್ನತ್ರಯರಲ್ಲಿ ಎರಡನೆಯವನು. ಇವನ ಕಾಲ ಕ್ರಿಸ್ತ ಶಕ ೯೫೦. ಆತ್ಮ ಚರಿತ್ರೆಗಿಂತ ಆತ್ಮಪ್ರಂಶಸೆಯೇ ಇವನ ಕಾವ್ಯ ಗಳಲ್ಲಿ ಕಂಡುಬರುತ್ತದೆ. ಇವನು ವೆಂಗಿಮಂಡಲದವನೇ ಪುಂಗನೂರಿನ ಮಲ್ಲ ಪಾರ್ಯ ಮತ್ತು ಪುನ್ನಮಾರ್ಯರು ಇವನಿಂದ 'ಶಾಂತಿ ಪುರಾಣ'ವನ್ನು ಹೇಳಿಸಿದರು.

ಪೊನ್ನನ ಕೃತಿಗಳು ಮೂರು 'ಶಾಂತಿ ಪುರಾಣ', 'ಭುವನೈಕ್ಯ ರಾಮಾ ಭ್ಯುದಯ', 'ಜಿನಾಕ್ಷರ' ಮಾಲೆ' 'ಗತಪ್ರತ್ಯಾಗತ'ವನ್ನೂ ಬರೆದಿರುವನೆಂದು ತಿಳಿದು ಬರುತ್ತದೆ. ಆದರೆ ಉಪಲಬ್ಧ ಗ್ರಂಥಗಳೆಂದರೆ 'ಶಾಂತಿ ಪುರಾಣ' ಹಾಗೂ 'ಜಿನಾಕ್ಷರ ಮಾಲೆ' ಗಳೆರಡೇ. "ಲೋಕೋತ್ತರ ಲೌಕಿಕ ಪರಿಣತಿ ಪುನ್ನಿಗಂಗೆ ಶಾಂತೀಶ್ವರ ರಾಮ ಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ" ಎಂಬುದ ರಿಂದ 'ಶಾಂತಿ ಪುರಾಣ'ವು ಪೊನ್ನನ ಧಾರ್ಮಿಕ ಗ್ರಂಥ ಹಾಗೂ "ರಾಮ ಕಥೆ" ಯು ಲೌಕಿಕ ಗ್ರಂಥವೆಂದು ತಿಳಿದು ಬರುತ್ತದೆ. 'ಜಿನಾಕ್ಷರ ಮಾಲೆ' ಯಲ್ಲಿ ಜಿನಸ್ತುತಿ ಪರವಾದ ೩೯ ಕಂದ ಪದ್ಯಗಳಿವೆ. 'ಗತಪ್ರತ್ಯಾಗತ'ವು ಸಂಸ್ಕೃತ ಕಾವ್ಯವಾಗಿರಬೇಕು. ಯಾಕಂದರೆ 'ಸಕ್ಕದಂ ಕನ್ನಡ ಮೆಂಬೆರಡುಂ ಕವಿತೆಯ ಒಲ್ಮೆಗೆ ಬೆರಲೆತ್ತಿದ ನೆಳೆಯೊಳೀ ಕುರುಳಗ್ಗಳ ಸವಣಂ' ಎಂಬುದರಿಂದಲೂ 'ಉಭಯ ಕವಿಚಕ್ರವರ್ತಿ' ಎಂಬ ಬಿರುದಿನಿಂದಲೂ ಇದನ್ನು ಹೇಳಬಹುದು.

೧೪ ಆಶ್ವಾಸಗಳುಳ್ಳ 'ರಾಮಕಥೆ' ೧೪ ಲೋಕಗಳ ಬೆಲೆಯದಿದೆ ಎಂದು ಹೇಳಿಕೊಂಡಿದ್ದಾನೆ. ಇದು 'ಪಂಪನ ವಿಕ್ರಮಾರ್ಜುನ' ದ ಮಾರ್ಗದಲ್ಲಿ ಇರಬೇಕು. ಇವನ ಆಶ್ರಯದಾತನಾದ ಕೃಷ್ಣನಿಗೆ 'ಭವನೈಕರಾಮ ಎಂಬ ಬಿರುದು ಇದ್ದಂತೆ ತೋರುತ್ತದೆ, ಇದು ಇತಿಹಾಸ ಕಾವ್ಯವಾಗಿರಲೂಬಹುದು.

ಪಂಪನು ಭಾರತವನ್ನು ಆಯ್ದುಕೊಂಡಂತೆ ಇವನು ರಾಮಾಯಣವನ್ನ ಆಯ್ದುಕೊಂಡಿರಲೂಬಹುದು. ಇಲ್ಲವೆ ಇದೊಂದು ಲೌಕಿಕ ರಾಮಾಯಣವ ಇರಬಹುದು. 'ಲೌಕಿಕ ಪರಿಣತಿ ರಾಮಕಥಾ ಪ್ರಶಸ್ತಿಯಿಂದ' ಎಂಬು ಇದಕ್ಕೆ ಪುಷ್ಟಿ ಕೊಡುತ್ತದೆ.

ಕಾವ್ಯಾಲೋಕನ ಮತ್ತು ಶಬ್ದಮಣಿದರ್ಪಣಗಳಲ್ಲಿ "ಉದಯಾಸ್ತೊ ನ್ನತ ಶೈಲ... ಭುವನೈಕರಾಮ ಮಹಿಪಂಗಕ್ಕುಂ ಪೆರರ್ಗ್ಗಕ್ಕುಮೇ" ಎಂ ಪದ್ಯ "ಆನೆಯ ಮೇಲೆಯು ಮಾಳ ಮೇಲೆಯುಂ ಪರಿದುದೊಂದೆ ಗಜ ಭುವನೈಕರಾಮನಾ" ಇವು 'ಭುವನೈಕರಾಮಾಭ್ಯುದಯ' ದಿಂದ ತೆಗೆ ಕೊಂಡವುಗಳಾಗಿರಬೇಕು. ಒಂದು ವೇಳೆ ಇಲ್ಲಿ 'ರಾಷ್ಟ್ರಕೂಟ ಕೃಷ್ಣನ ತಕ್ಕೋಳದಲ್ಲಿ ಚೋಳ ರಾಜಾದಿತ್ಯನನ್ನು ಸೋಲಿಸಿದ ವಿಷಯವು ಕಾವ ಮೂಲವಸ್ತುವಾಗಿರಬಹುದು ಎಂಬ ಊಹೆಯೊಂದು ಇದೆ.

'ಶಾಂತಿ ಪುರಾಣವು' ೧೬ನೆಯ ತೀರ್ಥಂಕರನಾದ ಶಾಂತಿನಾಥ ಚರಿತ್ರೆಯುಳ್ಳ ಜೈನಪುರಾಣವಾಗಿದೆ. ಇದು ೧೨ ಆಶ್ವಾಸವುಳ್ಳ ಚಂಪು ಕಾವ್ಯ. ಇಲ್ಲಿ ಶಾಂತೀಶ್ವರನ ಚರಿತ್ರೆಗೆ ಅಲ್ಪಭಾಗ ಮಾತ್ರ ಮೀಸಲಾಗಿ ಲಾಗಿದೆ. ಪೊನ್ನನ ಆದರ್ಶವನ್ನು, ಪದದಪ್ಪದೆಯುಂ ಒಗೆಬೆದ

ರದೆಯುಂ ಕತೆಕಿಡದೆಯುಂ ಭವಾವಳಿತಡವ
ಗದೆಯುಂ ಸವಿತವದೆಯುಮಂ
ಬುಧನಿನದನತಂದ್ರನಿಂದ್ರನಾಜಿನಚಂದ್ರಂ.

ಎಂಬ ಪದ್ಯದಲ್ಲಿ ವ್ಯಕ್ತಪಡಿಸಲಾಗಿದೆ.

ಇಲ್ಲಿಯ ಘಟನೆಗಳಲ್ಲಿ ರಸನಿಷ್ಪತ್ತಿಯಾಗಿರುವದಿಲ್ಲ. ಒಂದಾದರೂ ಹೃದಯಸ್ಪರ್ಶಿಯಾದ ಸನ್ನಿವೇಶವಿಲ್ಲ. ಇದು ಆದಿ ಪುರಾಣದ ಮುಂ ನಿಸ್ತೇಜವಾಗಿದೆ. ಆದರೆ ಜೈನಪುರಾಣದಲ್ಲಿರಬೇಕಾದ ಎಂಟು ಅವಯವ ಗಳೂ ಇಲ್ಲಿವೆ. ಭವಾಳಿ ಬಿತ್ತರಿಸಲ್ಪಟ್ಟದೆ. ಶಾಸ್ತ್ರಭಾಗ ವಿವರವಿದೆ ಕಾವ್ಯಶಾಸ್ತ್ರ ದೃಷ್ಟಿಯಿಂದಿರಬೇಕಾದ ಹದಿನೆಂಟು ವರ್ಣನೆಗಳೂ, ನವರಸಗಳೂ ಇದ್ದು ಛಂದಸ್ಸು ಶೈಲಿ ಅಲಂಕಾರಗಳಿಂದೊಡಗೂಡಿದ ಕಾವ್ಯ ಪ್ರೌಢವಾಗಿದೆ ಆದರೆ ಇದು 'ಪುರಾಣ ಚೂಡಾಮಣಿ' ಅಲ್ಲ. ಕಾವ್ಯ ಧರ್ಮ ಮತ್ತು ಧರ್ಮ ಗಳ ಸಂಯೋಜನೆಯ ದೃಷ್ಟಿಯಿಂದ ಶ್ರೇಷ್ಠ ಪುರಾಣವೇನೂ ಇದಲ್ಲ.

ಕಾಳಿದಾಸನ ಪ್ರಭಾವ ಪೊನ್ನನ ಮೇಲೆ ಸಾಕಷ್ಟು ಆಗಿದೆ ಎನ್ನುವದಕ್ಕೆ ಜ್ಯೋತಿಪ್ರಭೆಯ ಸ್ವಯಂವರ, ಶಾಂತೀಶ್ವರನ ದಿಗ್ವಿಜಯಗಳ ವರ್ಣನೆಗಳೇ ಸಾಕ್ಷಿಯಾಗಿ ನಿಂತಿವೆ. ಆದರೂ 'ಅಸಹಾಯ ಕವೀಶ್ವರ'ನೆಂದು ಹೇಳಿಕೊಂಡಿದ್ದಾನೆ ಪೊನ್ನ. ಇಲ್ಲಿ ಮತಧರ್ಮ ಹಾಗೂ ಪಂಡಿತ ಕಾವ್ಯಧರ್ಮಗಳ ಸುಮಧುರ ಸಂಯೋಜನೆ ಇದೆ. ಆದರೂ ಭವ್ಯಜೀವನದೃಷ್ಟಿ ಮತ್ತು ಮಹಾಕಾವ್ಯದ ಸತ್ವಗಳು ಪಂಪನಲ್ಲಿ ಗೆದ್ದು ನಿಂತರೆ ಪೊನ್ನನ ಕವಿತಾಶಕ್ತಿ ಅವುಗಳ ಭಾರದ ಬುಡದಲ್ಲಿ ಕುಸಿದು ಬಿದ್ದಿರುವದೇ ಹೆಚ್ಚು.

ಇ) ರನ್ನ— ರನ್ನನು ಹುಟ್ಟಿ ಬೆಳೆದದ್ದು ಮುದುವೊಳಿನಲ್ಲಿ (ಮುಧೋಳ), ವ್ಯಾಸಂಗ ಮಾಡಿದ್ದು ಗಂಗ ಮಂಡಲದಲ್ಲಿ, ಅಜಿತ ಸೇನಾ ಚಾರ್ಯರ ಪಾದದಡಿಯಲ್ಲಿ, ಅವನಿಗೆ ಮಾರ್ಗದರ್ಶಕರಾದವರು 'ಸಮರ ಪರಶುರಾಮ'ನಾದ ಚಾವುಂಡರಾಯ. ಇವನ ಕಾಲ ಸುಮಾರು ಕ್ರಿಸ್ತಶಕ ೯೯೦. ಜೈನನಾದರೂ ವೃತ್ತಿಯಿಂದ ರನ್ನನು ಬಳೆಗಾರ.

ರನ್ನನು ಬರೆದ ಕಾವ್ಯಗಳೆಂದರೆ ಗದಾಯುದ್ಧ (ಸಾಹಸ ಭೀಮ ವಿಜಯ) ಅಜಿತ ಪುರಾಣ, ಪರಶುರಾಮ ಚರಿತೆ, ಚಕ್ರೇಶ್ವರ ಚರಿತೆಗಳು. ಅಲ್ಲದೆ 'ರನ್ನಂ ವೈಯಾಕಾರಣಂ' ಎಂದುಕೊಂಡಿರುವದರಿಂದ .ವ್ಯಾಕರಣ ವೊಂದನ್ನೂ ಬರೆದಿರಬಹುದು.

ರತ್ನತ್ರಯರಲ್ಲಿ, ಜಿನಸಮಯ ದೀಪಕರಲ್ಲಿ ತಾನೂ ಒಬ್ಬನೆಂದು ಅಭಿಮಾನದಿಂದ ಹೇಳಿಕೊಂಡಿದ್ದಾನೆ. ತನ್ನ ಕೃತಿರತ್ನ ಪರೀಕ್ಷಿಸುವವರಿಗೆ 'ಎಂಟೆರ್ದೆಯೇ? ಎಂದು ಎದೆತಟ್ಟಿಕೊಂಡು ಹೇಳಿಕೊಂಡಿದ್ದಾನೆ. ತಾನು ಚಕ್ರವರ್ತಿಯಾದ ತೈಲಪನಿಂದ ಕವಿ ಚಕ್ರವರ್ತಿ ಎಂಬ ಬಿರುದನ್ನು ಪಡೆದಿರುವ ದಾಗಿ ಹೇಳಿಕೊಂಡಿದ್ದಾನೆ. ಕರಮಸೆದವು ರತ್ನತ್ರಯ| ಪರಿಕಲ್ಪದೆ ಪರಶುರಾಮ ಚರಿತಂ ಚಕ್ರೇ || ಶ್ವರ ಚರಿತಂ ಅಜಿತ ಜಿನೇ | ಶ್ವರ ಚರಿತಂ ರನ್ನನಿಂದೆ ಭುವನತ್ರಯದೊಳ್ || . || ಎಂಬಲ್ಲಿ ತನ್ನ ಕೃತಿಗಳ ಬಗ್ಗೆ ಎದೆಯುಬ್ಬಿಸಿ ನುಡಿದಿದ್ದಾನೆ. ಇಲ್ಲಿ 'ಗದಾಯುದ್ಧ'ದ ಹೆಸರು ಇಲ್ಲದಿರುವದು ಆಶ್ಚರ್ಯವೇ ಆಗಿದೆ. ರನ್ನನಲ್ಲಿ ಶೂರನ ಆತ್ಮ ಪ್ರತ್ಯಯವಿದೆ, ಮೇರೆಯರಿಯದ ಉತ್ಸಾಹ ವಿದೆ, ಮುಚ್ಚುಮರೆಯಿಲ್ಲದ ಸಿಡಿಲು ನುಡಿಯಿದೆ.

ಅವನ ಉಪಲಬ್ಧ ಗ್ರಂಥಗಳೆಂದರೆ ಗದಾಯುದ್ಧ ಹಾಗೂ ಅಜಿ
ಪುರಾಣ"ಗದಾಯುದ್ಧವು"ವು "ಸಾಹಸ ಭೀಮ ವಿಜಯ.ವಾಗಿದೆ. ಇದು ಲೌಕಿ
ಕಾವ್ಯ. ಇದಕ್ಕೆ ಪಂಪನಿಂದ ಸ್ಫೂರ್ತಿ ಬಂದಿದೆ. ಇಲ್ಲಿ ಭೀಮನೊಡನೆ ಕ
ಪೋಷಕನಾದ ಸತ್ಯಾಶ್ರಯನನ್ನು ತಾದಾತ್ಮ್ಯಗೊಳಿಸಲಾಗಿದೆ. 'ಅಜಿ
ಪುರಾಣವು'ವು ಧಾರ್ಮಿಕ ಕಾವ್ಯ. ೨ನೆಯ ತೀರ್ಥಂಕರನನ್ನು ಕುರಿತದ್ದು
ಇದನ್ನು 'ದಾನ ಚಿಂತಾಮಣಿ' ಅತ್ತಿಮಬ್ಬೆಯು ರನ್ನನಿಂದ ಬರೆಯಿಸಿದ
ಪರಶುರಾಮ ಚರಿತೆಯು 'ಸಮರಪರಶುರಾಮ'ನೆಂದು ಬಿರುದು ಪಡೆದ ಕ
ಪೋಷಕನಾದ ಚಾವುಂಡರಾಯನನ್ನು ಕುರಿತಾದದ್ದಿರಬೇಕು. ಚಕ್ರೇಶ್ವ
ಚರಿತೆಯು ಬಹುತರವಾಗಿ 'ಗದಾಯುದ್ಧ'ವೇ ಆಗಿರಬೇಕು.

'ಅಜಿತ ಪುರಾಣ'ದಲ್ಲಿ ಅತ್ತಿಮಬ್ಬೆಯ ಆದರ್ಶ ಚಾರಿತ್ರ್ಯವನ್ನ
ತುಂಬಾ ಹೊಗಳಲಾಗಿವೆ. ಇದರಲ್ಲಿ ರನ್ನನು ತನ್ನ ವಿಶಿಷ್ಟವಾದ ಉತ್ಸಾಹ
ತಾದಾತ್ಮ್ಯಗಳನ್ನು ತುಂಬಾ ಬಳಸಿದ್ದಾನೆ. ಇಲ್ಲಿ ಮಾನವತೆಯ ಅಂಶದಿಂ
ಹೃದಯ ಸ್ಪರ್ಶಿಯಾದ ಭಾಗವೆಂದರೆ ಅಜಿತಸ್ವಾಮಿಯು ವಿರಕ್ತಿ ಹೊಂ
ತನ್ನವರನ್ನು ಬಿಟ್ಟು ತಪಸ್ಸಿಗೆ ಹೋದಾಗಿನ ದೃಶ್ಯ. ಅದನ್ನು "ಮದುವೆಗಳ
ಮನೆಯಂದದಿನಿರ್ದುದಯೋಧ್ಯಾನಗರಂ", "ರಸವಿಲ್ಲದ ಕೃತಿ" ಯಂ
ಆಯಿತು ಎಂದು ಹೇಳಿದ್ದಾನೆ.

ಒಟ್ಟಿನಲ್ಲಿ 'ಅಜಿತ ಪುರಾಣ'ವು ರನ್ನನ ರಸಸೃಷ್ಟಿಗೆ ಸಂಚಕಾರವಾಗಿದೆ
ಇಲ್ಲಿ ಆಪೋತ್ತರವಿದೆ, ಸಿದ್ಧಿಯಿಲ್ಲ. ರನ್ನನು ಇಲ್ಲಿ ಜೈನ ಶಾಸ್ತ್ರ, ನಾಟ್ಯಶಾಸ್ತ್ರ
ಅಲಂಕಾರ ಶಾಸ್ತ್ರಗಳ ತನ್ನ ಗಾಢ ವ್ಯಾಸಂಗವನ್ನು ಪ್ರದರ್ಶಿಸಲು ಪ್ರಯತ್ನಿ
ದ್ದಾನೆ. ಕವಿ ಸಮಯದ ಬೆನ್ನು ಹತ್ತಿದ್ದಾನೆ. ವರ್ಣನೆಗಳ ಹುಚ್ಚು ತ
ಗೇರಿದೆ. ಇದನ್ನೆಲ್ಲ ಗಮನಿಸಿದರೆ ಇದು ಅವನ ಪ್ರಥಮ ಕೃತಿ ಎಂದು ವ್ಯಕ್ತ
ವಾಗದೇ ಇರದು.

'ಗದಾಯುದ್ಧ'ವು ರನ್ನನ ಕೃತಿರತ್ನ. 'ವ್ಯಾಸಭಾರತದ'ದ ಗದಾಸೌಪ್ತಿಕ
ಪರ್ವಗಳು, 'ಪಂಪ ಭಾರತ ದ ೧೩ನೆಯ ಆಶ್ವಾಸ, ಭಾಸನ 'ಊರುಭಂಗ',
ಭಟ್ಟ ನಾರಾಯಣನ 'ವೇಣೀಸಂಹಾರ' ಇವುಗಳಿಗೆಲ್ಲ ರನ್ನನು ಋಣಿಯಾಗಿ
ದ್ದಾನೆ. ಆದರೂ ಇದು ಸ್ವತಂತ್ರ, ಉಜ್ವಲವಾದ ಕೃತಿ. ಇದರ ವಸ್ತು ರಚನೆ

ಭವ್ಯವಾಗಿದೆ. ಈ ಘನತೆಗೆ ದೃಶ್ಯ ಕಾವ್ಯದ ಸ್ವರೂಪ ಇನ್ನಿಷ್ಟು ಸೊಗಸನ್ನು ತಂದೊಡ್ಡಿದೆ.

ಇದು 'ಸಾಹಸ ಭೀಮ ವಿಜಯ'. ಇಲ್ಲಿ ಭೀಮನಿಗೆ ಪಟ್ಟಗಟ್ಟಲಾಗಿದ್ಕೆ ಸಿಂಹಾಲೋಕನ ಕ್ರಮದಿಂದ ಭಾರತದ ಕತೆಯಲ್ಲವನ್ನೂ ಇಲ್ಲಿ ಹೇಳಲಾಗಿದೆ. ಇದೊಂದು ಶ್ರೇಷ್ಠ ಮಟ್ಟದ ದೃಶ್ಯ ಕಾವ್ಯವಾಗಿದೆ. ಇಲ್ಲಿಯ ದೃಶ್ಯಗಳೆಲ್ಲ ನಾಟಿ. ಪೂರ್ಣವಾಗಿವೆ. ಕರುಣ ವೀರರಸಗಳ ಸಂಗಮವಾಗಿವೆ. ಇಲ್ಲಿಯ ನಾಟಕೀಯತೆಯಿಂದಲೇ ರನ್ನನು ವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿದ್ದಾನೆ.

ರನ್ನನ ದುರ್ಯೋಧನನು ಮಹಾನುಭಾವನಾಗಿದ್ದಾನೆ, ಸುಯೋಧನನಾಗಿದ್ದಾನೆ. ದುರ್ಯೋಧನನೇ ನಾಯಕನನ್ನುವ ವರೆಗೆ ವಿಚಾರ ಹೋಗಿದೆ. ಭೀಮನನ್ನು ಎಲ್ಲಿಯೂ ಇಳಿಸದೇ ದುರ್ಯೋಧನನ್ನು ಏರಿಸಲಾಗಿದೆ. ಅವನು ಛಲದಂಕ ಮಲ್ಲನೂ, ಮಹಾವೀರನೂ, ತೇಜಸ್ವಿಯೂ, ಮಾನಿಯೂ ಎಂದು ರನ್ನನು ಬಾಯ್ತುಂಬ ಹೊಗಳಿದ್ದರೂ ತನ್ನ ದುಷ್ಪ್ರವೃತ್ತಿಗಳಿಂದ, ದುರ್ನಡತೆಯಿಂದ ನಾಶಹೊಂದಿದನೆಂದು ಎತ್ತಿ ತೋರಿಸಿದ್ದಾನೆ.

ರನ್ನನು ತನ್ನದೇ ಆದ ವ್ಯಕ್ತಿತ್ವವುಳ್ಳವನು, ಪಂಪನಿಗೆ ಸರಿಸಾಟಿಯಾದ ಪ್ರತಿಭೆಯುಳ್ಳವನು. ಆದರೂ ಅವನ ಮನೋಧರ್ಮದಲ್ಲಿ ಪಂಪನ ಸಮನ್ವಯ, ಸಮತೂಕವಿಲ್ಲ. ಆವೇಶ, ದುಡುಕುಗಳು ಹೆಚ್ಚು. ಅವನದೆಲ್ಲ ಬಿಚ್ಚು ಮಾತು. ಅವನು ಗೂಢನಾದ ಕವಿ' ಯಲ್ಲ. 'ಗದಾಯುದ್ಧ' ವು 'ಪಂಪ ಭಾರತ' ದಿಂದ ಪ್ರೇರಕವಾದರೂ ಅದರ ಪಡಿನೆಳಲಾಗಿಲ್ಲ. ಅದೊಂದು ಸ್ವತಂತ್ರ ಕೃತಿಯಾಗಿದೆ. ರನ್ನನ ಈ ಸಾಧನೆ ಪವಾಡವೇ ಸರಿ ವೀರರಸ ಇಲ್ಲಿ ಓತಪ್ರೋತವಾಗಿ ಹರಿದಿದೆ. ಇಲ್ಲಿಯ ಪ್ರತಿ ಮಾತೂ ಗಡೆಗಳ ಘಟ್ಟಣೆಯಿಂದೆದ್ದ ವಿಸ್ಫುಲಿಂಗದ ಕಿಡಿಗಳಾಗಿವೆ. ಕನ್ನಡತನದ ಕೆಚ್ಚು ಇಲ್ಲಿ ಮೂರ್ತಿಮಂತವಾಗಿ ಬೆಳೆದಿದೆ.

ಈ) ಚಾವುಂಡರಾಯ— ಇ೦ನ ಕಾಲ ಸುಮಾರು ಕ್ರಿಸ್ತಶಕ ೯೭೮. ಇವನು ಕವಿಯೂ ಕಲಿಯೂ ಆಗಿದ್ದು ಬ್ರಹ್ಮ ಕ್ಷತ್ರಿಯ ವಂಶದಲ್ಲಿ ಹುಟ್ಟದ ಸವ್ಯಸಾಚಿ. ಗಂಗದೊರೆ ರಾಚಮಲ್ಲನ ಮಂತ್ರಿ ಹಾಗೂ ಸೇನಾಪತಿ.

'ಸಮರ ಪರಶುರಾಮ' ಎಂಬ ಬಿರುದು ಪಡೆದ ವೀರನು ಶ್ರವಣ ಬೆಳ್ಗೊಳದ ಗೊಮ್ಮಟೇಶ್ವರನ ಮೂರ್ತಿಯನ್ನು ನಿಲ್ಲಿಸಿದ ಜಿನಭಕ್ತಾಗ್ರೇಸರನು ಅಲ್ಲ ಶೌರ್ಯಕ್ಕಾಗಿ 'ವೀರ ಮಾರ್ತಾಂಡದೇವ' ಹಾಗೂ ಚಾರಿತ್ರ್ಯ ಮತ್ತು ಮತಾಭಿಮಾನಕ್ಕಾಗಿ 'ಸಮ್ಯಕ್ತ್ವ ರತ್ನಾಕರ' ಎಂದು ಕರೆಯಸಿಕೊಂಡ ವನು. ಕವಿಚಕ್ರವರ್ತಿ ಕವಿರನ್ನನ ಪೋಷಕನು. ಅಜಿತಸೇನಾಚಾರ್ಯರಶಿಷ್ಯ

ಇವನು ಬರೆದ ಗ್ರಂಥ 'ಚಾವುಂಡರಾಯ ಪುರಾಣ'. ಇದನ್ನು ಅವ "ತ್ರಿಷಷ್ಟಿ ಲಕ್ಷಣ ಮಹಾ ಪುರಾಣ" ವೆಂದೂ ಕರೆದಿದ್ದಾನೆ. ಇದೊಂದು ಗ ಗ್ರಂಥವಾಗಿದೆ. ತನ್ನ ಗ್ರಂಥಕ್ಕೆ ಜಿನಸೇನ ಗುಣಭದ್ರರ ಮಹಾ ಪುರಾಣವನ್ನ ಆಕರವನ್ನಾಗಿ ಸ್ವಿಕರಿಸಿದ್ದರೂ ಪಂಪನ ಆದಿ ಪುರಾಣಕ್ಕೂ ಋಣಿಯಾಗಿದ್ದಾನೆ ತೀರ್ಥಂಕರರ ಚರಿತ್ರೆಯನ್ನು ಸುಲಭವೂ, ಸಕಲ ಹೃದ್ಯವೂ ಆಗುವಂತೆ ಗ ರೂಪದಲ್ಲಿ ನಿರೂಪಿಸ ವದೇ ಅವನ ಹೇತುವಾಗಿರಬೇಕು.

ಪವಿತ್ರ ಭಾವನೆಯಿಂದ ಪ್ರೇರಿತನಾದ ಚಾವುಂಡರಾಯನು ಇಲ್ಲಿ ಅಧಿ ಸ್ವಾತಂತ್ರ್ಯವಹಿಸಿಲ್ಲ. ಅವನ ದೃಷ್ಟಿ ಪ್ರಧಾನವಾಗಿ ಮತಪ್ರಸಾರಕ ಹಾಗು ಶಾಸ್ತ್ರಸಿಷ್ಮವಾಗಿದೆ. ಅಲ್ಲಲ್ಲಿ ಬರುವ ಕೆಲ ಪದ್ಯಗಳು ಅವನ ಸಹಜವಾ ಕಾವ್ಯ ಯೋಗ್ಯತೆಗೆ ನಿದರ್ಶನವಾಗಿದೆ. ಆದರೂ ಚರಿತ್ರೆ, ಮತಾಂಶ, ಕಲ್ಪನೆ ಗಳಲ್ಲಿ ಮಾತ್ರ ಜಿನಸೇನ, ಗುಣಭದ್ರ, ಪಂಪ ಇವರ ಪ್ರಭಾವವೇ ಹೆಚ್ಚಾಗಿ ಚಾವುಂಡರಾಯನಲ್ಲಿ. ಒಟ್ಟಿನಲ್ಲಿ ಕನ್ನಡ ಸಾಹಿತ್ಯದಲ್ಲಿ ಚಾವುಂಡರಾಯ ಸ್ಥಾನವು ಕಥನ ಕವಿ ಎಂಬುದಕ್ಕಿಂತ ಮೇಲಾದ ಗದ್ಯಕಾರನೆಂದು ಆಗಿದೆ.

ಉ) ೧ನೆಯ ನಾಗವರ್ಮ— ಪಂಪನಂತೆ ಇವನು ಪೆಂಗಿ ಮಂಡಲ ಪೆಂಗಿ ಪಳುವಿನ ಬ್ರಾಹ್ಮಣ ವಂಶದವನು. ಕ್ರಿಸ್ತಶಕ ೧೦ನೆಯ ಶತಮಾನ ಕೊನೆಯ ಭಾಗದಲ್ಲಿ ಇದ್ದವನು. ವ್ಯಕ್ತಿತ್ವದಲ್ಲಿ ನಾಗವರ್ಮನು ರತ್ನತ್ರಯರಂ ಇದ್ದರೂ ಗ್ರಂಥ ವಿಷಯ ಹಾಗೂ ಪ್ರಸ್ಥಾನ ವಿಷಯಗಳಲ್ಲಿ ಇವರಿಗಿಂತ ಬೇ ಯಾಗಿ ಒಂದು ಛಂದಶ್ಶಾಸ್ತ್ರದ ಗ್ರಂಥವನ್ನೂ (ಛಂದೋಂಬುಧಿ) ಇನ್ನೊಂದ ಅನುವಾದ ಗ್ರಂಥವನ್ನೂ (ಕರ್ನಾಟಕ ಕಾದಂಬರಿ) ಬರೆದಿದ್ದಾನೆ.

ಇವನ 'ಛಂದೋಂಬುಧಿಯು' ಉಪಲಬ್ಧವಾದ ಮೊದಲನೆಯ ಛಂದೋ ಗ್ರಂಥ. ಅವನೇ ಹೇಳಿಕೊಂಡಂತೆ ನಾಗವರ್ಮನು ಶಾಸ್ತ್ರಕಾರನಾಗಿದ್ದಂ

ಸತ್ಕವಿಯೂ ಇದ್ದನೆಂದು ತಿಳಿಯುತ್ತದೆ. ಅವನಿಗೆ 'ಕವಿರಾಜ ಹಂಸ' ಎಂಬ ಬಿರುದು ಬೇರೆಇತ್ತು. ಛಂದಸ್ಸನ್ನು ತನ್ನ ಸತಿಗೆ ಬಣ್ಣಿಸಿದ ಕ್ರಮದಲ್ಲಿ ಹೇಳಿದ್ದಾನೆ.

'ಕರ್ನಾಟಕ ಕಾದಂಬರಿ' ಯು ಬಾಣನ ಸಂಸ್ಕೃತ ಕಾದಂಬರಿಯ ಕನ್ನಡ ಪರಿವರ್ತನವಾಗಿದೆ. ಇದೊಂದು ಲೌಕಿಕ ಗ್ರಂಥ. ಪಂಪನನ್ನು ಅನುಸರಿಸಿ ತನ್ನ ದೊರೆಯಾದ ಚಂದ್ರನನ್ನು ಚಂದ್ರಾಪೀಡ ಸಾದೃಶ್ಯದಿಂದ ವರ್ಣಿಸುವ ಉದ್ದೇಶದಿಂದ ಪ್ರೇರಿತನಾಗಿಯೂ ಬಾಣ ಕವಿಯ ಹಾಗೂ ಕಾದಂಬರಿ ಕಥೆಯ ಪ್ರಶಂಸೆಗಳೂ ಅವನನ್ನು ಈ ಕೆಲಸಕ್ಕೆ ಅಣಿಗೊಳಿಸಿರ ಬಹುದಾಗಿದೆ.

ಕಾದಂಬರೀ ಕಥೆಯ ಅನುವಾದಕನಿಗೆ ಎಂಟೆದೆಯೂ ಸಾಲದೆಂದೆನಿಸಿ ದರೂ ಈ ಸಾಹಸಕ್ಕೆ ಕೈಯಿಕ್ಕಿ ನಾಗವರ್ಮನು ಬಹುಮಟ್ಟಿಗೆ ಯಶಸ್ವಿಯಾಗಿ ದ್ದಾನೆ. ಉಭಯ ಭಾಷೆಗಳ ಗಾಢ ಪ್ರಭುತ್ವದೊಂದಿಗೆ ರಸದೃಷ್ಟಿ, ಔಚಿತ್ಯ ಪರಿಜ್ಞಾನಗಳು ಅವನಲ್ಲಿ ಇದ್ದದ್ದು ಅವನ ಯಶಸ್ಸಿಗೆ ಕಾರಣವಾಯಿತು.

ನಾಗವರ್ಮನು ಈ ಚಂಪೂ ಕಾವ್ಯವನ್ನು ಮೂಲದ ಕಥಾನಕ ಸಾರ, ಪಾತ್ರಗಳ ಜೀವಾಳ, ವರ್ಣನೆಗಳ ಸ್ವಾರಸ್ಯ ಇವುಗಳಿಗೆ ಒಟ್ಟನಲ್ಲಿ ಕುಂದು ಬರ ದಂತೆ ಸ್ವಕೃತಿಯಂಬಂತೆ ಸಲೀಲವಾಗಿ ಬರೆದಿದ್ದಾನೆ. ಅವನ ಭಾಷೆ ಪ್ರಸನ್ನ ಗಂಭೀರವಾದ, ಸರಳವಾದ ಹಳಗನ್ನಡವಾಗಿದ್ದು ಕನ್ನಡ ದೇಸಿಯ ಕಳೆ ಅದ ರಲ್ಲಿ ಎದ್ದು ಕಾಣುತ್ತದೆ. ಮಾರ್ಗ ದೇಸಿಗಳ ಸುಂದರ ಸಮನ್ವಯವನ್ನು ನಾಗವರ್ಮನು ಸಾಧಿಸಿದ್ದಾನೆ.

ಬಾಣವಾಣಿ ಧೋ ಧೋ ಎಂದು ಸುರಿಯುವ ಮೋಡವಾದರೆ ನಾಗ ವರ್ಮನ ಕಲೆ ಆ ಮೋಡ ಸುರಿದ ಮಳೆ ನೀರನ್ನು ಕೆರೆಯಲ್ಲಿ ಹಿಡಿದು ಕಂದ ವೃತ್ತ ವಚನಗಳ ಮಡಿಗಳಲ್ಲಿ ಹರಿಬಿಡುವ ತೋಟಿಗನ ಕೈವಾಡವಾಗಿದೆ. ಒಟ್ಟ ನಲ್ಲಿ ನಾಗವರ್ಮನ 'ಕರ್ನಾಟಕ ಕಾದಂಬರಿ' ಯು ಸ್ವತಂತ್ರ ಕೃತಿಯ ಸತ್ವ ವುಳ್ಳದ್ದಾಗಿ ಕನ್ನಡ ಸಾಹಿತ್ಯದ ಚಿರಂತನ ಗ್ರಂಥಗಳಲ್ಲಿ ಒಂದಾಗಿದೆ.

**ಪ್ರಶ್ನೆ ೭— ಟಿಪ್ಪಣಿ ಬರೆಯಿರಿ— (ಅ) ಆದಿಪುರಾಣ (ಆ) ಪಂಪ ಭಾರತ (ಇ) ಶಾಂತಿ ಪುರಾಣ (ಈ) ಚಾವುಂಡರಾಯ ಪುರಾಣ (ಉ) ಕರ್ನಾಟಕ ಕಾದಂಬರಿ (ಊ) ಗದಾಯುದ್ಧ (ಋ) ಅಜಿತ ಪುರಾಣ.**

ಉತ್ತರ— (ಅ) ಆದಿಪುರಾಣ— 'ಆದಿಪುರಾಣ' ವು ಪಂಪನ
ಕೃತಿ. ಅವನು ಪಡೆದ ವಿದ್ವತ್ತೆ ವಿವೇಕಗಳ ಪ್ರತೀಕವಾದ ಕೃ
ಇದು ಉಜ್ವಲವಾದ ಮೊದಲನೆಯ ಜೈನ ಪುರಾಣವೆಂದೂ ತರುವಾಯ
ಪುರಾಣಗಳಿಗೆ ಹೆದ್ದಾರಿಯನ್ನು ಹಾಕಿ ಕೊಟ್ಟ ಗ್ರಂಥವೆಂದೂ ಭಾವಿಸು
ವೇಲು. ಇದು ಜಿನಸೇನಾಚಾರ್ಯನ 'ಪೂರ್ವ ಪುರಾಣ'ಕ್ಕೆ ಋಣಿಯಾಗಿ
ಅನುಕರಣೆಯು ಕಥಾವಸ್ತು, ಕಥನಕ್ರಮ, ಭಾವಸಂಪತ್ತಿ ಹಾಗೂ ಮ
ತತ್ವಬೋಧೆಗಳಿಗೆಲ್ಲ 'ಪೂರ್ವ ಪುರಾಣ' ಕ್ಕೆ ಋಣಿಯಾಗಿದೆ. 'ಆದಿಪುರಾಣ
ಆದರೂ ಇದು ಸ್ವತಂತ್ರ ಕಳೆಯನ್ನು ಪಡೆದಿದೆ ಪಂಪನ ಗ್ರಥನ ಕೌಶಲ್ಯದಿಂ

ಇವೆರಡೂ ಜೈನ ಪುರಾಣಗಳು, ಅಲ್ಲಿ ಪುರಾಣ ದೃಷ್ಟಿ ಇದ್ದರೆ
ಕಾವ್ಯದೃಷ್ಟಿಯಿದೆ, ಅದು ಸರಳವಾದ ಪದ್ಯ ಕಾವ್ಯವಾದರೆ ಇದು ಪ್ರೌಢ
ಚಂಪೂಕಾವ್ಯ, ಅದು ವಿಸ್ತೃತವಾಗಿದ್ದರೆ ಇದು ಸಂಗ್ರಹಿತವಾಗಿದೆ. 'ಪೂ
ಪುರಾಣ' ದಲ್ಲಿಯ ಆದಿ ಜಿನನ ಜೀವನದ ಭವ್ಯತೆಯನ್ನೂ ಸಮ್ಯಕ್ತ್ವವ
ಅರಿತು ಆತ್ಮೀಕರಿಸಿಕೊಂಡು ಕಾಲತ್ರಯವನ್ನು ನಿಲುಕುವ ಕುಂಚದಿ
ಪಂಪನು ಇಲ್ಲಿ ಚಿತ್ರಿಸಿದ್ದಾನೆ.

'ನೆಗಳ್ದಾದಿ ಪುರಾಣದೊಳಿರುವುದು ಕಾವ್ಯ ಧರ್ಮಂ ಧರ್ಮಮುಮ
ಎಂದು ಪಂಪನು ದೃಢಾಡಿದ ಘೋಷಣೆಯು ಇಲ್ಲಿ ಬಹುಮಟ್ಟಿಗೆ ಸಾರ್ಥ
ವಾಗಿದೆ. ಸನ್ನಿವೇಶ ರಚನೆ, ಪಾತ್ರ ನಿರೂಪಣೆ, ಮತವಿವರಣೆಗಳಲ್ಲಿ ಕಾ
ಧರ್ಮ ಹಾಗೂ ಧರ್ಮಗಳ ಸಮನ್ವಯತೆಯನ್ನು ಸಾಧಿಸಲಾಗಿದೆ.

ಜನ್ಮಾಂತರಗಳಲ್ಲಿಯ ಪುರುದೇವನ ಭೋಗದ ತರತಮ ಹಾಗೂ ಪ್ರೇ
ದರ್ಶನಗಳಲ್ಲಿ ರಸಸ್ಥಾನಗಳಿದ್ದರೂ ಎಲ್ಲಕ್ಕಿಂತ ಹೆಚ್ಚು ರಮ್ಯವಾದುದು ಕೊನೆ
ಜನ್ಮದಲ್ಲಿ ಸುಖದ ತುತ್ತತುದಿಯಲ್ಲಿರುವಾಗ ವೈರಾಗ್ಯ ಹೊಂದಿದ ಸನ್ನಿವೇ
ಅದೇ ನೀಲಾಂಜನೆಯ ನೃತ್ಯ ಸಂದರ್ಭ. ಇಲ್ಲಿ ಕಾವ್ಯಧರ್ಮ ಮತ್ತು ಧರ
ಗಳು ಪಡೆದ ಸಮನ್ವಯವು ಅಪೂರ್ವವಾಗಿದೆ. ಆ ಅಮರ ನರ್ತಕಿಯ ರೂ
ಬೆಡಗುಗಳ ಮತ್ತು ಕುಣಿತದ ವರ್ಣನೆಯುಲ್ಲಿ ಪಂಪನ ಕಲ್ಪನಾ ಶಕ್ತಿ ಕಾರಂ
ಯಂತೆ ಪದ್ಯಗಳಲ್ಲಿ ಪುಟಿದಿದೆ. ಇಲ್ಲಿ ಮಾರ್ಗಕಾವ್ಯದ ರಸಪೂರ್ತಿಯಿದೆ.

ಜೈನ ಶಾಸ್ತ್ರ, ಪುರಾಣ, ಸಂಪ್ರದಾಯಗಳ ಜಾಲದಲ್ಲಿ ಸಿಲುಕದೆ ಸಂಪನ
ಕಲಾವಿದನ ರೀತಿಯಲ್ಲಿ ಅವನ್ನೆಲ್ಲ ಇಲ್ಲಿ ಅಳವಡಿಸಿಕೊಂಡಿದ್ದಾನೆ. ಪುರದೇವ

ಪಂಚ ಕಲ್ಯಾಣಗಳ ನಿರೂಪಣೆಯಲ್ಲಿ ಶಾಸ್ತ್ರವನ್ನು ಒಳಗೊಂಡು ಅದನ್ನು ಮೀರಿದ ಕಲಾಪುಹಿಮೆಯಿದೆ. ಆದಿನಾಥನ ಜೀವನಗಳಲ್ಲಿ ಭೋಗದ ನಿರಾಸವನ್ನು ನೋಡಿದರೆ ವಿಭವದ ನಿಷ್ಫಲತೆಯನ್ನು ಭರತನ ಜೀವನ ವೃತ್ತಾಂತದಲ್ಲಿ ನೋಡುತ್ತೇವೆ. ಆದಿನಾಥನ ಕಥೆಯಲ್ಲಿ ಕಾಮತ್ಯಾಗ, ಭರತನ ಕಥೆಯಲ್ಲಿ ಅಹಂಕಾರತ್ಯಾಗ ಇವು ಸಮ್ಯಕ್ತ್ವಸಿದ್ಧಿಗೆ ಪೂರ್ವ ಭಾವಿಗಳೆಂದು ತೋರಿಸಲಾಗಿದೆ. ಜಿನಗಾಮ ಇಲ್ಲಿ ಬೆಳಗಿದೆ.

ಭರತ ಬಾಹುಬಲಿಗಳ ಸ್ವಭಾವ ಚಿತ್ರಣವು ಪಂಪನ ವಿಶಾಲ ಮನದ ಸಂಸ್ಕೃತಿಗೂ ಉನ್ನತ ಪ್ರತಿಭೆಗೂ ಸಾಕ್ಷಿಯಾಗಿವೆ. ಇಲ್ಲಿ ಧರ್ಮವು ವಿಶ್ವಧರ್ಮವಾಗಿ ರೂಪುಗೊಂಡಿದೆ. ಭವ್ಯತೆಯ ದೃಷ್ಟಿಯಿಂದ ಆದಿ ಪುರಾಣವು ಕೆಲ ಸನ್ನಿವೇಶಗಳಲ್ಲಿ ಭಾರತಕ್ಕೂ ಮಿಗಿಲಾಗಿದೆ. ಮೂರು ತಿಂಗಳುಗಳಲ್ಲಿ ರಚಿಸಲಾದ ಈ ಮಹಾ ಕಾವ್ಯವು ಪಂಪನ ಧರ್ಮಜ್ಞಾನ ಹಾಗೂ ಕಾವ್ಯ ಸಿದ್ಧಿಗೆ ಸಾಕ್ಷಿಯಾಗಿದೆ.

(ಆ) ಪಂಪ ಭಾರತ— 'ಪಂಪ ಭಾರತ ಅಥವಾ ವಿಕ್ರಮಾರ್ಜುನ ವಿಜಯ'ವು ಪಂಪನ ಹಿರಿಯ ಕೃತಿ, ಇಲ್ಲಿ ಅವನು ಲೌಕಿಕವನ್ನು ಬೆಳಗಿದ್ದಾನೆ. ಇಲ್ಲಿಯ ಶೈಲಿ ಪಳಗಿದೆ, ಪ್ರತಿಭೆ ಹದಗೊಂಡಿದೆ. ಸಮಸ್ತ ಭಾರತವನ್ನು ಪೂರ್ವಮಾಗಿ ಪೇಳಿದ್ದರೂ ಮುಖ್ಯ ಭಾಗಗಳಲ್ಲಿ ಲಕ್ಷ್ಯವನ್ನು ಕೇಂದ್ರೀಕರಿಸಲಾಗಿದೆ. ಭಾರತದ ಕಥೆಯೊಂದಿಗೆ ತನ್ನ ದೊರೆಯಾದ ಅರಿಕೇಸರಿಯ ಚರಿತ್ರೆಯನ್ನೂ ಕೂಡಿಸಿ ಇದನ್ನು 'ವಿಕ್ರಮಾರ್ಜುನ ವಿಜಯ'ವಾಗಿಸಿದ್ದಾನೆ. ಪಂಪಕವಿ.

ಈ ದೃಷ್ಟಿಯಿಂದ ಕೆಲಭಾಗಗಳನ್ನು ಬಿಡಲಾಗಿದೆ, ಕೆಲವನ್ನು ಸಂಗ್ರಹಿಸಲಾಗಿದೆ, ಕೆಲವನ್ನು ಮಾರ್ಪಡಿಸಲಾಗಿದೆ. ಅರಿಕೇಸರಿಯೇ ಈ ಕಾವ್ಯದ ಕಥಾನಾಯಕನು. ಅರ್ಜುನನೊಡನೆ ಅವನನ್ನು ಹೋಲಿಸಲಾಗಿದೆ. ತಾತ್ಕಾಲೀನ ರಾಜಕೀಯ ಧ್ವನಿ ಸ್ವಾರಸ್ಯವಾಗಿ ಇಲ್ಲಿ ಬಂದಿದೆ. ಅರಿಕೇಸರಿಯ ಭಕ್ತಿ ತುಂಬಾ ವ್ಯಕ್ತವಾಗಿದೆ.

ಕಷ್ಟ ಪಟ್ಟವಳು ದ್ರೌಪದಿ, ಪ್ರತಿಜ್ಞೆ ಪೂರ್ಣ ಮಾಡಿದವನು ಭೀಮ ಆದರೆ ಪಟ್ಟಕ್ಕೆ ಕೂಡ್ರುವವರು ಅರ್ಜುನ ಹಾಗೂ ಸುಭದ್ರೆ. ಇದು ಅನಿವಾರ್ಯವಾದ, ಅಪರಿಹಾಸ್ಯವಾದ ವ್ಯತ್ಯಾಸ ಆದರೂ ಕೌರವ ಪಾಂಡವರ

ಯಾದವೀಕಲಹವನ್ನು ಒಂದು ಮಾನವೀಯ ದೃಷ್ಟಿಕೋನದಿಂದ ಚಿತ್ರಿಸ ಹೊರಟ ಪಂಪ ಭಾರತದ ಮೂಲಕಥಾನಕಕ್ಕೆ ಇದರಿಂದ ಯಾವ ಬಾಧೆಯ ಉಂಟಾಗಿಲ್ಲ. ಪಂಪನ ರೂಪಾಂತರ ಅಪೂರ್ವವಾಗಿದೆ, ಅಪರೂಪವಾಗಿದೆ.

ಮೂಲ ಕಥೆಯ ಆಯಾ ಭಾಗಕ್ಕೆ ಕವಿಯು ಯೋಗ್ಯ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾನೆ. ಎಲ್ಲದರಲ್ಲಿಯೂ ಔಚಿತ್ಯ ಪ್ರಜ್ಞೆಯಿದೆ. ಇದರಿಂದ ಪಂ ಭಾರತಕ್ಕೆ ಬಿಗುವೂ ಕಸುವೂ ಬಂದಿದೆ ಎಂದೆನ್ನಬಹುದಾಗಿದೆ. ಕಥೆ ವೇಗವಾ ಹೋಗುತ್ತಿದ್ದರೂ ಸಜೀವವಾದ ಚಿತ್ರಗಳು ಕಣ್ಣೆದಿರು ನಿಲ್ಲುತ್ತವೆ. ಇದ ಉದಾಹರಣೆಯಾಗಿ ಶಂತನೂ-ಸತ್ಯವತಿಯರ ಪ್ರಣಯ ಚಿತ್ರವನ್ನು ಕೊ ಬಹುದು.

ಮಾನವ ಲೋಭ ಅಸೂಯೆಗಳು ಭ್ರಾತೃಕಲಹದ ದುರಂತದಲ್ಲಿ ಪ ಣಮಿಸಿದ್ದನ್ನು ಅದ್ಭುತವಾದ ಆತ್ಮೀಯತೆಯಿಂದ ಇಲ್ಲಿ ಬಣ್ಣಿಸಲಾಗಿದೆ. ದ್ಯೂ ಪ್ರಸಂಗ, ದ್ರೌಪದಿ ಮಾನಭಂಗ, ಭೀಷ್ಮ ಪ್ರತಿಜ್ಞೆಗಳನ್ನು ಲೌಕಿಕ ದೃಷ್ಟಿ ಯಿಂದ ಅಲೌಕಿಕ ಪ್ರತಿಭೆಯ ಪ್ರಭಾವದಿಂದ ಚಿತ್ರಿಸಲಾಗಿದೆ. ಕೃಷ್ಣ ಭಕ್ತಿ, ಇ ಕಣ್ಮರೆಯಾಗಿದೆ. ಪಾಂಡವರ ವನವಾಸ, ಕೃಷ್ಣ ಸಂಧಾನ, ಭಾರತ ಯುದ್ಧ ಪ್ರಾರಂಭ, ಭೀಷ್ಮರ ಸೇನಾಪತಿ ಪಟ್ಟ, ಕರ್ಣ ಸ್ವಾಭಿಮಾನ, ದುರ್ಯೋಧನ ಛಲಪ್ರಸಂಗ............ ಇಲ್ಲೆಲ್ಲ ಉಜ್ವಲ ಸನ್ನಿವೇಶ ನಿರ್ಮಾಣದ ಶಕ್ತಿಯನ್ನು ಪಂಪನು ಪ್ರಕಟಗೊಳಿಸಿದ್ದಾನೆ.

ಇಲ್ಲಿಯ ಪಾತ್ರಗಳು ಪಂಪನ ಪ್ರತಿಭೆಯ ಬೆಳಕಿನಲ್ಲಿ ಹೊಳೆದು ಜೀವಂ ವಾಗಿವೆ. ಛಲದೊಳ್ ದುರ್ಯೋಧನಂ, ನನ್ನಿಯೊಳಿನತನಯಂ, ಗಂಡಿನೊಳ್ ಭೀಮಸೇನಂ....' ಎಂಬ ಗದ್ಯದಲ್ಲಿ ಆಯಾ ಪಾತ್ರಗಳ ಪ್ರಧಾನ ಗುಣಗಳನ್ನು ಕಾಣಬಹುದು. ಜೀವಂತ ವ್ಯಕ್ತಿಗಳಾದ ಅವರ ಅನ್ಯೋನ್ಯ ಸಂಬಂಧದಲ್ಲಿಯ ರಾಗ ದ್ವೇಷಗಳನ್ನೂ ಸೂಕ್ಷ್ಮ ಸಂಚಲನಗಳನ್ನೂ ತಿಕ್ಕಾಟ-ಕೂಗಾಟಗಳನ್ನೂ ಗ್ರಹಿಸಿದ ಅವನ ಪಾತ್ರ ಪೋಷಣೆ ಸಜೀವವೂ ಸಮರ್ಪಕವೂ ಆಗಿದೆ. ದುರ್ಯೋ ಧನನ ಪಾತ್ರವನ್ನು ಉದಾತ್ತೀಕರಿಸಲಾಗಿದೆ. ಕರ್ಣನು ಪಂಪನ ಮನಸ್ಸನ್ನು ಅಧಿಕವಾಗಿ ಆಕರ್ಷಿಸಿದ್ದಾನೆ. ಕರ್ಣನು ಸತ್ಯ-ತ್ಯಾಗಗಳಿಂದ ಕೂಡಿದ ಆದರ್ಶ ವೀರ. ಅವನ ಪಾತ್ರದಲ್ಲಿ ಪ್ರಭಾವಿಯಾದ ದುರಂತವಿದೆ. " ನೆನೆಯದಿರಣ್ಣ ಭಾರತ........ ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನ

ಮತ್ತೆ ಭಾರತಂ' ಎಂದು ಹೃದಯ ತುಂಬಿ, ಕೊರಳು ಪುದಿದು ಹಾಡಿದ್ದಾನೆ. ಕೃಷ್ಣನು ಪರಮಾತ್ಮನಲ್ಲ, ಶೂರ, ಚತುರ ಹಾಗೂ ಮುತ್ಸದ್ದಿಯಾದ ರಾಜಕಾರಣಿ.

'ಪಸರಿಪ ಕನ್ನಡಕ್ಕೊಡೆಯನೋರ್ವನೆ' ಯಾವ ಗುರು ಪಂಪದೇವನ ಭಾಷೆ 'ಪುಲಿಗೆರೆಯ ತಿರುಳ್ಗನ್ನಡ' ವಾಗಿದೆ. ಅವನ ಶೈಲಿ ಹಾಗೂ ವರ್ಣನೆ ಗಳಲ್ಲಿ 'ಹಿತಮಿತ ಮೃದುವಚನ', 'ಕಿರಿದರೊಳು ಪಿರಿದು,' ರಸ ಧ್ವನಿ ಪ್ರವಣತೆ' ದೇಸಿಯ ಔಚಿತ್ಯ ಮತ್ತು ಸಂಪತ್ತಿ, ನಾದ ಸೂಕ್ಷ್ಮತೆ ಮೊದಲಾದವು ಗಳನ್ನು ಕಾಣಬಹುದು. 'ಪ್ರಸನ್ನ ಗಂಭೀರ ವಚನರಚನಚತುರ' ನೆಂದು ಅವನು ಹೇಳಿಕೊಂಡದ್ದು ಸಾರ್ಥಕವಾಗಿದೆ

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವದು, ಒಂದಿದೇಸಿ ಯೊಳ್ ಪುಗುವದು, ಪೊಕ್ಕು ಮಾರ್ಗದೊಳೆ ತಳ್ವುದು, ತಳ್ತೊಡೆ ಕಾವ್ಯ ಬಂಧವೊಪ್ಪುಗುಂ' ಎಂಬ ಅವನ ಮಾತು ಅವನ ಶೈಲಿಯ ಪ್ರತಿಕ್ರಿಯೆ ಅವನ ಕೃತಿಗಳಿಗೆ ಅನ್ವಯಿಸುತ್ತದೆ. ದೇಸಿ ಮಾರ್ಗಗಳ ಸುಂದರ ಸಮನ್ವಯವು ಇಲ್ಲಿ ಫಲಿಸಿದೆ. ಕನ್ನಡ ದೇಸಿಯನ್ನು ಆತ್ಮೀಕರಿಸಿಕೊಂಡು ಮಾರ್ಗ ಸಂಸ್ಕಾರ ದಿಂದ ಅದನ್ನು ಬೆಳಗಿಸಿದ ಪಂಪನ ಶಕ್ತಿ, ಪ್ರತಿಭೆ ಅಸಾಧಾರಣವೇ ಆಗಿದೆ.

ಇ) ಶಾಂತಿಪುರಾಣ— ರತ್ನತ್ರಯರಲ್ಲಿ ಒಬ್ಬನಾದ, ಕವಿಚಕ್ರವರ್ತಿ ಯಾದ ಪೊನ್ನನ ಧಾರ್ಮಿಕ ಕಾವ್ಯವು 'ಶಾಂತಿಪುರಾಣ'. ಶಾಂತಿನಾಥನು ೧೬ನೆಯ ತೀರ್ಥಂಕರನು. ಇದು ೧೨ ಆಶ್ವಾಸಗಳುಳ್ಳ ಚಂಪೂ ಗ್ರಂಥ, ಜೈನಪುರಾಣ. ವೆಂಗಿ ಮಂಡಳದ ಪುಂಗನೂರಿನ ಮಲ್ಲಪಾರ್ಯ ಮತ್ತು ಪುನ್ನಮಾರ್ಯರು ಬರೆಯಿಸಿದಿದು. ದಾನ ಚಿಂತಾಮಣಿ ಅತ್ತಿಮಬ್ಬೆ ಇದರ ಸಾವಿರ ಪ್ರತಿಗಳನ್ನು ಬರೆಯಿಸಿದಳು.

ತೀರ್ಥಂಕರನ ಭವಾವಳಿಯ ವಿಸ್ತಾರವಾದ ನಿರೂಪಣೆ ಇದರ ವೈಶಿಷ್ಟ್ಯ ವಾಗಿದೆ. "ಪದದಪ್ಪದೆಯುಂ ಬಗೆ ಬೆದ | ಕದೆಯುಂ ಕತೆ ಕಿಡದೆಯುಂ ಭವಾ ವಳಿ ತಡವಾ || ಗದೆಯುಂ ಸವಿತವದೆಯು ಮಂ | ಬುದನಿನದನ ತಂದ್ರುನಿಂದ್ರು ನಾಜಿನ ಚಂದ್ರಂ || ||" ಎಂದಲ್ಲಿ ಪೊನ್ನನ ಆದರ್ಶ ಸೂಚನೆ ಇದೆ.

ಪೊನ್ನನ ಸಾಮಗ್ರಿ ಹೃದಯಸ್ಪರ್ಶಿಯಾದ ಸನ್ನಿವೇಶಗಳಿಲ್ಲದ್ದು. ಆದರೂ ಅವನು ಸಾಧ್ಯವಿದ್ದಲ್ಲಿ ನಿರ್ಮಾಣ ಸ್ವಾತಂತ್ರ್ಯವನ್ನು ತೋರಿಲ್ಲ. ಪೊನ್ನನ

ಗತುನ ಜೈನ ಶಾಸ್ತ್ರ, ಕಾವ್ಯಶಾಸ್ತ್ರಗಳ ಕಡೆಗೆ ಇವೆ. ಜೈನ ಪುರಾಣ
ಬೇಕಾದ ಎಂಟು ಅವಯುವಗಳಿಗೆ ಇಂಬುಗೊಟ್ಟಿದ್ದಾನೆ, ಭವಾಳಿಯ
ಬಿತ್ತರಿಸಿದ್ದಾನೆ, ಶಾಸ್ತ್ರಭಾಗವನ್ನು ವಿವರಿಸಿದ್ದಾನೆ. ಹದಿನೆಂಟು ವರ್ಣನೆ
ನವರಸಗಳೂ ಇಲ್ಲಿ ಬಂದಿವೆ. ಛಂದಸ್ಸು ಶೈಲಿ ಅಲಂಕಾರಗಳಿಂದ
ಬಂಧವು ಪ್ರೌಢವಾಗಿದೆ. "ಸಮವೃತ್ತ ಸಂಧಿ ಲಕ್ಷಣಸಮನ್ವಿತಂ
ಲಂಕೃತಿ ಭ್ರಾಜಿತ ಮುತ್ತಮ ಕಾವ್ಯ ಬಂಧದಂತೆ" ಎಂಬ ಹೋಲಿಕೆ
ಉತ್ತಮ ಕಾವ್ಯದ ಲಕ್ಷಣವನ್ನು ತೋರಿಸುತ್ತದೆ.

'ಪುರಾಣ ಚೂಡಾಮಣಿ' ಎಂದು ಹೇಳಿದ್ದಾನೆ ಇದಕ್ಕೆ. ಇದು
ಪುರಾಣದ ಸಾಂಪ್ರದಾಯಿಕ ಲಕ್ಷಣಗಳಿಂದ ಕೂಡಿದೆಯಾದರೂ ಧರ್ಮ ಹಾ
ಕಾವ್ಯ ಧರ್ಮದ ಸುಂದರ ಸಮನ್ವಯ ಇಲ್ಲಿ ಇಲ್ಲ. ಆದರೆ ಪ್ರಸನ್ನತೆ,
ಬಂಧುರತೆಯನ್ನು ಇಲ್ಲಿ ಕಾಣಬಹುದು. 'ಮದದಂ ಮಸಿಯೊಳ್' ಬರೆ
ಶನ್ನ ತಕ್ಕಿನ ಪೆಸರಕ್ಕರಂಗಳೆನಿಸಿರ್ದವು' ವಸಂತ ಮಾಸದಲ್ಲಿ ಭ್ರಮರಗಳು

ಕಾಳಿದಾಸನ ಪ್ರಭಾವ ಪೊನ್ನನಲ್ಲಿ ಸಾಕಷ್ಟಿದೆ. ಜ್ಯೋತಿಪ್ರಭೆ
ಸ್ವಯಂವರ ವರ್ಣನೆ, ಶಾಂತೀಶ್ವರನ ದಿಗ್ವಿಜಯ ವರ್ಣನೆಗಳು ಕಾಳಿದಾಸ
ಇಂದುಮತೀ ಸ್ವಯಂವರ ವರ್ಣನೆ ಹಾಗೂ ರಘುಮಹಾರಾಜನ ಚೈತ್ರಯಾ
ಗಳ ವರ್ಣನೆಗಳನ್ನು ಅನುಸರಿಸಿ ಬರೆಯಲ್ಪಟ್ಟವೆ. ಆದರೂ 'ಅಸಹಾ
ಕವೀಶ್ವರು', 'ಕಾಳಿದಾಸಂಗಂ ನಾಲ್ವಡಿ' ಎಂದು ಎದೆಯುಬ್ಬಿ ಹೇ
ಕೊಂಡಿದ್ದಾನೆ ಕವಿಚಕ್ರವರ್ತಿ ಪೊನ್ನ.

ಒಟ್ಟಿನಲ್ಲಿ ಪೊನ್ನನು ಮತ ಧರ್ಮ ಮತ್ತು ಪಂಡಿತ ಕಾವ್ಯಧರ್ಮ
ಮೇಳವಿಕೆಯಲ್ಲಿ ಯಶಸ್ವಿಯಾಗಿದ್ದಾನೆ ಆದರೂ ಪೊನ್ನನ ಕವಿತಾ ಶಕ್ತಿಯ
ಇಲ್ಲಿ ಸಂಪ್ರದಾಯ ನಿಷ್ಠೆ, ನೀರಸ ನಿರೂಪಣೆಗಳ ಭಾರದ ಬುಡದಲ್ಲಿ ಸಿಕ್ಕಿ
ಆಗಾಗ ತಲೆ ಎತ್ತುತ್ತಿದ್ದರೂ ಕುಸಿದು ಬಿದ್ದಿರುವದೇ ಹೆಚ್ಚು. 'ಶಾಂ
ಪುರಾಣ'ವು ಶ್ರೇಷ್ಠ ಕೃತಿಯೆಂದು ಹೊಗಳುವವರು ಪಂಡಿತರಾದರೂ ಇರಬೇಕು
ಮೂರ್ಖರಾದರೂ ಇರಬೇಕು, ಯಾಕೆಂದರೆ 'ಪಂಡಿತರುಂ ಮೂರ್ಖರುಮ
ಯಿಂ ಪೊಗಳೆ' ಕಾವ್ಯ ಹೇಳುವ ಪುಣ್ಯ ತನಗೇ ಇರುವದೆಂದು ಪೊನ್ನನೇ
ಹೇಳಿದ್ದಾನೆ.

(ಈ) ಚಾವುಂಡರಾಯ ಪುರಾಣ— 'ಚಾವುಂಡರಾಯ ಪುರಾಣದ' ಕರ್ತೃ ಗಂಗದೊರೆ ರಾಚಮಲ್ಲನ ಮಂತ್ರಿ ಮತ್ತು ಸೇನಾಪತಿಯಾದ ಚಾವುಂಡರಾಯನು ಶ್ರವಣಬೆಳ್ಗೊಳದಲ್ಲಿ ಗೊಮ್ಮಟೇಶ್ವರನ ಮೂರ್ತಿಯನ್ನು ನಿಲ್ಲಿಸಿದುದೇ ಅವನ ಧರ್ಮ ದೃಷ್ಟಿಗೆ ಸಾಕ್ಷಿಯಾಗಿದೆ. ಇದನ್ನು ೯೭೮ ರಲ್ಲಿ ಬರೆದನು. ಇದಕ್ಕೆ ಅವನು ಕೊಟ್ಟ ಹೆಸರು 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ೬೩ ಶಲಾಕಾ ಪುರುಷರ ಚರಿತ್ರೆ ಇದರ ವಿಷಯ. ಹೆಚ್ಚಾಗಿ ಇದು ಗದ್ಯ ಗ್ರಂಥ.

ಇದಕ್ಕೆ ಮೂಲವಾಗಿ ಜೈನ ಪರಂಪರೆಯ ಗ್ರಂಥಗಳು ಜಿನಸೇನ ಗುಣಭದ್ರರ ಸಂಸ್ಕೃತ ಮಹಾ ಪುರಾಣವನ್ನೇ ತನ್ನ ಆಕರವನ್ನಾಗಿ ಸ್ವೀಕರಿಸಿದ್ದಾನೆ. ಮಹಾಪುರಾಣವು ಜೈನ ಸಂಪ್ರದಾಯದ ಪವಿತ್ರ ಗ್ರಂಥ ಇದು ಅದರ ಸಂಗ್ರಹವಾಗಿದೆ. ಮುಖ್ಯ ಚರಿತ್ರಾಂಶ ಹಾಗೂ ಮತಾಂಶಗಳನ್ನು ಅನುವಾದವಲ್ಲವೆನ್ನುವಂತೆ ಕುಶಲತೆಯಿಂದ ಸಂಗ್ರಹಿಸಲಾಗಿದೆ. ವಿಶಿಷ್ಟ ಮತ ದೃಷ್ಟಿಯ ಮೂಲಕ ಸ್ವತಂತ್ರ ಪ್ರತಿಭೆಗೆ ಅವನು ಹೆಚ್ಚಾಗಿ ಅವಕಾಶವನ್ನು ಕಲ್ಪಿಸಿಕೊಂಡಿಲ್ಲ.

ಚಾವುಂಡರಾಯನ ದೃಷ್ಟಿ ಇಲ್ಲಿಯ ಮತ ಪ್ರಸಾರಕ ಹಾಗೂ ಶಾಸ್ತ್ರನಿಷ್ಠವಾಗಿದೆ. ತತ್ವ ನಿರೂಪಣೆ ಶಾಸ್ತ್ರೀಯ ಲೇಖಕನ ಚೊಕ್ಕಟತನವನ್ನು ವ್ಯಕ್ತಪಡಿಸುತ್ತದೆ. ಚರಿತ್ರೆ ಮತಾಂಶ ಕಲ್ಪನೆಗಳಲ್ಲಿ ಜಿನಸೇನ, ಗುಣಭದ್ರ ಹಾಗೂ ಪಂಪ ಇವರ ಪ್ರಭಾವವೇ ಇಲ್ಲಿ ಸ್ಫುಟವಾಗಿ ಕಾಣುತ್ತದೆ.

ಗದ್ಯ ಶೈಲಿಗಾಗಿ ಇದು ಗಣ್ಯವಾದ ಗ್ರಂಥ. ಅದರಲ್ಲಿಯೂ ಕಥಾ ಗದ್ಯ ಮತ್ತು ಶಾಸ್ತ್ರಗದ್ಯ ಇವುಗಳ ವಿಶಿಷ್ಟ ಮೇಳವಿಕೆ ಇಲ್ಲಿದೆ. ಕಥಾ ಗದ್ಯದ ಸಹಜವಾದ ಓಘ, ಬಳಕೆಮಾತಿನ ಸೊಗಸು, ಇವುಗಳ ಜೊತೆಗೆ ಶಾಸ್ತ್ರ ಗದ್ಯದ ಅಚ್ಚುಕಟ್ಟು, ಚೊಕ್ಕತನ ಇವು ಸೇರಿಕೊಂಡು 'ಚಾವುಂಡರಾಯ ಪುರಾಣ'ದ ಬರವಣಿಗೆಗೆ ಜನಸುಲಭವಾದರೂ ಶಾಸ್ತ್ರ ಶುದ್ಧವಾದ ನಡಿಗೆಯ ಬೆಡಗನ್ನು ನೀಡಿರುತ್ತವೆ.

ಈ ಮಿಶ್ರ ಶೈಲಿಯ ಸಮತೆಯನ್ನು ಕದಡಿಸಲು ಅತಿ ಸಂಸ್ಕೃತ ಪ್ರಯೋಗಗಳೂ ಚಿಕ್ಕ ವಾಕ್ಯಗಳೊಡನೆ ಉದ್ದನ್ನ ವಾಕ್ಯಗಳೂ ಬೇಸರು ತರುವ ಪುನರುಕ್ತಿಗಳೂ ಹಣಿಕೆ ಇಕ್ಕಿವೆ. ಪೂರ್ವದ ಹಳಗನ್ನಡದ ಕೆಲವು ವ್ಯಾಕರಣ ವಿಶೇಷಗಳು ನಿಯಮಿತವಾಗಿ ನೆಲಸಿವೆ. ಇಲ್ಲಿ ಚಂಪೂಗದ್ಯದ ಅಲಂಕಾರ, ಆಡಂಬರಗಳಿಲ್ಲ.

ಕೇವಲ ಕಥಾ ಗದ್ಯದ ದೇಸಿಯ ಸಂಪತ್ತಿಯಿಲ್ಲ. ಆದರೆ ತನ್ನದೇ ಆದ
ಸರಳ ಲಾಲಿತ್ಯ, ಗಂಭೀರ ಗತಿಗಳಲ್ಲಿ ಈ ಗದ್ಯ ಸಾಹಿತ್ಯ ಗುಣವನ್ನು
ವಾಗಿ ತೋರಿಸಿದೆ. ಒಟ್ಟಿನಲ್ಲಿ 'ಚಾವುಂಡರಾಯ ಪುರಾಣ'ವು ವಿ
ಹಾಗೂ ವಿನ್ಯಾಸಗಳಲ್ಲಿ ಅಸ್ವತಂತ್ರವಾದರೂ ಹಳಗನ್ನಡ ಗದ್ಯ ಶೈಲಿ
ವೈಶಿಷ್ಟ್ಯತೆಯನ್ನು ಮೆರೆದಿದೆ. ಇದರ ಸ್ವರೂಪವನ್ನು ಗಂಭೀರ, ಧಾ
ಚೊಕ್ಕಟವೆಂದು ಹೇಳಿಡಬಹುದು.

ಉ) ಕರ್ನಾಟಕ ಕಾದಂಬರಿ— ೧ನೆಯ ನಾಗವರ್ಮನು ಇ
ಕರ್ತೃ. ಹತ್ತನೆಯ ಶತಮಾನದ ಕೊನೆ ಕೊನೆಯಲ್ಲಿ ಬಾಳಿದ ಕವಿ ಅ
'ಕರ್ನಾಟಕ ಕಾದಂಬರಿ'ಯು ಬಾಣನ ಸಂಸ್ಕೃತ ಕಾದಂಬರಿಯ ಅನು
ಅನುವಾದವೆನ್ನುವದಕ್ಕಿಂತ ಕನ್ನಡ ಪರಿವರ್ತನ. ಈ ದಾರಿಯಲ್ಲಿ ಇ
ಮೊದಲಿಗನು. ಪಂಪನ ಲೌಕಿಕ ಗ್ರಂಥದ ಸರಣಿ ಇಲ್ಲಿದೆ. 'ಕೃತಿಪತಿ ನ
ಚಂದ್ರಂ' ಎಂದು ಹೇಳಿರುವದರಿಂದ ತನ್ನ ಅರಸನಾದ ಚಂದ್ರನನ್ನು ಚ
ಪೀಡನೊಂದಿಗೆ ತಾದಾತ್ಮ್ಯಗೊಳಿಸಿ ಬರೆದ ಗ್ರಂಥವಿದು. ತನ್ನರಸನ
ದೇಶದಲ್ಲಿಯ ಪ್ರಣಯ. ಕ್ಷಣಿಕ ಭಂಗ, ಪುನರ್ಮಿಲನಗಳನ್ನು ತೋರಿ
ಉದ್ದೇಶವೂ ಇಲ್ಲಿರಬಹುದು.

ಇದು ಸಾಹಸಮಯವಾದ ಯಶಸ್ವಿಯಾದ ಅನುವಾದ. ಉಭ
ಭಾಷೆಗಳ ಗಾಢ ಪ್ರಭುತ್ವದೊಂದಿಗೆ ರಸದೃಷ್ಟಿ, ಔಚಿತ್ಯ ಪರಿಜ್ಞಾನ
ನಾಗವರ್ಮನಲ್ಲಿ ಇದ್ದುವೆಂದೇ ಯಶಸ್ಸಿಗೆ ಕಾರಣವಾಗಿದೆ. ಮೂಲಗದ್ಯ
ಚಂಪೂ ರೂಪಕ್ಕೆ ತಿರುಗಿಸಿದುದು ಪರಿಣಾಮಕಾರಿಯಾಗಿದೆ. ಭಾಷಾಂ
ರೂಪಾಂತರಗಳ ನಡು ದಾರಿಯನ್ನು ಹಿಡಿದು ನಾಗವರ್ಮನು ಪರಿವ
ಕಲೆಗೆ ಮಾದರಿಯನ್ನು ನಿರ್ಮಿಸಿಕೊಟ್ಟಿದ್ದಾನೆ.

ಮೂಲದ ಕಥಾನಕ ಸಾರ, ಪಾತ್ರಗಳ ಜೀವಾಳ, ವರ್ಣನೆಗಳ ಸ್ವಾ
ಇವುಗಳಿಗೆ ಕುಂದುಬಾರದಂತೆ ಮೂಲವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ವ
ರಚನೆಯಂತೆ ಸಲೀಲವಾಗಿ ಬರೆದಿದ್ದಾನೆ. ಇದರಿಂದ ಅವನ ಅನುಕೃತಿ
ಸ್ವತಂತ್ರ ಕೃತಿಯಾಗಿದೆ. ಇಲ್ಲಿ ಮೂಲದ ಕೆಲ ಭಾವಗಳನ್ನು ಬಿಡಲಾಗಿ
ಕೆಲವನ್ನು ಸಂಗ್ರಹಿಸಲಾಗಿದೆ. ಕೆಲವನ್ನು ವಿಸ್ತೃತಗೊಳಿಸಲಾಗಿದೆ. ಸಾಮಾ
ವಾಗಿ ಇಲ್ಲಿ ನಾಗವರ್ಮನ ಔಚಿತ್ಯದೃಷ್ಟಿ ಫಲಿಸಿದೆ.

'ಕರ್ನಾಟಕ ಕಾದಂಬರಿ'ಯ ಭಾಷೆ ಪ್ರಸನ್ನ ಗಂಭೀರವಾದ ಸರಳವಾದ ಹಳಗನ್ನಡವಾಗಿದ್ದು ಕನ್ನಡ ದೇಸಿಯ ಕಳೆ ಅದರಲ್ಲಿ ಎದ್ದು ಕಾಣುತ್ತದೆ. ಪಂಪನ ಮಾರ್ಗ ದೇಸಿಗಳ ಸುಂದರ ಸಮನ್ವಯವನ್ನು ಸಾಧಿಸಿದವರಲ್ಲಿ ನಾಗ ವರ್ಮನೂ ಒಬ್ಬನು. ಕೆಲ ಕಡೆಗೆ ಸಂಸ್ಕೃತದ ಆವೇಶ ಹೆಚ್ಚಾಗಿ ತೋರಿದರೂ ಕಂದವೃತ್ತ, ಗದ್ಯ ವಚನಗಳಲ್ಲೆಲ್ಲ ಒಂದೇ ಹದ, ಹಗುರಾದ ಪಳಗಿದ ಶೈಲಿ ಯಿದೆ. ಕನ್ನಡ ಸಾಹಿತ್ಯದಲ್ಲಿ 'ಕಾದಂಬರಿ'ಯಷ್ಟು ಮೇಲಾದ ಪರಿವರ್ತನವು ಇನ್ನೊಂದಿಲ್ಲ. ಎಂದು ಧೈರ್ಯವಾಗಿ ಹೇಳಬಹುದು.

ಮೂಲದ ಬೆರಗು ಇಲ್ಲಿ ಕಡಿಮೆ ಆಗಿರಬಹುದು, ಆದರೆ ಮೂಲಕ್ಕೆ ಇನ್ನೊಂದು ಮಾಟವನ್ನು ಒದಗಿಸಿದ ಹೊಸ ಬೆರಗು ಮಾತ್ರ ಇಲ್ಲಿ ತಲೆ ದೋರಿದೆ. ಅಂತೆಯೇ ನಾಗವರ್ಮನ ಕಾದಂಬರಿಯು ಅನುವಾದವಾಗಿಯೂ ಸ್ವತಂತ್ರ ಕೃತಿಯ ಸತ್ವವುಳ್ಳದ್ದಾಗಿ ಕನ್ನಡ ಸಾಹಿತ್ಯದ ಚಿರಂತನ ಗ್ರಂಥಗಳಲ್ಲಿ ಒಂದಾಗಿದೆ.

ಊ) ಗದಾಯುದ್ಧ — 'ಗದಾಯುದ್ಧ'ವು ಕವಿ ರನ್ನನ ಕೃತಿರತ್ನ. ಇದು ಲೌಕಿಕ ಕಾವ್ಯ. ವ್ಯಾಸ ಭಾರತದ ಗದಾ ಸೌಪ್ತಿಕ ಪರ್ವಗಳು, ಪಂಪ ಭಾರತ, ಭಾಸನ 'ಊರುಭಂಗ' ಹಾಗೂ ಭಟ್ಟನಾರಾಯಣನ 'ವೇಣೀ ಸಂಹಾರ' ಗಳ ಸನ್ನಿವೇಶಗಳೂ ಕಲ್ಪನೆಗಳೂ ಎರವಲಾಗಿ ಬಂದಿವೆ; ಒಟ್ಟಾಗಿ ಒಂದು ನಾಟಕೀಯತೆಗೆ ಪುಟಕೊಟ್ಟವೆ. ಆದರೂ ಇದು ಸ್ವತಂತ್ರ ಸಂಪೂರ್ಣ ಕೃತಿಯ ರೂಪ ತಾಳಿದೆ. ಮೂಲ ವಿವಿಧ ಸಾಮಗ್ರಿಗಳ ವಿವಿಧ ಸಂಯೋಜನೆಯ ಮೂಲಕವಾಗಿ ಫಲಿಸಿದ ಏಕ ಮುಖ ಕಲಾಕೃತಿಯು ಸ್ವಂತಿಕೆ ಹಾಗೂ ಸಾಮ ರಸ್ಯದಲ್ಲಿ ರನ್ನನ ಮಹೋನ್ನತಿ ತಲೆ ಎತ್ತಿದೆ. ಪೂರ್ವ ಕಥೆಯ ಪುನರ್ನಿರ್ಮಾಣ ಮೂಲಕವಾದ ಉತ್ತಮ ಕಲಾವಂತಿಕೆ, ಸನ್ನಿವೇಶ ಸೃಷ್ಟಿ, ವಸ್ತು ರಚನೆ ಗಳಿಂದ 'ಗದಾಯುದ್ಧ' ಭವ್ಯವಾಗಿದೆ. ಸುಂದರವಾಗಿದೆ.

ಸತ್ಯಾಶ್ರಯನು ಗದಾಯುದ್ಧದ ನಾಯಕನಾಗಿದ್ದಾನೆ. ಭೀಮನೊಡನೆ ಒಂದುಮಾಡಿ ಅವನನ್ನು ಹೊಗಳಲಾಗಿದೆ. ಆದ್ದರಿಂದಲೇ ಇದು 'ಸಾಹಸ ಭೀಮ ವಿಜಯ'ವಾಗಿದೆ. ಇಲ್ಲಿ ಪಂಪನ ಮಾರ್ಗವನ್ನು ಅನುಸರಿಸಲಾಗಿದೆ. ಪ್ರತಿಜ್ಞಾ ಪೂರ್ತಿಮಾಡಿದ ಭೀಮನು ಪಟ್ಟಬಂಧ ಗೌರವಕ್ಕೆ ಅರ್ಹನಾಗಿದ್ದಾನೆ.

ದ್ರೌಪದಿಯ ವೇಣೀಸಂಹಾರಕ್ಕೆ ತಕ್ಕವನಾಗಿದ್ದಾನೆ. ಇಲ್ಲಿ ತತ್ಕಾಲೀನ ಚರಿತ್ರೆಯು ಭಾರತದ ಕಥೆಯ ಕಟ್ಟಡದಲ್ಲಿ ಒಳಪದರಾಗಿ ಸೇರಿಕೊಂಡಿದೆ. "ಒಳಪೊಕ್ಕು ನೋಡೆ ಭಾರತ । ದೊಳಗಣ ಕಥೆಯುಲ್ಲವಿೂ ಗದಾಯುದ್ಧ ದೊಳಂ । ತೊಳಕೊಂಡಿತ್ತೆನೆ ಸಿಂಹಾ । ವಳೋಕನ ಕ್ರಮದಿ ನೆಱಪಿದಂ ಕವಿರತ್ನಂ ॥ ॥" ಎಂಬುದು ಒಟ್ಟನಲ್ಲಿ ಯಶಸ್ವಿಯಾಗಿದೆ.

'ಗದಾಯುದ್ಧ'ದ ಗುಣ ವಿಶೇಷವೆಲ್ಲ ಅದರ ಅದ್ಭುತ ನಾಟ್ಯ ನಿರ್ಮಾಣದಲ್ಲಿದೆ. ಇಲ್ಲಿ ಪ್ರತಿ ದೃಶ್ಯ ಹಾಗೂ ಸಂವಾದದಲ್ಲಿ ಹುಟ್ಟು ನಾಟಕಕಾರನ ಕೈವಾಡವು ಕಂಡುಬರುತ್ತದೆ ಕಾವ್ಯ ರೂಪದ ಹೇರೊಡಲಲ್ಲಿ ನಾಟಕರೂಪ ಅಡಗಿದೆ. ದ್ರೌಪದಿಯ ಪ್ರಚೋದನೆಯಿಂದ ಹೊರಟ ಭೀಮನ ಕಿಡಿನುಡಿ, ಪ್ರತಿ ಮಾತಿನಲ್ಲಿಯೂ ತೋರುವ ದುರ್ಯೋಧನನ ಛಲ, ರಣಾಂಗಣದಲ್ಲಿಯ ದುರ್ಯೋಧನನ ಪ್ರಲಾಪ, ವೈಶಂಪಾಯನ ಸರೋವರದಮೇಲಿನ ದೃಶ್ಯ... ಹೀಗೆ ಎಲ್ಲ ಕಡೆಗೂ ಸನ್ನಿವೇಶ, ಸಂವಾದಗಳು ಸೂರೆಯಾಗಿವೆ. ವಿಶಿಷ್ಟ ಶಕ್ತಿಯುತವಾದ ನಾಟಕೀಯತೆಯಿಂದಲೇ ರನ್ನನು ವರಕವಿ, ಚಿರಕವಿ ಮಹಾಕವಿಯಾಗಿದ್ದಾನೆ, ಕವಿಚಕ್ರವರ್ತಿಯಾಗಿದ್ದಾನೆ.

ಇಲ್ಲಿ ಭೀಮ, ದುರ್ಯೋಧನ, ದ್ರೌಪದಿ ಮುಖ್ಯರು. ದುರ್ಯೋಧನನೇ ಇವರ ದುರಂತ ನಾಯಕನೆಂದೂ ಕೆಲವರ ವಾದ ಅವರು ದುರ್ಯೋಧನನ್ನು ಸುಯೋಧನನನ್ನಾಗಿಸಿದ್ದಾರೆ. ಮಹಾನುಭಾವನನ್ನಾಗಿಸಿದ್ದಾರೆ. ಅಭಿಮನ್ಯು ಹಾಗೂ ಕರ್ಣರ ಬಗ್ಗೆ ಅವನು ವ್ಯಕ್ತ ಪಡಿಸಿದ ಅಭಿಪ್ರಾಯಗಳೇ ಬಹುಶಃ ಇದಕ್ಕೆ ಆಧಾರವಾಗಿವೆ. ಇಲ್ಲಿ ಶೋಕ ಹಾಗೂ ಕರುಣರಸಗಳೂ ಕೋಡಿಯಾಗಿ ಹರಿದಿವೆ. ಆದರೂ ವೀರರಸವೇ ಅವರಿಗೆ ಇಲ್ಲಿ ಪ್ರಧಾನವಾಗಿದೆ. ಆದರೆ ಭೀಮನೇ ಇಲ್ಲಿ ನಾಯಕ, ರೌದ್ರರಸವೇ ಪ್ರಧಾನವಾದುದು. ದುರ್ಯೋಧನನು ಇಲ್ಲಿ ಪ್ರತಿನಾಯಕ ಖಲನಾಯಕ. ವೀರ ರೌದ್ರರಸವೇ ಇಲ್ಲಿ ಮುಖ್ಯವಾದುದು. ಒಟ್ಟನಲ್ಲಿ ರನ್ನನು ಇಲ್ಲಿ ಭೀಮನನ್ನು ಇಳಿಸಿಲ್ಲ. ಆದರೆ ದುರ್ಯೋಧನನನ್ನು ಏರಿಸಿರುವನು, ಘನತೆಗೊಯ್ದಿರುವನು.

ಇದನ್ನೆಲ್ಲ ಹಿಂಜಿ ನೋಡಲಾಗಿ ದುರ್ಯೋಧನನು ದೊಡ್ಡ ವೀರನೂ, ತೇಜಸ್ವಿಯೂ, ಮಾನಿಯೂ ಎಂಬುದನ್ನು ರನ್ನ ಬಾಯ್ತುಂಬ ಹೊಗಳಿದ್ದರೂ ಅವನ ದುಷ್ಟಪ್ರವೃತ್ತಿಗಳಿಂದಲೂ ದುರ್ನಡತೆಯಿಂದಲೂ ತನ್ನ ನಾಶಕ್ಕೆ ತಾನೇ

ಕಾರಣನಾದನೆಂಬುದನ್ನು ತೋರಿಸಿಕೊಟ್ಟಿದ್ದಾನೆ. ದುರ್ಯೋಧನನು ಛಲ ದಂಕಮಲ್ಲ. ಕರ್ಣನೆಂದರೆ ಅವನಿಗೆ ಪಂಚಪ್ರಾಣ. ದುಶ್ಶಾಸನನಲ್ಲಿಯುಂತೂ ಅಪಾರ ನಂಬುಗೆ.

'ಗದಾಯುದ್ಧ'ವು ಕಿರಿದು ಗಾತ್ರದಲ್ಲಿದ್ದ ಮಹಾಕೃತಿ. ಮಾರ್ಗದೇಶಿಗಳ ಸುಂದರ ಸಮನ್ವಯ ಇಲ್ಲಿದೆಯಾದರೂ ಕೆಲವೆಡೆ ಸಂಸ್ಕೃತದ ಬಳಕೆ ಹೆಚ್ಚಾಗಿದೆ. ಮಾತುಗಳೆಲ್ಲ 'ಕಿಡಿ'ಗಳೇ ರನ್ನನ ಶೈಲಿ ವೀರಶೈಲಿ. ವೀರ ರೌದ್ರ ರಸಗಳು ಓತಪ್ರೋತವಾಗಿ ಹರಿದಿದ್ದರೂ ಅದಕ್ಕೆ ಪೋಷಕವಾಗಿ ಕರುಣ, ಶೋಕ, ಭೀಭತ್ಸಗಳು ಇಲ್ಲದಿಲ್ಲ. ಶೃಂಗಾರ ತರುವ ಪ್ರಯತ್ನ ಸಫಲವಾಗಿಲ್ಲ. ಉಪಮೆ, ರೂಪಕ, ಅತಿಶಯೋಕ್ತಿ ಮೊದಲಾದ ಅಲಂಕಾರಗಳು ಯಥೋಚಿತವಾಗಿ ಬಂದು ಕಾವ್ಯಕ್ಕೆ ಮೆರಗು ಕೊಟ್ಟವೆ. ಇದೊಂದು ವೀರರಸ ಪ್ರಧಾನವಾದ ರಸಘಟ್ಟ. ಒಟ್ಟನಲ್ಲಿ ಇಲ್ಲಿ ಉತ್ಕೃಷ್ಟ ಕವಿತಾಶಕ್ತಿಯನ್ನೂ ಅನುಭವದ ಮತ್ತು ಪ್ರತಿಭೆಯ ಪರಿಪಕ್ವತೆಯನ್ನೂ ನಾವು ಕಾಣಬಹುದು.

ರನ್ನನು 'ಗೂಢಾರದ ಕವಿಯಂತಿರೆ ಮುಚ್ಚಿಮೋದ ಕವಿ' ಯಲ್ಲ. ಅವನದೆಲ್ಲ ಬಿಚ್ಚುಮಾತು. ನಾಟಕೀಯತೆಯಲ್ಲಿ ರನ್ನನದು ಯಾವಾಗಲೂ ಒಂದು ಕೈ ಮೇಲು. ತನಗೆ ಪ್ರೇರಕವಾದ 'ಪಂಪ ಭಾರತದ' ಪಡಿನೆಳಲಾಗಿದೆ. 'ಗದಾಯುದ್ಧ'ವು ಸ್ವತಂತ್ರ ಕೃತಿಯಾದುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಪವಾಡವೇ ಆಗಿದೆ. ಸ್ಥೂಲ ದೃಷ್ಟಿಗೆ ಇದರಲ್ಲಿ ಕೃತಿಚೌರ್ಯ ತೋರಿಬಂದರೆ, ಸೂಕ್ಷ್ಮ ವಿಮರ್ಶಾ ದೃಷ್ಟಿಗೆ ಇದು ಕೃತಿ ರತ್ನವೇ ಸರಿ. ಇದನ್ನು ಪರೀಕ್ಷಿಸಿಪಂಗೆ ಎಂಟೆರ್ದೆಯೇ ಎನ್ನುವಷ್ಟು ಶ್ರೇಷ್ಠ ಮಟ್ಟದ ಕೃತಿರತ್ನವಿದು.

೩) ಅಜಿತ ಪುರಾಣ — ಇದು ಕವಿರನ್ನನ ಮೊದಲ ಕೃತಿ. ಇದರ ರಚನೆಯ ಕಾಲ ಕ್ರಿಸ್ತಶಕ ೯೯೩. ಇದು ೨ನೆಯ ತೀರ್ಥಂಕರನಾದ ಅಜಿತ ಸ್ವಾಮಿಯ ಮತ್ತು ೨ನೆಯ ಚಕ್ರವರ್ತಿಯಾದ ನಗರದ ಚರಿತ್ರೆಯುಳ್ಳ ಜೈನ ಪುರಾಣವಾಗಿದೆ, ಇದನ್ನು 'ದಾನಚಿಂತಾಮಣಿ' ಯಾದ ಅತ್ತಿಮಬ್ಬೆಯು ರನ್ನನಿಂದ ಹೇಳಿಸಿದ್ದಾಳೆ.

ಇದರ ಪೀಠಿಕಾಭಾಗದಲ್ಲಿ ಕವಿಯು ಅತ್ತಿಮಬ್ಬೆಯ ಆದರ್ಶಚಾರಿತ್ರ್ಯವನ್ನು ಬಾಯ್ತುಂಬ ಹೊಗಳಿದ್ದಾನೆ ಅವಳ ಸಂತುಷ್ಟಿಗಾಗಿ ಇದನ್ನು ಬರೆದ ಹಾಗಿದೆ.

ಈ ಪುರಾಣದ ಒಂದು ವೈಶಿಷ್ಟ್ಯವೆಂದರೆ ಇದರಲ್ಲಿ ಭವಾವಳಿಯ ತೊಡಕಿಲ್ಲ. ಶಾಂತಿಪುರಾಣದ ಪ್ರಮಾಣ ಜ್ಞಾನದ ಅಭಾವವಿಲ್ಲವೆಂದರೆ ಆದಿ ಪುರಾಣ ಭವಾವಳಿಯ ಭವ್ಯಚಿತ್ರವೂ ಇಲ್ಲವೆಂಬ ಮಿಡುಕು ಮಾತ್ರ ಉಳಿಯುತ್ತದೆ.

ಇದರಲ್ಲಿ ಅಜಿತ ಸ್ವಾಮಿಯ ಚರಿತ್ರೆಯು ಸಾಂಪ್ರದಾಯಿಕವಾದ ರೀತಿಯಲ್ಲಿ ಬಂದಿದೆ. ಪಂಚಕಲ್ಯಾಣಗಳ ವರ್ಣನೆಯಿದೆ. ಆದ್ದರಿಂದ ಇಲ್ಲಿ ಹೃದ್ಯವಾದ ಹಾಗೂ ಜೀವನ ಸ್ಪರ್ಶಿಯಾದ ಸನ್ನಿವೇಶಗಳೂ ಪಾತ್ರಗಳೂ ಇಲ್ಲದೆ ಪ್ರತಿಭೆಯು ರಭಸವಿದ್ದರೂ ಸಾಕಷ್ಟು ಪರಿಣಾಮಕಾರಿಯಾಗದ ಪುರಾಣವಾಗಿದೆ. ಇಲ್ಲಿ ರನ್ನನ ವಿಶಿಷ್ಟವಾದ ಉತ್ಸಾಹ, ತಾದಾತ್ಮ್ಯಗಳನ್ನು ತುಂಬಾ ನೋಡಬಹುದು.

ವೈರಾಗ್ಯ ವರ್ಣನೆಯಲ್ಲಿ ಸ್ವಾರಸ್ಯವಿದೆ, ನಾಟ್ಯಗುಣವಿದೆ. ಜನ್ಮಾಭಿಷೇಕದಲ್ಲಿ ರನ್ನನು ಸಂಪೂರ್ಣ ತಾದಾತ್ಮ್ಯ ಹೊಂದಿದ್ದಾನೆ. ಇಲ್ಲಿ ಅವನ ಹರ್ಷಾತಿಶಯವು ಫಲಿಸಿದೆ, ಕಲ್ಪನೆ ಕುಡಿವರೆದಿದೆ. ಇಡಿಯ ಕಾವ್ಯದಲ್ಲಿ ಮಾನವತೆಯ ಅಂಶದಿಂದ ಹೃದಯ ಸ್ಪರ್ಶಿಯಾದ ಭಾಗವೆಂದರೆ ಅಜಿತ ಸ್ವಾಮಿ ವಿರಕ್ತಿ ಹೊಂದಿ ತನ್ನವರನ್ನು ಬಿಟ್ಟು ತಪಸ್ಸಿಗೆ ಹೋದಾಗಿನ ದೃಶ್ಯ. 'ಮದುವೆಗಳುಪಿದ ಮನೆಯಂದದಿನಿರ್ದುದಯೋಧ್ಯಾನಗರಂ', ರಸವಿಲ್ಲದ ಕೃತಿಯಂತೆ ಆಯಿತು ಆ ದೃಶ್ಯ.

ರಾಣಿಯರ ಆರ್ತ ಕೂಗು 'ಅವನಿಲ್ಲದೆ ನಾವೇನು ಮಾಡೋಣ!' 'ಬಿಡಿವಿಡಿ ದೀಪದ ರಾಜಹಂಸೆಗಳಂ', ಲಲಿತ ಲತಾಯಂಗಳಿರ....ವಿಯೋಗ ಮಾಡುದು ನಿಮಗವೆಮಗಂ', ಎಲೆಪರಪುಟ್ಟ ಕೇಳಲೇ, ಮಧುವ್ರತ ಕೇಳ್, ನೆನೆಯುತಿರ್ದುದು...ಪೋದಪೆಮೆಮ್ಮ ಸಾಮಿಯಾ, ಮುಂತಾದ ಮಾತುಗಳಲ್ಲಿ ಮಾರ್ದನಿಗೊಳ್ಳುತ್ತದೆ. ಇಲ್ಲಿಯ ಶೋಕವು ಅಜಿತ ಸ್ವಾಮಿಯ ದೃಢನಿರ್ಧಾರದ ಹಿನ್ನೆಲೆಯಲ್ಲಿ ಹೆಚ್ಚಾಗಿ ಕರುಳನ್ನು ಇರಿಯುತ್ತದೆ.

ಒಟ್ಟಿನಲ್ಲಿ ಅಜಿತ ಪುರಾಣವು ರನ್ನನ ರಸಸೃಷ್ಟಿಗೆ ಸಂಚಕಾರವಾಗಿದೆ. ಇಲ್ಲಿ ರನ್ನನು ಜೈನ ಶಾಸ್ತ್ರ, ನಾಟ್ಯ ಶಾಸ್ತ್ರ, ಅಲಂಕಾರ ಶಾಸ್ತ್ರ ಇವುಗಳ ತನ್ನ ಗಾಢ ವ್ಯಾಸಂಗವನ್ನು 'ಅಜಿತ ಪುರಾಣದಲ್ಲಿ ಪ್ರದರ್ಶನಗೊಳಿಸಲು ಹೋಗಿದ್ದಾನೆ. ಕವಿಸಮಯದ ಬೆನ್ನು ಹತ್ತಿದ್ದಾನೆ, ವರ್ಣನೆಗಳ ಹುಚ್ಚು ತಲೆ

ಗೇರಿದೆ. ಇವನ್ನೆಲ್ಲ ಕಣ್ಣಿಟ್ಟು ನೋಡಿದರೆ ಪ್ರತಿಭೆಯೊಡನೆ ಅವನು ನಡೆಸಿದ ಪ್ರಥಮ ಪ್ರಣಯಾವೇಶದ ಗುರುತೆಂಬಂತೆ ಈ ಕಾವ್ಯ ತೋರುತ್ತದೆ.

ಇವನ್ನು 'ಪುರಾಣ ಚೂಡಾಮಣಿ' ಎಂದೂ 'ಪುರಾಣ ತಿಲಕ' ವೆಂದೂ ರನ್ನನು ಕರೆದಿದ್ದಾನೆ. 'ಆದಿ ಪುರಾಣ', 'ಶಾಂತಿ ಪುರಾಣ', 'ಅಜಿತ ಪುರಾಣ' ಗಳ ರೇಷೆಗೆ ಬೇರೆ ಪುರಾಣಗಳು ಬರಲಾರವು ಎನ್ನುತ್ತಾನೆ. ಇದು ಆತ್ಮ ವಿಶ್ವಾಸದ ಅತಿರೇಕ. 'ಆದಿ ಪುರಾಣ'ದ ತೂಕಕ್ಕೆ 'ಅಜಿತ ಪುರಾಣ'ವು ಬರಲಾರದು.

ಪ್ರಶ್ನೆ ೮– ಟಿಪ್ಪಣಿ ಬರೆಯಿರಿ– (ಅ) ಪಂಚತಂತ್ರ (ಆ) ಮದನ ತಿಲಕ (ಇ) ಜಾತಕ ತಿಲಕ (ಈ) ದುರ್ಗಸಿಂಹ.

ಉತ್ತರ— (ಅ) ಪಂಚತಂತ್ರ— ಗ್ರಂಥಕರ್ತ ದುರ್ಗಸಿಂಹ. ಅವನ ಕಾಲ ಸುಮಾರು ಕ್ರಿಸ್ತಶಕ ೧೦೩೦. ಗುಣಾಢ್ಯನು ಪೈಶಾಚಿಕ ಭಾಷೆಯಲ್ಲಿ ಹೇಳಿದ 'ಬೃಹತ್ಕಥೆ'ಯಲ್ಲಿಯ ಪಂಚರತ್ನಗಳಾದ ಐದು ಕಥೆಗಳನ್ನು ವಸುಭಾಗ ಭಟ್ಟನು ಪಂಚತಂತ್ರವೆಂದು ಹೆಸರಿಟ್ಟು ಹೇಳಿದನು. ವಸುಭಾಗ ಭಟ್ಟನ ಪಂಚ ತಂತ್ರವನ್ನೇ ಕನ್ನಡದಲ್ಲಿ 'ಪೊಸತಾಗಿರೆ ವಿರಚಿಸುವೆಂ' ಎಂದು ದುರ್ಗಸಿಂಹನು ಹೇಳಿದ್ದಾನೆ. ಇಲ್ಲಿ ವಿಷ್ಣುಶರ್ಮನ ಹೆಸರೇ ಇಲ್ಲ.

ಸಂಸ್ಕೃತದಲ್ಲಿ ವಿಷ್ಣುಶರ್ಮನ 'ಪಂಚತಂತ್ರ' ಹೆಸರಾಗಿದೆ. ಇದು ಉಪ ಲಬ್ಧವಿದೆ. ವಸುಭಾಗ ಭಟ್ಟನ ಪಂಚತಂತ್ರದ ಬಗ್ಗೆ ತಿಳಿಯುವದು ಮೊದಲು ಇಲ್ಲಿಯೇ. ಇದು ಉಪಲಬ್ಧವಿಲ್ಲ. ಈ ದೃಷ್ಟಿಯಿಂದ ಇದಕ್ಕೆ ಭಾರತೀಯ ಮಹ ತ್ವವಿದೆ. ಜಾವಾ ದ್ವೀಪದಲ್ಲಿ ವಸುಭಾಗ ಭಟ್ಟನ ಮೂರು ಪಂಚತಂತ್ರಗಳು ದೊರೆತಿದ್ದು ಅವುಗಳಲ್ಲಿ ಎರಡು ಪದ್ಯದಲ್ಲಿ ಹಾಗೂ ಒಂದು ಗದ್ಯದಲ್ಲಿ ಇರುವ ವೆಂದು ತಿಳಿದುಬರುತ್ತದೆ.

ವಿಷ್ಣುಶರ್ಮನಿಂದ ಭಿನ್ನವಾದ ಅಂಶಗಳಲ್ಲಿ ರುದ್ರಭಟ್ಟನು ವಸುಭಾಗ ಭಟ್ಟನನ್ನು ಅನುಸರಿಸಿರಬೇಕು. ದುರ್ಗಸಿಂಹನಲ್ಲಿ ದೊರೆಯುವ ಜೈನ ಮತ ತತ್ವಗಳೂ ಪಾರಿಭಾಷಿಕ ಪದಗಳೂ ವಿಷ್ಣು ಶರ್ಮನಲ್ಲಿಲ್ಲ. ಈ ದೃಷ್ಟಿಯಲ್ಲಿ ಇಲ್ಲಿ ಕಥಾ ಸ್ವರೂಪವೇ ಮಾರ್ಪಟ್ಟಿದೆ. ಒಂದು ವೇಳೆ ವಸುಭಾಗ ಭಟ್ಟನ

ಪಂಚತಂತ್ರವು ಜೈನಮತ ಪರವಾಗಿಯೂ ಇರಬಹುದು. ಇದಕ್ಕೆ ಆಧಾರ
ಪಿಂಗಳಕನಿಗೆ ಸಂಜೀವಕನು ಮಾಡಿದ ಉಪದೇಶವೇ ಸಾಕ್ಷಿಯಾಗಿದೆ.

ದುರ್ಗಸಿಂಹನು ವೈದಿಕ ಮತಾನುಯಾಯಿ ಅವನ ಆಶ್ರಯದಾತ
ಜೈನನಲ್ಲ. ಆದರೆ ಜೈನಮತ ಪ್ರಭಾವ ಇಲ್ಲಿರುವದಕ್ಕೆ ಕನ್ನಡ ನಾಡಿ
ಆಗಿನ ಜೈನಮತಪ್ರಭಾವವೇ ಕಾರಣವಾಗಿರಬೇಕು. ಆದರೆ ಕೆಲ ಅಂಶ
ಇಲ್ಲಿ ಜೈನ ವೈದಿಕ ಅಂಶಗಳ ಸಮನ್ವಯ ಸಾಧಿಸಿದೆ. ಇದನ್ನು ದುರ್ಗಸಿಂಹ
ಸಾಧಿಸಿರಬೇಕು.

ಕಥೆ ನೀತಿಗಳಲ್ಲಿ ಮೂಲವನ್ನು ನಿಷ್ಠೆಯಿಂದ ಅನುಸರಿಸಬಹುದಾದ
ವರ್ಣನೆ ಕಥನಗಳಲ್ಲಿ ವಿಸ್ತರಣೆಯ ಕಲೆ ವ್ಯಕ್ತವಾಗಿದೆ. ಪ್ರೌಢ ಜ
ಕಾವ್ಯದ ರೀತಿಯಲ್ಲಿ ವರ್ಣನಾತ್ಮಕ ಗದ್ಯಪದ್ಯಗಳನ್ನು ಸ್ವಂತವಾಗಿ ರ
ದ್ದಾನೆ. ಇಂಥಲ್ಲಿ ಅವನ ಪ್ರೌಢ ಕವಿತ್ವ, ಚಿತ್ರಶಕ್ತಿಗಳು ತೋರುತ್ತ
ಸ್ವತಂತ್ರ ಸ್ಫೂರ್ತಿ ಹೆಚ್ಚಾಗಿ ಇಲ್ಲದಿದ್ದರೂ ಒಳ್ಳೆಯ ಅನುವಾದಕನ ಪ್ರ
ದುರ್ಗಸಿಂಹನಲ್ಲಿ ಕಂಡುಬರುತ್ತದೆ.

'ಪಂಚತಂತ್ರ'ದ ಕಾವ್ಯ ರೂಪವು ಗದ್ಯ ಪದ್ಯ ಮಿಶ್ರಿತವಾಗಿದ್ದ
ಗದ್ಯದ ಹೆಚ್ಚಳ, ಸರಳತೆ ಹಾಗೂ ನೀತಿಶಾಸ್ತ್ರ ಪ್ರವಚನದ ಪವಣಿಗೆಯಿ
ಚಂಪುವಿಗಿಂತ ಅದು ಬೇರೆಯೇಯೆಂಬಂತಾಗಿದೆ. ಪಶುಪಕ್ಷಿ ಸಂಬಂಧವ
ಸಾಂಕೇತಿಕ ಕಥೆಗಳಿಂದ ಇದರ ಅಂತರಂಗವು ಭಿನ್ನವಾಗಿದೆ. ಇದೇ ದು
ಸಿಂಹನ ಹೊಸತನವಾಗಿರಬೇಕು.

ಮೂಲ ಆಕರವನ್ನು ಕಥಾಂಶ, ನೀತಿ ನಿಯಮಗಳಲ್ಲಿ ಅನೂಚಾನವ
ಅನುಸರಿಸಿಯೂ ಪ್ರೌಢ-ಸರಳ ಹಾಗೂ ಗದ್ಯಪದ್ಯ ಮಿಶ್ರಿತವಾದ ಚಂ
ಸರಣಿಯನ್ನು ಪಂಚತಂತ್ರದದಲ್ಲಿ ನವೀನವಾಗಿ ಬಳಸಲಾಗಿದೆ. ಇದರಲ್ಲಿ ಪ್ರೌ
ಚಂಪು ಹಾಗೂ ಗದ್ಯ ಕಥೆಗಳ ಸಮ್ಮಿಶ್ರಣ ತಲೆದೋರಿದೆ. ನಯಸೇ
'ಧರ್ಮಾಮೃತ'ದಂಥ ಕೃತಿಗಳಿಗೆ ಇಲ್ಲಿ ನವೀನದಾರಿ ತೋರಿಸಲಾಗಿದೆ.

ಇಲ್ಲಿಯ ಭಾಷಾ ಶೈಲಿಯಲ್ಲಿಯೂ ಸ್ವರೂಪದಲ್ಲಿಯಂತೆ ಮಿಶ್ರಣವ
ಕನ್ನಡ ದೇಸಿಯತ್ತ ಒಲವು ಹೆಚ್ಚಿದ್ದರೂ ವೃತ್ತಗಳಲ್ಲಿ ಪ್ರೌಢವಾದ ಸಂಸ್ಕೃ
ಪ್ರಚುರವಾದ ಶೈಲಿ, ಕಥಾ ಭಾಗದಲ್ಲಿ ಸರಳವಾದ ಜನೋಕ್ತಿ ಪ್ರಚುರವ

ಶೈಲಿ ಕಂಡು ಬರುತ್ತದೆ. ಮಾರ್ಗ ದೇಶಿಗಳ ಈ ಮಿಶ್ರಣದಲ್ಲಿ ದುರ್ಗಸಿಂಹನ ವಿಶೇಷ ಪ್ರಯೋಗವೊಂದು ಕಂಡುಬರುತ್ತದೆ. ದುರ್ಗಸಿಂಹನ ಪಂಚತಂತ್ರವು ಜನಪ್ರಿಯ ಹಾಗೂ ನೀತಿಬೋಧಕವಾದ ಸಂಸ್ಕೃತ ಗ್ರಂಥವೊಂದನ್ನು ಸಮರ್ಪಕವಾಗಿ ಕನ್ನಡಿಸಿಕೊಟ್ಟಿದೆ.

(ಆ) ಮದನ ತಿಲಕ— ಇದರ ಕವಿ ಚಂದ್ರರಾಜ. 'ಮದನ ತಿಲಕ'ವು ಕನ್ನಡದಲ್ಲಿಯ ಮೊದಲನೆಯ ಕಾಮಶಾಸ್ತ್ರ ಸಂಕಲನ ಗ್ರಂಥ ಚಂದ್ರರಾಜನೇ ಹೇಳಿರುವಂತೆ 'ಆಗಮ ಲೌಕಿಕ ವಿರೋಧಮಂ ಕಳೆದು ಸಾರಾಂಶಮಂ ಕೊಂಡು ಪಲವು ಮತಂಗಳನೊಂದು ಮಾಡಿ' ಬರೆದುದಾಗಿದೆ 'ಮದನ ತಿಲಕ'. ಪೂರ್ವ ಕೃತಿಗಳ ಸಾರಗ್ರಹಣ–ಸಂಯೋಜನೆ ಇದರಲ್ಲಿದೆ. ರಚನೆಯ ದೃಷ್ಟಿಯಿಂದ ಚಿತ್ರಕವಿತಾ ಪ್ರಧಾನವಾದ ಚಂಪು ಇದಾಗಿದೆ. ಇದರಲ್ಲಿ ನಾನಾ ಛಂದ, ಅಯೂರು ಗದ್ಯ ಪದ್ಯ' ಇರುವದಾಗಿ ತಿಳಿಸಿದ್ದಾನೆ. ಕನ್ನಡ ಛಂದಸ್ಸಿನ ಅಭ್ಯಾಸದಲ್ಲಿ ಇಲ್ಲಿ ಬಳಸಲಾದ ತ್ರಿಪದಿ, ಷಟ್ಪದಿ ಮುಂತಾದ ರೂಪಗಳಿಗೆ ಮಹತ್ವ ಉಂಟಾಗಿದೆ.

ಚಂಪೂ ಹೆಸರಿಗೆ ಒಂದೇ ಆದರೂ ಅದರ ವೈವಿಧ್ಯತೆಯನ್ನು ಇಲ್ಲಿ ಕಾಣಬಹುದು. ಶೈಲಿಯು ಆ ಕಾಲದ ಹಳಗನ್ನಡದ್ದು. ಆದರೂ 'ಮುನಿಮತ ಮನೆ ಪೊಸಗನ್ನಡದಿಂ' ಹೇಳುವೆನೆಂದು ಹೇಳಿರುವದರಿಂದ ಚಂದ್ರರಾಜನ ಕಾಲದಲ್ಲಿ ಬಹುತರ ಭಾಷೆಯು ಸ್ವರೂಪವು ಬದಲಾಗುತ್ತಿವೆಂದು ತೋರುತ್ತದೆ. ಪ್ರತಿಮೆಯಲ್ಲಿ ಬಿಂದುಲೋಗ, ಸ್ವರಾಂತ ನಾಮಪದ, ರಳಕುಳ ಭೇದದ ಉಪೇಕ್ಷೆ ಇಲ್ಲಿ ಕಂಡು ಬರುವದೇ ಇದಕ್ಕೆ ಪ್ರಮಾಣವಾಗಿದೆ. ಆದರೂ ಇಲ್ಲಿ ಪೊಸಗನ್ನಡ ಎಂಬ ಪ್ರಯೋಗವು ವ್ಯಾಕರಣ ರೂಪಗಳಿಗಿಂತ ಶಬ್ದಕೋಶಕ್ಕೆ ಸಂಬಂಧಿಸಿರಬೇಕೆಂದು ಇಲ್ಲಿ ಕಂಡು ಬರುವ ಬಳಕೆಯ ಮಾತುಗಳಿಂದ ವ್ಯಕ್ತವಾಗುತ್ತದೆ.

(ಇ) ಜಾತಕ ತಿಲಕ— ಕ್ರಿಸ್ತಶಕ ೧೧ನೆಯ ಶತಮಾನದ ಮಧ್ಯದಲ್ಲಿದ್ದ ಶ್ರೀಧರಾಚಾರ್ಯನು ಇದರ ಗ್ರಂಥಕರ್ತನಾಗಿದ್ದಾನೆ. ಚಂದ್ರರಾಜನು ಕನ್ನಡದಲ್ಲಿ ಮೊದಲನೆಯದಾಗಿ 'ಕಾಮಶಾಸ್ತ್ರ' ಬರೆದಂತೆ ಇದು ಕನ್ನಡದಲ್ಲಿ ಬರೆಯಲ್ಪಟ್ಟ ಮೊದಲನೆಯ ಜ್ಯೋತಿಷ್ಯ ಗ್ರಂಥವಾಗಿದೆ. 'ಜಾತಕ ತಿಲಕ'ವು ಕಂದವೃತ್ತಗಳಲ್ಲಿದೆ.

'ಸಕಲಾಚಾರಮತಾಂತಸ್ಸಾರಂ, ಹೃದಯಂಗಮಂ, ಅನ್ಯಶಾಸ್ತ್ರ ಪೇಕ್ಷಂ' ಎಂದು ಇದನ್ನು ಬಣ್ಣಿಸಲಾಗಿದೆ. 'ಜಾತಕ ತಿಲಕ'ವು ಸಂಕ್ಷಿ ರೂಪವಾಗಿದ್ದು ಕೆಲವು ಸ್ವತಂತ್ರ ವಿಚಾರಗಳನ್ನೂ ಒಳಗೊಂಡಿರಬಹು ಶಾಸ್ತ್ರಗ್ರಂಥಗಳಲ್ಲಿಯ ಈ ಸಂಯೋಜಕತೆ ಹಾಗೂ ಹೃದಯಂಗಮತೆ ಗುಣಗಳಿಂದ ಕನ್ನಡ ಶಾಸ್ತ್ರಕಾರರು ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಶಾಸ್ತ್ರ ಹಾಗೂ ಕಾವ್ಯ ಇವುಗಳ ಮೇಳವಿಕೆ ಇವರ ಬರವಣಿಗೆ ಸ್ಫುಟವಾಗಿದೆ. ಶ್ರೀಧರಾಚಾರ್ಯನ ಶೈಲಿಯ ಮೇಲೆ ಆದಿ ಪಂಪನ ವರ್ಚ ಬಿದ್ದಿರಬಹುದೆಂದು ತೋರುತ್ತದೆ.

(ಈ) ದುರ್ಗಸಿಂಹ— ದುರ್ಗಸಿಂಹನ ಕಾಲ ಕ್ರಿಸ್ತಶಕ ಸುಮಾ ೧೦೩೧ ಇವನ ಗ್ರಂಥ 'ಪಂಚತಂತ್ರ' ೧೧ನೆಯ ಶತಮಾನದ ಪೂರ್ವಾ ದಲ್ಲಿ ಚಾಲುಕ್ಯರಾಜ ಜಗದೇಕಮಲ್ಲ ಜಯಸಿಂಹನಲ್ಲಿ ದಂಡನಾಯಕನೂ ಸಂ ವಿಗ್ರಹಿಯೂ ಆಗಿ ಪಂಪ ಮೊದಲಾದವರಂತೆ ಸವ್ಯಸಾಚಿಯಾದ ಕವಿ ಇವ

ಇದಲ್ಲದೆ 'ಪರಮಾತ್ಮಂ, ಪರಮೇಶ್ವರಂ, ಮಾರಹರಂ ದೈವಂ, ಮ ಯೋಗಿಗಳ್ ಗುರುಗಳ್ ಶಂಕರ ಭಟ್ಟರ್' ಎಂದು ಹೇಳಿದಂತೆ ಸ್ಮಾ ಭಾಗವತ ಸಾಂಪ್ರದಾಯದ ಪಂಡಿತ ಕುಲದಲ್ಲಿ ಹುಟ್ಟಿ ಬೆಳೆದವನ ತನ್ನೂರಾದ ಸಯ್ಯಡಿಯಲ್ಲಿ ಹರಿಹರ ಭವನಗಳನ್ನು ಕಟ್ಟಿಸಿದನು.

ಪೈಶಾಚಿಕ ಭಾಷೆಯಲ್ಲಿ ಗುಣಾಢ್ಯನು ಬರೆದ 'ಬೃಹತ್ಕಥೆ' ಎ ಮಹಾ ಸಾಗರದಲ್ಲಿಯ ಪಂಚರತ್ನಗಳನ್ನಾಯ್ದುಕೊಂಡು ವಸುಭಾಗಭಟ್ಟ 'ಪಂಚತಂತ್ರ'ವೆಂದು ಹೆಸರಿಟ್ಟು ಹೇಳಿದನು. ಇದನ್ನೇ ಕನ್ನಡದಲ್ಲಿ 'ಪ ತಾಗಿರೆ ವಿವರಿಸುವೆಂ' ಎಂದು ದುರ್ಗಸಿಂಹನು ಹೇಳಿದ್ದಾನೆ. ಸಂಸ್ಕೃತ ವಿಷ್ಣುಶರ್ಮನ 'ಪಂಚತಂತ್ರ'ವೊಂದಿದೆ.

ವಿಷ್ಣುಶರ್ಮನಲ್ಲಿ ಕಾಣದ ಕೆಲವು ಕತೆಗಳು ದುರ್ಗಸಿಂಹನಲ್ಲಿವೆ. ಇ ಗಳನ್ನು ವಸುಭಾಗಭಟ್ಟನಿಂದ ಆಯ್ದುಕೊಂಡಿರಬೇಕು. ಅಲ್ಲಿ ಇಲ್ಲದ ಜೈ ತತ್ವಗಳೂ ಪಾರಿಭಾಷಿಕ ಪದಗಳೂ ದುರ್ಗಸಿಂಹನಲ್ಲಿವೆ. ಕಥಾಸ್ವರೂಪ ಅಲ್ಲಲ್ಲಿ ಮಾರ್ಪಟ್ಟಿದೆ. ವಸುಭಾಗಭಟ್ಟನ ಪಂಚತಂತ್ರವು ಜೈನ ಧರ್ಮ ವಾಗಿರಬೇಕು. ಆಗಿನ ಕಾಲದ ಜೈನ ಪ್ರಭಾವದ ಕಾರಣದ ಮೂಲಕ ಪಿಂ

ಕನಿಗೆ ಸಂಜೀವಕನು ಮಾಡಿದ ಉಪದೇಶವು ಜೈನಪರ ಬೋಧೆಗೆ ಎಡೆಗೊಟ್ಟದೆ. ದುರ್ಗಸಿಂಹನೇ ಇದನ್ನು ಸಾಧಿಸಿರಬೇಕು.

ಆದರೂ ಬ್ರಾಹ್ಮಣರ ಪ್ರಾಣಿವಧೆ ವಿಹಿತ ಕರ್ಮವೆಂದು ಸಮರ್ಥಿಸ ಲಾಗಿದೆ. ವಸುಭಾಗಭಟ್ಟನಲ್ಲಿದ್ದ ಸರ್ವಧರ್ಮ ಸಮನ್ವಯ ದೃಷ್ಟಿಗೆ ಮನ ಸೋತ ದುರ್ಗಸಿಂಹನು ತಾನು ಭಾಗವತ ಧರ್ಮಿಯಾದರೂ ತನ್ನ ಗ್ರಂಥದಲ್ಲಿ ಅದನ್ನು ಅಳವಡಿಸಿಕೊಂಡಿದ್ದಾನೆ.

ಕಥೆ ನೀತಿಗಳಲ್ಲಿ ದುರ್ಗಸಿಂಹನು ಮೂಲವನ್ನು ನಿಷ್ಠೆಯಿಂದ ಅನುಸರಿಸಿ ದ್ದಾನೆ. ಕೆಲವೆಡೆಗಳಲ್ಲಿ ವಿಸ್ತರಣೆಯ ಕಲೆಯನ್ನು ತೋರಿದ್ದಾನೆ. ಪ್ರೌಢ ಚಂಪೂಕಾವ್ಯದ ರೀತಿಯಲ್ಲಿ ವರ್ಣನಾತ್ಮಕ ಗದ್ಯ ಪದ್ಯಗಳನ್ನು ಸ್ವಂತವಾಗಿ ರಚಿಸಿದ್ದಾನೆ. ಇಂಥಲ್ಲಿ ಅವನ ಪ್ರೌಢ ಕವಿತ್ವ, ಚಿತ್ರಶಕ್ತಿಗಳು ತೋರುತ್ತವೆ. ಒಳ್ಳೆಯ ಅನುವಾದಕನ ವ್ಯುತ್ಪತ್ತಿ ಪ್ರತಿಭೆಗಳು ದುರ್ಗಸಿಂಹನಲ್ಲಿವೆ. ಆದರೂ ನಾಗವರ್ಮನ ಶಕ್ತಿ ವಿಶೇಷವಾಗಲಿ ಮೇಲಾದ ಕವಿಯ ಸ್ವತಂತ್ರ ಸ್ಫೂರ್ತಿ ಯಾಗಲೀ ಅವನಲ್ಲಿ ಇಲ್ಲವೆನ್ನಬೇಕು.

ದುರ್ಗಸಿಂಹನ ಪಂಚತಂತ್ರದಲ್ಲಿ ಪಶುಪಕ್ಷಿ ಸಂಬಂಧವಾದ ಸಾಂಕೇತಿಕ ಕಥೆಗಳಿಂದ ಆದರ ಅಂತರಂಗ ಮೂಲದಿಂದ ಭಿನ್ನವಾಗಿದೆ. ಮೂಲವನ್ನು ಕಥಾಂಶ ಹಾಗೂ ನಿಯತಿ ನಿಯಮಗಳಲ್ಲಿ ಅನುಸರಿಸಿಯೂ ಪ್ರೌಢ ಸರಳ ಹಾಗೂ ಗದ್ಯ ಪದ್ಯ ಮಿಶ್ರಿತವಾದ 'ಚಂಪೂ ಸರಣಿಯನ್ನು ದುರ್ಗಸಿಂಹನು ನವೀನವಾಗಿ ಬಳಸಿದ್ದಾನೆ.

ಒಟ್ಟನಲ್ಲಿ ದುರ್ಗಸಿಂಹನು ಪಂಚತಂತ್ರದ ಮೂಲಕ ಜನಪ್ರಿಯ ಹಾಗೂ ನೀತಿ ಬೋಧಕವಾದ ಸಂಸ್ಕೃತ ಗ್ರಂಥವೊಂದನ್ನು ಸಮರ್ಪಕವಾಗಿ ಕನ್ನಡಿಸಿ ಕೊಟ್ಟಿದ್ದಾನೆ. ಕನ್ನಡ ಅನುವಾದಕರಲ್ಲಿ ದುರ್ಗಸಿಂಹನು ಉಚ್ಚಶ್ರೇ ಣಿಯು ಅಲ್ಲದಿದ್ದರೂ ಮಧ್ಯಮತರಗತಿಯ ಮನ್ನಣೆಯ ಸ್ಥಾನಕ್ಕೆ ಅರ್ಹನಿರುವನು

ಪ್ರಶ್ನೆ ೯— ೧೨ನೆಯ ಶತಮಾನದ ಸಾಹಿತ್ಯದ ರೂಪರೇಷೆಗಳನ್ನು ವಿವರಿಸಿರಿ, (ಅಥವಾ '೧೨ನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯ ಕಹಳೆಯನ್ನು ಊದಿತು' ಚರ್ಚಿಸಿರಿ. (ಅಥವಾ) 'ಭಾಷೆ, ವಸ್ತು, ಶೈಲಿಗಳ ದೃಷ್ಟಿಯಿಂದ ೧೨ನೆಯ ಶತಮಾನವು ಕನ್ನಡ ಸಾಹಿತ್ಯದ ಇತಿಹಾಸ ದಲ್ಲಿ ಒಂದು ಮೈಲುಗಲ್ಲಾಗಿದೆ'. ವಿವರಿಸಿರಿ.

ಉತ್ತರ— ಹತ್ತನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ಸುವರ್ಣ ಯುಗವೆಂದು ಕರೆಯಲ್ಪಟ್ಟರೆ ಹನ್ನೆರಡನೆಯ ಶತಮಾನವು ಕನ್ನಡದ ಕೆಚ್ಚನ್ನ ಬೆಳಗಿಸಿದ, ಕನ್ನಡದ ಸತ್ವವನ್ನು ಅರಳಿಸಿದ, ಅದರ ಹೊಳಹನ್ನು, ಬೆಳಕನ್ನು ಕಾಂತಿಯನ್ನು ಹೊರಹೊಮ್ಮಿಸಿದ ರನ್ನದಾರತಿ ಎತ್ತಿದ ಕಾಲವಾಗಿದೆ. ಕನ್ನ ನಾಡಿನಲ್ಲಿ ಹೊಸ ಜೀವ ಮೂಡಿದ, ಹೊಸಹುಮ್ಮಸ ಹುಟ್ಟಿದ, ಹೊ ಚೈತನ್ಯ ಮೂಡಿ ಜನಜೀವನದಲ್ಲಿ ವಿಚಾರ ಕ್ರಾಂತಿ. ಅದರ ಮೂಲಕ ಜ ಜೀವನ ಹಾಗೂ ಅದರ ಪ್ರತಿಬಿಂಬವಾದ ಸಾಹಿತ್ಯದಲ್ಲಿ ಕ್ರಾಂತಿಯ ಕಹ ಯನ್ನು ಊದಿದ ಸಮಯ ಇದು. ಈ ಕ್ರಾಂತಿ ಕಲ್ಯಾಣದಿಂದ ಪ್ರಾರಂಭವಾ ಕನ್ನಡ ನಾಡು ನುಡಿಗಳಲ್ಲಿ ಹಾಸುಹೊಕ್ಕಾಗಿ ಹೋಗಿದೆ. ಇದೊಂ ಸಂಕ್ರಮಣ ಯುಗ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ.

ಮಾರ್ಗ ಕಾವ್ಯದ ಪ್ರಭಾವ ಕಡಿಮೆಯಾಗಿ ಇಲ್ಲಿ ದೇಸಿಯ ವಿಶಿಷ್ಟವಾ ಸ್ವಾತಂತ್ರ್ಯವು ವಿಷಯ, ಭಾಷೆ ಛಂದಸ್ಸುಗಳಲ್ಲಿ ಮೂಡಿದೆ. ವಚ ಸಾಹಿತ್ಯವು ವೈವಿಧ್ಯ ಪೂರ್ಣವಾಗಿ ರೂಪು ತಾಳಿ ಬೆಳೆಯಿತು, ಬೆಳಗಿತು ವಚನ ಸಾಹಿತ್ಯವು ವಿಪುಲವಾಗಿದೆ, ವೈವಿಧ್ಯಪೂರ್ಣವಾಗಿದೆ, ಶಕ್ತಿಯು ವಾಗಿದೆ. ವಚನ ಸ್ವರೂಪವು ಭಾವಗೀತ ಲಕ್ಷಣದಿಂದ ಕೂಡಿದ ಅನುಭಾ ಗದ್ಯವೇ ಆಗಿದೆ. ಅನುಭವದ ಆಳ, ಆತ್ಮ ನಿರೀಕ್ಷಣೆ, ನೀತಿ, ಮತ, ತತ್ವಗಳ ಸಾಹಿತ್ಯ ಗುಣದಿಂದ ಇಲ್ಲಿ ಘನತೆವೆತ್ತಿವೆ.

ಅಚ್ಚಗನ್ನಡದ ಛಂದೋರೂಪಗಳಾದ ರಗಳೆ, ತ್ರಿಪದಿ ಷಟ್ಪದಿಗಳ ಗ್ರಂಥ ರಚನೆಗೆ ಆರಂಭವಾಯಿತು. ವಚನಕಾರರು ತ್ರಿಪದಿಗೆ, ಹರಿಹರ ರಾ ವಾಂಕರು ರಗಳೆ ಹಾಗೂ ಷಟ್ಪದಿಗಳಿಗೆ ಅನುಕ್ರಮವಾಗಿ ಮೊದಲಿಗರಾದರು ರಗಳೆಗಿಂದ ಷಟ್ಪದಿಯು ಅಧಿಕ ಪ್ರಚಾರದಲ್ಲಿ ಬಂದಿತು. ಸಾಹಿತ್ಯದ ಯೋಗ್ಯ ಗಿಂತ 'ಮತೀಯತ್ವಕ್ಕೆ ಬೆಲೆಯಿರುವ ಲಘುರಚನೆಗಳು ಪ್ರಾರಂಭವಾದವು. 'ಗಿರಿಜಾ ಕಲ್ಯಾಣ', 'ಲೀಲಾವತಿ', 'ಜಗನ್ನಾಥ ವಿಜಯ' ದಂಥ ಪ್ರೌ ಚಂಪೂ. ಕಾವ್ಯಗಳೂ ಶೈಲಿಯಲ್ಲಿ ಬರೆಯಲ್ಪಟ್ಟವು.

ಕಾವ್ಯ ವಸ್ತುವಿನಲ್ಲಿ ವ್ಯತ್ಯಾಸವು ಸಂಪೂರ್ಣವಾಗಿ ಕಂಡುಬರುತ್ತದೆ ವೀರಶೈವ ಕವಿಗಳೆಲ್ಲ ಶಿವನ ೬೪ ಲೀಲೆಗಳು, ಶಿವಶರಣ-ಶರಣೆಯರ ಚರಿ

ಗಳನ್ನೇ ಕಟ್ಟುನಿಟ್ಟಾಗಿ ಗ್ರಂಥ ವಿಷಯಗಳನ್ನಾಗಿ ಆಯ್ದುಕೊಂಡರು. ಈ ಮಾರ್ಗ ಬಿಟ್ಟು 'ಹರಿಶ್ಚಂದ್ರ ಕಾವ್ಯ' ಬರೆದ ಕವಿ ರಾಘವಾಂಕನು ಹಲ್ಲು ಗಳನ್ನೂ ಮುರಿಸಿಕೊಳ್ಳಬೇಕಾಯಿತು. ಮುಂದಿನ ಕೆಲ ಶತಮಾನಗಳಲ್ಲಿ ಬ್ರಾಹ್ಮಣ ಕವಿಗಳೂ ಇದನ್ನು ಅನುಸರಿಸಿದರು. ಕಾವ್ಯ ರೂಪಗಳಲ್ಲಿ ಸಹ ಮತ ನಿರ್ಬಂಧನೆ ಇದೆಯೇ ಎನ್ನುವ ಮಟ್ಟಿಗೆ ಮಾತು ಕೇಳ ಬಂದಿತು.

ಭಾಷಾ ಶೈಲಿಯಲ್ಲಿ ಸಂಕ್ರಮಣಾವಸ್ಥೆಯು ಇಲ್ಲಿ ಸ್ಪಷ್ಟವಾಗಿ ವ್ಯಕ್ತ ವಾಗುತ್ತದೆ. ಹಳಗನ್ನಡದಿಂದ ಹೊಸಗನ್ನಡಕ್ಕೆ ಪರಿವರ್ತನೆ ಹೊಂದುತ್ತಿರುವ ಕಾಲದ ಪ್ರಾಯೋಗಿಕ ಶೈಲಿಯ ಸಂಕೀರ್ಣತೆ-ವೈವಿಧ್ಯಗಳು ಈ ಯುಗದ ನಡುಗನ್ನಡದಲ್ಲಿ ವ್ಯಕ್ತವಾಗಿದೆ. ವಚನ, ರಗಳೆ, ಷಟ್ಪದಿಗಳಲ್ಲಿ ನಡುಗನ್ನಡ ತರತರವನ್ನು ಕಾಣಬಹುದು. ಚಂಪೂ ಕಾವ್ಯಗಳಲ್ಲಿ ಪಂಪಯುಗದ ಪ್ರೌಢ ಶೈಲಿಯೇ ಮುಂದುವರೆದಿದೆಯಾದರೂ ಹಲವರಲ್ಲಿ ಲಾಲಿತ್ಯ-ಪ್ರಸನ್ನತೆಗಳು ಹೆಚ್ಚಿವೆ, ವ್ಯಾಕರಣ ರೂಪಗಳ ಬಿಗುವು ಸಡಿಲುತ್ತ ಸಾಗಿದೆ.

ಕನ್ನಡ ವರ್ಣಮಾಲೆಯಲ್ಲಿದ್ದ ಱಳಾಕ್ಷರವು ಉಚ್ಚಾರದಲ್ಲಿಯೂ ಬರವಣಿಗೆ ಯಲ್ಲಿಯೂ ಲೋಪಹೊಂದಿರಬೇಕೆಂಬ ಸೂಚನೆ ಇಲ್ಲಿ ಇದೆ. ಱಳಕುಳ ಕ್ಷಳ ಗಳಲ್ಲಿಯ ಭೇದವನ್ನು, ವಿಶೇಷವಾಗಿ ಪ್ರಾಸಭೇದವನ್ನು, ತಾನು ಪಾಲಿಸುವ ದಿಲ್ಲವೆಂದು ಹರಿಹರನು ಹೇಳದನು. ಈ ವಿಷಯಗಳಲ್ಲಿ ಅವನು ಅನೇಕರಿಗೆ ಮಾರ್ಗದರ್ಶಿಯಾದನು.

ರಸದೃಷ್ಟಿಯಿಂದ ಈ ಶತಮಾನದಲ್ಲಿ ಭಕ್ತಿರಸವು ಓತಪ್ರೋತವಾಗಿ ಹರಿಯಿತು. ವೀರ, ಶಾಂತ, ಅದ್ಭುತಗಳು ಜೊತೆಗೆ ಅವಿಷ್ಕಾರ ಹೊಂದಿದವು. ಶೃಂಗಾರವೊಂದನ್ನೇ ಪ್ರತಿಪಾದಿಸಿದ 'ಲೀಲಾವತಿ' ಉದಯವಾಯಿತು. ಲೌಕಿಕ ಹಾಗೂ ಶಾಸ್ತ್ರೀಯ ಗ್ರಂಥವನ್ನು ವೀರಶೈವ ಕವಿಗಳು ಸಾಮಾನ್ಯ ವಾಗಿ ಬರೆಯಲಿಲ್ಲ. ಅವರು ಅಧಿಕವಾಗಿ ತಾತ್ವಿಕ ಹಾಗೂ ಅನುಭಾವಿಕ ಕೃತಿ ಗಳನ್ನು ರಚಿಸಿದರು. ವೇದಾಗಮಗಳ ಸಾರವನ್ನೇ ವಚನಗಳ ಮುಖಾಂತರ ಜನಸಾಮಾನ್ಯರಿಗೂ ತಿಳಿಯುವಂತೆ ಬರೆದರು. ಪಂಡಿತ ಕವಿಗಳ ಜೊತೆಗೆ ಅನುಭಾವಿಗಳ ಹೊಸ ಪರಂಪರೆ ಉದಯವಾಯಿತು.

ಅನೇಕ ದೃಷ್ಟಿಯಿಂದ ಇಲ್ಲಿ ವೈವಿಧ್ಯವಿತೆ, ವೈಶಿಷ್ಟ್ಯತೆಯಿದೆ. ಈ ವರೆಗೆ ಪರಂಪರಾಗತವಾಗಿ ನಡೆದು ಬಂದ ಜೀವನ ಹಾಗೂ ಸಾಹಿತ್ಯಗಳಲ್ಲಿ ಆಮೂ

ಲಾಗ್ರ ಮಾರ್ಪಾಡುಗಳು ಅನಿವಾರ್ಯವಾದುವು. ಧಾರ್ಮಿಕ ಹಾಗೂ ಸಾಮಾಜಿಕ ಜೀವನದಲ್ಲಿ ವ್ಯತ್ಯಾಸಗಳಾಗಿ ಸಾಹಿತ್ಯದ ಮೇಲೆ ಅಳವಾ[illegible] ವರ್ಚಸ್ಸನ್ನು ಬೀರಿದವು. ಹೊಸ ಬಗೆಯ ಆಧ್ಯಾತ್ಮಿಕ ತೇಜಸ್ಸು, ಧಾರ್ಮಿಕ ಶ್ರದ್ಧೆ, ಪ್ರಯೋಗ ಬುದ್ಧಿಗಳು ಕಂಡುಬಂದವು. ಪಂಡಿತ ಕವಿಗಳ ಜೊತೆ ಅನೇಕ ಆಧ್ಯಾತ್ಮಿಗಳೂ, ಅನುಭಾವಿಗಳೂ, ಸಾಹಿತ್ಯ ನಿರ್ಮಾತೃಗಳಾದರು. ಭಕ್ತಿ ಭಾಂಡಾರಿ ಬಸವಣ್ಣನು ಇವರಿಗೆಲ್ಲ ಮುಂದಾಳು.

ಒಟ್ಟಿನಲ್ಲಿ ೧೨ನೆಯ ಶತಮಾನವು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಚಿರಸ್ಮರಣೀಯವಾದ ಸಂಕ್ರಾಂತಿಯ ಕಾಲವಾಗಿದೆ. ವಿಷಯ, ಭಾಷೆ, ಶೈಲಿ, ವ್ಯಾಕರಣ ಹೀಗೆ ಮೊದಲಾದ ವಿಷಯಗಳಲ್ಲಿ ಕನ್ನಡ ಸಾಹಿತ್ಯ ಹೊಸಮಾರ್ಗವನ್ನು ತುಳಿದಿದೆ. ಜನ ಸಾಮಾನ್ಯರಿಗೂ ಧರ್ಮತತ್ವಗಳು ತಿಳಿಯುವಂತೆ ಅನುಭವದ ಪಡಿಯಚ್ಚಿನಲ್ಲಿ ಮನಂಬುಗುವಂತೆ, ಹೃದಯಂಗಮವಾದ ಭಾವಗೀತದ ಮಟ್ಟದಲ್ಲಿ ವಚನ, ಗದ್ಯ, ಷಟ್ಪದಿ, ರಗಳೆ, ತ್ರಿಪದಿಗಳಲ್ಲಿ ಬರೆದು ಕನ್ನಡ ಬಾವುಟವನ್ನು ಬಸವಣ್ಣನವರ ಮುಂದಾಳುತನದಲ್ಲಿ ಮೆರೆಸಲಾಗಿದೆ.

ಪ್ರಶ್ನೆ ೧೦. ಟಿಪ್ಪಣೆ ಬರೆಯಿರಿ— (ಅ) ನಾಗಚಂದ್ರ (ಆ) ಕಂತಿ (ಇ) ನಯಸೇನ (ಈ) ಬ್ರಹ್ಮಶಿವ (ಉ) ೨ನೆಯ ನಾಗವರ್ಮ,

ಉತ್ತರ— (ಅ) ನಾಗಚಂದ್ರ— ನಾಗಚಂದ್ರನಿಗೆ 'ಅಭಿನವ ಪಂಪ' ಎಂಬ ಬಿರುದು ಇದ್ದಿತು. ಇವನು ೧೨ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದ ಪ್ರತಿಭಾವಂತ ಜೈನ ಕವಿಯು. ಜೈನ ಮತದಲ್ಲಿ ಅತ್ಯಂತ ನಿಷ್ಠೆಯುಳ್ಳ ಜಿನಭಕ್ತನೂ ಗುರುಭಕ್ತನೂ ಆಗಿದ್ದನು. ಚಾಲುಕ್ಯ ರಾಜರಿಂದಲೂ ಹೊಯ್ಸಳ ರಾಜರಿಂದಲೂ ಸನ್ಮಾನ ಪಡೆದಿರಬೇಕೆಂದು ತಿಳಿಯುತ್ತದೆ. 'ವಿಜಯಪುರಕ್ಕೆ ಲಂಕರಣಮಾಗಿರೆ ಮಲ್ಲಿ ಜಿನೇಂದ್ರಗೃಹ'ವನ್ನು ಕಟ್ಟಿಸಿದೆನೆಂದು ಹೇಳಿಕೊಳ್ಳುವದರಿಂದ ಅವನು ಬಿಜಾಪುರದವನಾಗಿರಬೇಕು. 'ಕಂತಿ ಹಂಪರ ಸಮಸ್ಯೆಗಳು' ಇವನು ದೋರ ಸಮುದ್ರದ ಬಲ್ಲಾಳನ ಆಸ್ಥಾನ ಕವಿ (?) ಯಾಗಿರಬೇಕೆಂಬ ಊಹೆಗೆ ಆಸ್ಪದವೀಯುತ್ತದೆ.

ಇವನು ಬರೆದ ಗ್ರಂಥಗಳೆಂದರೆ 'ಮಲ್ಲಿನಾಥನ ಪುರಾಣ' ಹಾಗೂ 'ರಾಮಚಂದ್ರ ಚರಿತ ಪುರಾಣ' ಇಲ್ಲವೇ 'ಪಂಪ ರಾಮಾಯಣ' ಎರಡೂ ಧಾರ್ಮಿಕ

ಕಾವ್ಯಗಳೇ ದೇವಚಂದ್ರನ ಹೇಳಿಕೆಯಂತೆ 'ಜಿನಮುನಿತಯ' ಹಾಗೂ 'ಜಿನಾಕ್ಷರ ಮಾಲೆ'ಗಳೂ ಇವನ ಕೃತಿಗಳಾಗಿರಬೇಕು. ಆದರೆ ಇವು ಈ ವರೆಗೂ ಉಪಲಬ್ಧವಾಗಿಲ್ಲ.

'ಮಲ್ಲಿನಾಥ ಪುರಾಣ'ವು ೧೯ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತ್ರೆಯಿಂದೊಡಗೂಡಿದದು. ನಾಗಚಂದ್ರನೇ ಹೇಳುವಂತೆ ಕಥೆ ಚಿಕ್ಕದಾಗಿದ್ದು ನಿರೂಪಣೆಯಲ್ಲಿ ೧೪ ಆಶ್ವಾಸಗಳಲ್ಲಿ ವಿಸ್ತಾರಗೊಂಡಿದೆ. ಕಥೆಯಿಲ್ಲದ ತೆಳ್ಳನೆಯ ಚರಿತ್ರೆಯನ್ನು ವರ್ಣನೆಗಳಿಂದ ವಿಸ್ತರಿಸಿ ಭೋಗ ತ್ಯಾಗಗಳ ದ್ವಿವಿಧ ಚಿತ್ರಗಳಲ್ಲಿ ಘನವಾದ ಯಶಸ್ಸನ್ನು ಪಡೆದಿದ್ದಾನೆ. ಇದು ಮಹಾಕಾವ್ಯದ ಸತ್ವವುಳ್ಳ ಸತ್ಕಾವ್ಯವಾಗಿದೆ.

'ರಾಮಚಂದ್ರ ಚರಿತ ಪುರಾಣ'ವು ಜೈನ ರಾಮಾಯಣ, ಇಲ್ಲಿ ಕವಿ ಜ್ಯೇಷ್ಠರನ್ನು ವಂದಿಸಲಾಗಿದೆ ಇದು ಉದಾತ್ತ ಕಥೆ, ನಾಯಕನೂ ಉದಾತ್ತ ರಾಘವ. ಇಲ್ಲಿ ಜೈನ ಧರ್ಮ ಬೋಧನೆಗೆ ಗಮನ ಕೊಡಲಾಗಿದೆ. ಇದಕ್ಕೂ ವೈದಿಕ ರಾಮಾಯಣಕ್ಕೂ ಮಹದಂತರವಿದೆ. ವಿಮಲಸೂರಿ ಹಾಗೂ ಗುಣಭದ್ರರ ಪ್ರಾಕೃತ ರಾಮಾಯಣಗಳು ಹಾಗೂ ರವಿಷೇಣರ ಸಂಸ್ಕೃತ ರಾಮಾಯಣಗಳು ಆಕರವಾಗಿವೆ. ಹೆಚ್ಚಾಗಿ ವಿಮಲಸೂರಿಯ 'ಪವುಮಚರಿಯ'ವನ್ನೇ ಅನುಸರಿಸಲಾಗಿದೆಯಲ್ಲದೆ ಅದರ ಸಾರಸಂಗ್ರಹವಾದರೂ ಉಪಾಖ್ಯಾನಗಳ ಸ್ಥಾನಪಲ್ಲಟವಾಗಿದೆ. ಜೈನ ರಾಮಾಯಣದ ಸಾಂಪ್ರದಾಯ ಇಲ್ಲಿ ಪೂರ್ಣವಾಗಿ ಫಲಿಸಿದೆ.

ನಾಗಚಂದ್ರನು ಮೂಲನಿಷ್ಠೆಯುಳ್ಳ ಸಂಗ್ರಹಕಾರ, ಆದರೆ ಸ್ವಂತ ಪ್ರತಿಭೆಯ ಪರುಷದಿಂದ ಹಾಗೂ ಶೈಲಿಯ ವಿಶಿಷ್ಟ ಪಾಕದಿಂದ ಮೂಲಕ್ಕೂ ಮೆರಗು ಕೊಟ್ಟಿರುವ ಸಮರ್ಥ ಕಲಾವಿದ 'ಪದ ರಚನೆ ಸಜ್ಜನಶ್ರವಣ | ದೊಳಂಚೆಯುಂ ತೀವಿದ ಪೋಲ್ || ಮೃದುವೆನೆ ಪೊಸಬಗೆ ರಸಭಾ | ವದೊಳೋಕುಳಿಯಾಡೆ ಪೇಳ್ದನಭಿನವಪಂಪಂ ||೦||' ಎಂಬುದು ಅವನ ಸಾರ್ಥಕ ಶ್ಲಾಘನೆ. ಇಲ್ಲಿ ಶ್ರೀ ಅವರು ಹೇಳಿದ ಮಾಧುರ್ಯ ಲಾಲಿತ್ಯ, ಸೌಕುಮಾರ್ಯಗಳು ಕಾಣಬೇಕಾದರೆ ನಾಗಚಂದ್ರನ ಕಾವ್ಯಾರಾಮದಲ್ಲಿ ಒಂದು ಸಲ ನಡೆದು ನೋಡಬೇಕು.

ನಾಗಚಂದ್ರನು ಅರ್ಥಾಂತರನ್ಯಾಸ ಅಲಂಕಾರದ ಚಕ್ರವರ್ತಿ. ಇವನಲ್ಲಿ

ಮಂಜುಳ ತರವಾದ ಪದಗಳಲ್ಲದೆ ರನ್ನನಂತೆ ಕಿಡಿನುಡಿಗಳು ಬಾರವು, ಶೋ
'ವಿಪಂತಿಯಿಂಚರ'ವನ್ನು ಕಾವ್ಯಗಳಲ್ಲೆಲ್ಲ ಕಾಣಬಹುದು. ಅಂತಃಕ
ಪೂರ್ಣವಾದ ಮಾನವ ಹೃದಯ ಅವನ ಕೃತಿಗಳಲ್ಲಿ ಮಿಡಿಯುತ್ತವೆ. ದು
ರಾವಣನ ಚಿತ್ರ ಕನ್ನಡ ಸಾಹಿತ್ಯಕ್ಕೆ ಅವನ ಅನುಪಮ ಕಾಣಿಕೆ. ಎ
ಪ್ರಸಂಗದಲ್ಲಿಯಾದರೂ ನಾಗಚಂದ್ರನ ಹೃದಯದಲ್ಲಿ ಧರ್ಮ ಮುಂದು
ಜವಳಿಯಾಗಿ, ಕಾವ್ಯ ಅದರ ಹಿಂದು.

(ಅ) ಕಂತಿ— ಕಂತಿ ನಾಗಚಂದ್ರನ ಸಮಕಾಲೀನಳೆಂಬುದು 'ಕ
ಹಂಪರ ಸಮಸ್ಯೆ'ಗಳಿಂದ ವಿದಿತವಾಗುತ್ತದೆ. ಇವಳು ಮತದಿಂದ ಜೈನ
ದೋರ ಸಮುದ್ರ ಬಲ್ಲಾಳ ರಾಯನ ಆಸ್ಥಾನದಲ್ಲಿ ಇದ್ದಂತೆ ತಿಳಿದುಬರುತ್ತ
ಅವಳ ಬಗ್ಗೆ ಕೆಲ ದಂತಕಥೆಗಳೂ ಹೆಣೆದುಕೊಂಡು ಬಂದಿವೆ. ಈ ಬ
ದೋಷರಹಿತವಾದ ಆಧಾರಗಳು ಮಾತ್ರ ಇನ್ನೂ ದೊರೆಯಬೇಕು. ಇ
ಹೆಸರಿನಿಂದ ಯಾವ ಗ್ರಂಥವೂ ಇಲ್ಲ.

೧೬ನೆಯ ಶತಮಾನದ ಬಾಹುಬಲಿಯು 'ನಾಗಕುಮಾರ ಚರಿತೆ' ಯ
'ಅಭಿನವ ವಾಗ್ದೇವಿ'ಯಾದ ಕಂತಿಕೆಯನ್ನು ನೆನೆದಿದ್ದಾನೆ. ದೇವಚಂದ್ರ
ತನ್ನ 'ರಾಜಾವಳಿ ಕಥೆ'ಯಲ್ಲಿ (೧೮೩೮) ಇವಳ ಚರಿತ್ರೆಯನ್ನು 'ದೋ
ರಾಯನಾಸ್ಥಾನದ ಕನ್ನಡ ಸಂಸ್ಕೃತ ಮಹಾಕವಿಗಧಿಕಪಂ ಪಂಪಕವಿಯ
ಕಳುಪಲ್ ಆತಂ ಒಂದು ವಿದ್ಯೆಯಿಂ ಸಾವಿರ ಪ್ರಶ್ನೆಯಂ ಕೇಳಲ್ ಉತ್ತರಮ
ಕುಡಲ್ ಆಕೆಯಂ (ಕಂತಿಗೆ) ರಾಜ ಸಭೆಗೈದಿಸೆ ವಿದ್ವತ್ಸಮೂಹದೊಳ್ ಅಧಿ
ಕವೀಶ್ವರಿಯಾದಳ್' ಎಂದು ಮುಂತಾಗಿ ಹೇಳಿದ್ದಾನೆ.

ಕಂತಿಯವೆಂದು ಹೇಳುವ ಸಮಸ್ಯಾಪೂರ್ತಿ ಪದ್ಯಗಳಲ್ಲಿ ಚಮತ್ಕೃತಿಯಿದೆ
ಪದ್ಯ ರಚನೆಯ ಸೌಲಭ್ಯವಿದೆ, ಸತ್ವವಿದೆ. ನಾಗಚಂದ್ರನು ಅವಳಿಂ
ಹೊಗಳಿಸಿಕೊಳ್ಳುವ ಪೈಜೆಯಿಂದ ಸತ್ತಂತೆ ನಟಿಸಿದಾಗ ಅವನ ಮರಣದಿಂ
ಶೋಕವಿಹ್ವಲೆಯಾದ ಕಂತಿಯಿಂದ ಹೊರಹೊಮ್ಮಿದ ಶೋಕ ರಸಪ್ರಧಾನವಾ
ಪದ್ಯಗಳೇ ಅವಳು ಶ್ರೇಷ್ಠ ಮಟ್ಟದ ಕವಯಿತ್ರಿ ಎಂಬುದಕ್ಕೆ ನಿದರ್ಶನವಾ
ನಿಲ್ಲಬಲ್ಲವು.

(ಇ) ನಯಸೇನ—ಇವನ ಕಾಲ ೧೧ನೆಯ ಶತಮಾನದ ಪೂರ್ವಾರ್ಧ. ವ್ಯಕ್ತಿ ವಿಶೇಷವುಳ್ಳ ಜೈನ ಕವಿಯೀತನು. ನರೇಂದ್ರಸೇನ ಮುನಿಗಳು ಇವನ ಗುರುಗಳು. ಇವನ ಊರು ಮುಳಗುಂದ. 'ರಾಜಪೂಜ್ಯಂ' ಎಂಬುದರಿಂದ ಇವನಿಗೆ ರಾಜಮರ್ಯಾದೆ ದೊರೆತಿರಬೇಕು. ಧರ್ಮ ಚಿಂತನೆ, ಮತ ಪ್ರಸಾರಕ್ಕಾಗಿ ಆಯುಷ್ಯವನ್ನು ಮೀಸಲಾಗಿರಿಸಿರುವ ಪಂಡಿತ ಮುನಿ ಇವನು. ಇವನು ಬರೆದ ಗ್ರಂಥ 'ಧರ್ಮಾಮೃತವು. ಇವನು ಜನಪ್ರಿಯನೂ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡು ಹೋಗಿ ಅಪಾರವಾದ ಅನುಭವವನ್ನು ಪಡೆದವನೂ ಆಗಿರಬೇಕು.

ಜೈನಮತ ತತ್ವಗಳನ್ನು ಹೇಳುವಲ್ಲಿ ಸುಲಭತೆಯ ದೃಷ್ಟಿಯನ್ನು ಅನುಸರಿಸುವದು ಅಗತ್ಯವಾದ ಆಗಿನ ಕಾಲದಲ್ಲಿ ಜನತೆಗಾಗಿ ಮೊದಲ ಜೈನ ಪುರಾಣವನ್ನು ಬರೆದ ಕೀರ್ತಿ ನಯಸೇನನಿಗೆ ಸಲ್ಲುತ್ತದೆ. ಜಿನ ಮತದಲ್ಲಿ ಎಷ್ಟು ಸಾರವೊ ಅದೆಲ್ಲವೂ ಇಲ್ಲಿ ಲೇಸಾಗಿ ತೋರ್ಪಡಿಸಲಾಗಿದೆ. ಆದರೂ ಮತೀಯತೆ, ಧರ್ಮ ಪ್ರಚಾರ ಇಲ್ಲಿದೆ.

ಜನತಾ ದೃಷ್ಟಿ, ಕಲಾ ದೃಷ್ಟಿಗಳೆರಡೂ ಸನ್ನಿವೇಶ, ಪಾತ್ರ, ಶೈಲಿಗಳಲ್ಲಿ ಪಡಿಮೂಡಿವೆ. ಜಾನಪದ ಕತೆಗಾರನ ಕಥನ ಕೌಶಲ್ಯ, ವಿಡಂಬಕ ಹಾಸ್ಯ, ಜನಜೀವನ ಪ್ರಜ್ಞೆ ಇವುಗಳು ಕಥೆಗಳಲ್ಲಿ ಮೂಡಿಬರುತ್ತವೆ. ಕಥೆಯಲ್ಲಿ ಸಾದೃಶ್ಯ ಮಾಲಿಕೆ ರಾಸಿ ರಾಸಿಯಾಗಿ ತೂರಿ ಬರುತ್ತದೆ. ಜನ ಜೀವನದ ಆಳವಾದ ಅರಿವು ಒಂದೇ ಸಮನಾಗಿದೆ. ಇಲ್ಲಿ ದೊರೆಯುವ ಜನಪದ ಜೀವನ ಚಿತ್ರ ಅಮೌಲ್ಯವಾಗಿದೆ. ಮುನಿಯಾದ ನಯಸೇನನ ಲೋಕ ವ್ಯವಹಾರ ಜ್ಞಾನ ಆಶ್ಚರ್ಯಕರವಾಗಿದೆ.

'ನಾಣ್ನುಡಿ, ದೇಸಿವೆತ್ತ ಪೊಸನುಡಿ ಮಾರ್ಗಂ' ಇದು ನಯಸೇನನ ಶೈಲಿಯ ಆದರ್ಶ. 'ಮಿಸುಕದ ಸಕ್ಕದ' ವನ್ನು ಇಕ್ಕುವವರನ್ನು ಕಡೆಗಣಿಸಿ, 'ಶುದ್ಧಕನ್ನಡ' ದಲ್ಲಿ ಬರೆಯಬೇಕೆಂಬುದು ಅವನ ಸೂಚನೆ. ನಯಸೇನನಲ್ಲಿ ಅಚ್ಚಗನ್ನಡದ ಹೊಗರು ಹೆಚ್ಚಿದೆ. ಜನತೆಯ ಕವಿಗಳೆಂದು ಹೆಸರಾದ ಕನ್ನಡ ಕಲೋಪಾಸಕರಲ್ಲಿ ಕೂಡಲು ನಯಸೇನನು ಅರ್ಹನು. ಅವನು 'ನಿರುಪಮ ಸಹಜ ಕವಿ'ಯು.

(ಈ) ಬ್ರಹ್ಮಶಿವ— ಇವನೊಬ್ಬ ಗಣ್ಯ ಕವಿ. ಇವನದು ಜೈನ ಮ
ಚಾಲುಕ್ಯ ತ್ರೈಲೋಕ್ಯಮಲ್ಲ ಸಂತಕೀರ್ತಿವರ್ಮನನ್ನು ಸ್ತುತಿಸಿರುವದ
ಇವನ ಕಾಲ ೧೧೧೦ ಎಂದು ಕವಿ ಚರಿತೆಕಾರರು ಹೇಳಿದರೆ, 'ಅಗ್ಗಳದೇ
ಕೆಳೆಯಂ' ಎಂದು ಹೇಳಿಕೊಂಡಿರುವದರಿಂದ ಇವನ ಕಾಲ ೧೧೮೫ ಎಂಬ
ಇನ್ನೊಂದು ಅಭಿಪ್ರಾಯ. ಒಟ್ಟಿನಲ್ಲಿ ಇವನು ೧೨ನೆಯ ಶತಮಾನದ
"ತ್ರೈಲೋಕ್ಯ ಚೂಡಾಮಣಿ", ಹಾಗೂ 'ಸಮಯ ಪರೀಕ್ಷೆ' ಇವನ ಗ್ರಂಥಗ

ಮಾಹೇಶ್ವರ ಧರ್ಮದಲ್ಲಿ ಒಳ್ಪುಗಾಣದೇ ಜಿನಧರ್ಮವನ್ನು ಮ
ಸ್ವೀಕರಿಸಿದೆನೆನ್ನುತ್ತಾನೆ. Converts are fanatics, ಮತಾಂ
ಹೊಂದಿದವರು ಧರ್ಮಲಂಡರೆನ್ನುತ್ತಾರೆ. ಬ್ರಹ್ಮ ಶಿವನು ಜೈನ ಧರ್ಮ
ಮರಳಿ ಪರಿವರ್ತಿತನಾದ ಕಾರಣ ಅವನ ಜೈನ ಮತನಿಷ್ಠೆ ಅಧಿಕವಾಗಿ
ಜೊತೆಗೆ ಅನ್ಯಮತ ದೂಷಣೆಯೂ ಅಧಿಕವಾಗಿದೆ. ಆವನ ಸ್ವಮತ ನಿ
ಹಾಗೂ ಅನ್ಯಮತ ವಿಡಂಬನೆಗಳು ಒಂದು ಬೌದ್ಧಿಕ ಭೂಮಿಯ ಮೇ
ನಿಂತಿವೆ. ವೈದಿಕ ಮತಗ್ರಂಥಗಳ ಅಭ್ಯಾಸ ಬಲದಿಂದ ಅದರ ಅಪಾರತೆಯನ್ನ
ಕಂಡು ಅವನು ಭಾವನೆಗಿಂತ ಬುದ್ಧಿಯನ್ನವಲಂಬಿಸಿ ಅನ್ಯಮತ ಟೀ
ಪ್ರವೃತ್ತನಾಗಿದ್ದಾನೆ.

'ತ್ರೈಲೋಕ್ಯ ಚೂಡಾಮಣಿಯಲ್ಲಿ ಜಿನ ಸ್ತುತಿಪರವಾದ ೩೬ ವೃ
ಗಳಿವೆ. ಇದರ ಬಹುಭಾಗದಲ್ಲಿ ಅನ್ಯ ದೇವತಾ ನಿಂದೆ, ಅನ್ಯಮತ ವಿಡಂಬ
ಮುಖ್ಯವಾಗಿವೆ. ಗದ್ಯದಲ್ಲಿರಬಹುದಾದ ವಾದ ಸರಣಿ, ವಿಡಂಬನೆ
ಪದ್ಯ ರೂಪತಾಳಿದೆ. ವಿತ್ತಂಡವಾದಿ, ವಿಡಂಬನಕಾರ ಎಂಬುದನ್ನು ಬ್ರಹ್ಮಶಿವ
ಇಲ್ಲಿ ಸ್ಪಷ್ಟವಾಗಿ ತೋರಿಸಿಕೊಂಡಿದ್ದಾನೆ.

'ಸಮಯ ಪರೀಕ್ಷೆ'ಯು ಮತಪ್ರಚಾರಕ ಗ್ರಂಥ. ಜೈನ ಮತ
ಶ್ರೇಷ್ಠವೆಂದು ಇಲ್ಲಿ ತೋರಿಸಲಾಗಿದೆ. ಕತೆಯೆಲ್ಲ ಜೈನ ಮತದ್ದು,
ಸಾಮಾನ್ಯರೆ ಪಾತ್ರಗಳು, ವಿಡಂಬನೆಯಲ್ಲಿಯೇ ಇದರ ನವರಸ.
ಹಾಸ್ಯವೇ ಇಲ್ಲಿಯ ಸ್ಥಾಯಿ, ಅನ್ಯಮತ ಜನದ ಮೂಢ ನಂಬಿಕೆಗಳ ಆ
ದಶ ವರ್ಣನೆ. ಇಲ್ಲಿ ತಾತ್ಕಾಲಿಕವಾದ ಜನಜೀವನ ಚಿತ್ರವೂ ಇದೆ.

ಉಳಿದ ಧರ್ಮ ಹೆಚ್ಚಾಗಿ ಬ್ರಾಹ್ಮಣ ಹಾಗೂ ವೀರಶೈವಗಳ ಟೀ
ಮಾಡಿ ಕೊನೆಗೆ 'ಉತ್ತಮ ಚಾರಿತ್ರ ಮೆಲ್ಲಿತಲ್ಲಿಯೇ ಧರ್ಮ' ಎಂಬ ಸನಾತ

ಸತ್ಯವನ್ನು ಬ್ರಹ್ಮಶಿವನು ಸಾರಿದ್ದಾನೆ. ಸಾಹಿತ್ಯ ದೃಷ್ಟಿಯಿಂದ ಆದ್ಯವಿಡಂಬನ ಕಾವ್ಯವೆಂದು ಇದು ಸ್ತುತ್ಯವಾಗಿದೆ. ನಯಸೇನನಲ್ಲಿಗಿಂತ ಬ್ರಹ್ಮಶಿವನಲ್ಲಿ ವಿಡಂಬನ ಶಕ್ತಿ ಇನ್ನೂ ಹರಿತವಾಗಿ ತೋರಿದೆ. ಆದರೆ 'ಮಹಾಕವಿ ಬ್ರಹ್ಮಶಿವ' ಎಂದು ಅವನು ಮಾಡಿಕೊಂಡ ಆತ್ಮಪ್ರಶಂಶೆ ವಿಮರ್ಶೆಗೆ ನಿಲ್ಲಲಾರದ ಮಾತು.

(ಉ) ೨ನೆಯ ನಾಗವರ್ಮ— ಕವಿಶಾಸ್ತ್ರಕಾರನಾದ ೨ನೆಯ ನಾಗವರ್ಮನು ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಬಾಳಿದನು. ಇವನು ಜೈನ ಕವಿ. ಚಾಲುಕ್ಯ ರಾಜನಲ್ಲಿ ಕಟಕೋಪಾಧ್ಯಾಯನೂ ಜನ್ನ ಕವಿಗೆ ಉಪಾಧ್ಯಾಯನೂ ಆಗಿದ್ದನೆಂದು ಇವನ ಖ್ಯಾತಿಯಿದೆ.

ಕನ್ನಡ ಕಾವ್ಯ ವ್ಯಾಸಂಗಕ್ಕೆ ಸಹಾಯಕವಾದ ವ್ಯಾಕರಣ, ಕೋಶ ಅಲಂಕಾರ, ಛಂದಸ್ಸು ಇವಕ್ಕೆ ಸಂಬಂಧಿಸಿದ ಶಬ್ದಸ್ಮೃತಿ, ಭಾಷಾಭೂಷಣ ಕಾವ್ಯಾವಲೋಕನ, ವಸ್ತು ಕೋಶ, ಛಂದೋ ವಿಚಿತ (?) ಗ್ರಂಥಗಳನ್ನು ಬರೆದಿದ್ದಾನೆ. ಜನ್ನನು ಇವನ ಹೆಸರನ್ನು 'ಜಿನೇಂದ್ರ ಪುರಾಣ ಕರ್ತೃ' ಗಳ ಮಾಲಿಕೆಯಲ್ಲಿ ಸೇರಿಸಿದ ಕಾರಣ ಇವನು ಜೈನ ಪುರಾಣವನ್ನೂ ಬರೆದಿರಬಹುದು. ಇವನು ಕಾವ್ಯ ನಿರ್ಮಾಣ ಶಕ್ತಿಯುಳ್ಳವನಾಗಿರಬೇಕೆಂದು ಇವನ ಇತರ ಗ್ರಂಥಗಳಿಂದ ವ್ಯಕ್ತವಾಗುತ್ತದೆ.

ಉತ್ಪತ್ತಿ ಸಾಧಕವಾದ ಸಮಗ್ರ ಗ್ರಂಥಗಳನ್ನು ಕನ್ನಡಕ್ಕೆ ಒದಗಿಸಿದ ಅಪೂರ್ವ ಶ್ರೇಯಸ್ಸು ಇವನಿಗೆ ಸಲ್ಲುತ್ತದೆ. 'ಕವಿರಾಜ ಮಾರ್ಗ' ಕಾರನು ಬರೀ ಅಲಂಕಾರ ಶಾಸ್ತ್ರಕ್ಕೆ, ೧ನೆಯ ನಾಗವರ್ಮನು ಬರಿ ಛಂದಸ್ಸಿಗೆ ಮೊದಲಿಗನಾಗಿದ್ದರೆ ಇವನು ಕಾವ್ಯಾಂಗ ಪರವಾದ ಸಮಗ್ರ ಗ್ರಂಥ ರಚನೆಗೆ, ವಿಶೇಷವಾಗಿ ವ್ಯಾಕರಣ ರಚನೆಗೆ ಮೊದಲಿಗನಾಗಿದ್ದಾನೆ.

ಶಾಸ್ತ್ರ ಪಾಂಡಿತ್ಯ, ಸಂಕಲನ ಕೌಶಲ್ಯ, ಪ್ರಯೋಗ ನಿಪುಣತೆ, ಸೂಕ್ಷ್ಮವಾದ ರಸಗ್ರಹಣ ಶಕ್ತಿ, ಸಮನ್ವಯ ದೃಷ್ಟಿ ಇವುಗಳೆಲ್ಲ ಇವನಲ್ಲಿ ಕಂಡು ಬರುತ್ತವೆ. ಇವನು ಜಡಬುದ್ಧಿಯ ಅನುಕರಣಶೀಲ ಪಂಡಿತನಾಗಿರದೆ ವಿವೇಚಕ ಶಕ್ತಿಯುಳ್ಳ ವಿದ್ವಾಂಸನೂ ವಿಮರ್ಶಕನೂ ಆಗಿದ್ದಾನೆ.

ಪ್ರಶ್ನೆ ೧೨) ಟಿಪ್ಪಣಿ ಬರೆಯಿರಿ—(ಅ) 'ರಾಮಚಂದ್ರ ಚರಿತ ಪುರಾಣ' ಆ) ಮಲ್ಲಿನಾಥ ಪುರಾಣ, (ಇ) ಧರ್ಮಾಮೃತ, (ಈ) ಸಮಯ ಪರೀಕ್ಷೆ.

ಉತ್ತರ— (೧) 'ರಾಮಚಂದ್ರ ಚರಿತ ಪುರಾಣ' ಅಥವಾ ಪಂಪ ರಾಮಾಯಣ'ವು ಉಪಲಬ್ಧವಾದ ಮೊದಲನೆಯ ಜೈನ ರಾಮಾಯಣ. ನಾಗಚಂದ್ರನ ಪರಿಪಕ್ವವಾದ ದ್ವಿತಿಯ ಕೃತಿ ಕವಿ. ಜ್ಯೇಷ್ಠರನ್ನು ಆದರ್ಶವಾಗಿ ಇಟ್ಟುಕೊಳ್ಳಲಾಗಿದೆ. 'ಉದಾತ್ತ ರಾಘವಂ ನಾಯಕನಾಗೆ ಮಿಶ್ರ... ನಿಪ್ಪುದು ವಿಸ್ಮಯ ಕಾಿಯಲ್ತು ವಿಷಯ ವೊಪ್ಪದೊಡಾವುದು... ಲಾರ್ಕುವೇ' ಎಂಬಲ್ಲಿ ಉದಾತ್ತ ಕಥೆ ಮತ್ತು ನಾಯಕನ ಮಹಾ... ಧರ್ಮಬೋಧೆ ಇಲ್ಲಿ ಮುಖ್ಯವಾಗಿದೆ.

'ಅಪೂರ್ವ ಮೆನೆ ರಾಮಕಥೆಯುನಭಿವರ್ಣಿಸುವೆಂ' ಎಂದಿರುವದ... ಇಲ್ಲಿಯ ಅಪೂರ್ವತೆಯೇನು ? ಎಂಬುದನ್ನು ಕಂಡುಕೊಳ್ಳಬೇಕು. ನಾಗ ಚಂದ್ರನು ವಾಲ್ಮೀಕಿ ರಾಮಾಯಣ, ವಿಮಲಸೂರಿ, ಗುಣಭದ್ರರ ಜೈನರಾಮಾ ಯಣಗಳು, ಸಂಸ್ಕೃತದಲ್ಲಿ ರವಿಷೇಣನ ಜೈನ ರಾಮಾಯಣಗಳನ್ನೇ ಅನುಸ ಸಿರಬೇಕು, ಆದರೆ ಇದರಲ್ಲಿ ವಿಮಲಸೂರಿಯ 'ಪಉಮಚರಿಯ' ದ ಛಾಯೆ ಯೇ ಅಧಿಕವಾಗಿದೆ. ಕಥಾದೃಷ್ಟಿಯಿಂದ ಅದನ್ನೇ ಅನುಸರಿಸಲಾಗಿದೆ.

'ಪಿರಿದೆನಿಸಿರ್ದ ರಾಮ ಕಥೆಯಂ ಕಿರಿದಾಗಿದೆ' ಸಂಕ್ಷೇಪಿಸಿ ಹೇಳಿದ್ದರೂ ತನಗೆ ರಸಸ್ಥಾನಗಳೆಂದು ತೋರಿದಲ್ಲಿ, ಧರ್ಮಬೋಧಕವೆಂದು ತೋರಿದಲ್ಲಿ ಬಿತ್ತರಿಸಲು ನಾಗಚಂದ್ರನು ಅನುಮಾನಿಸಿಲ್ಲ. ಕೆಲ ಉಪ ಕಥೆಗಳ ಸ್ಥಾನ ಪಲ್ಲಟಗೊಳಿಸಲಾಗಿದೆ. ನಾಗಚಂದ್ರನು ಒಳ್ಳೆಯ ಅನುವಾದನಕಾರ. ಮೂಲ ನಿಷ್ಠೆಯುಳ್ಳ ಸಂಗ್ರಹಕಾರನಾಗಿದ್ದರೂ ಸ್ವಂತ ಪ್ರತಿಭೆಯ ಪರುಷದಿಂದ ಹಾಗೂ ಶೈಲಿಯ ವಿಶಿಷ್ಟ ಪಾಕದಿಂದ ಮೂಲಕ್ಕೂ ಮೆರಗು ಕೊಟ್ಟಿರುವ ಸಮರ್ಥ ಕಲಾವಿದನಾಗಿದ್ದಾನೆ.

ಪಂಪ ರಾಮಾಯಣದ ಪಾತ್ರಗಳೆಲ್ಲ ವಿಮಲಸೂರಿಯ ಪಡಿಯಚ್ಚು ಗಳಾಗಿವೆ. ಜೈನ ಸಂಪ್ರದಾಯದ ರಾಮನು ಇಲ್ಲಿ ಹಿಂಸೆ ಮಾಡಲಾರದ ಚರಮದೇಹಧಾರಿ, ಅವನು ರಾಮಜಿನನೇ ಆಗಿದ್ದಾನೆ. ಲಕ್ಷ್ಮಣ (ಲಕ್ಷ್ಮೀಧರ) ನೇ ಹಿಂಸೆ ಮಾಡಬಲ್ಲನು. ರಾಮನು ಅಕ್ಷತ್ರಿಯನೇ ಸರಿ ಇಲ್ಲಿ. ಸೀತೆಯ ಪಾತ್ರವು ಏಕತಾನವಾಗಿ ಸುಂದರವಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ

ಯಂತೆ ಅಚಲಪ್ರತಿವೃತೆಯೆಂಬ ಅವಳ ಚಿತ್ತವು ಇಲ್ಲಿಯೂ ಸೊಗಸುತ್ತದೆ. ಮಂಡೋದರಿ ಮಾತ್ರ ಅಧಃಪಾತವನ್ನು ಹೊಂದಿದ್ದಾಳೆ.

ರಾವಣನ ಪಾತ್ರವೇ ಇಲ್ಲಿ ಮುಖ್ಯವಾದುದಾಗಿದೆ. ಇಲ್ಲಿ ರಾವಣನು ಉದಾತ್ತ ಹಾಗೂ ಸದ್ಗುಣಿಯಾದ ವ್ಯಕ್ತಿ; ಆದರೆ ದುರ್ವಿಧಿ ವಶದಿಂದ ಸೀತೆಯನ್ನು ಕಾಮಿಸಿದನು, ಅವಳನ್ನು ವಶಪಡಿಸಿಕೊಳ್ಳಬೇಕೆಂದು ವಿಶ್ವ ಪ್ರಯತ್ನ ಮಾಡಿದನು, ಆದರೆ ಅವಳ ಪತಿಭಕ್ತಿಯನ್ನು ನೋಡಿ ಪಶ್ಚಾತ್ತಾಪದಿಂದ ಪುನೀತನಾದನು. ಆದರೂ ವಿಮಲಸೂರಿಯಲ್ಲಿರುವಷ್ಟು ಇಲ್ಲಿಯ ರಾವಣನಲ್ಲಿ ಸೌಂದರ್ಯವಿಲ್ಲ, ಗಾಂಭೀರ್ಯವಿಲ್ಲ, ದುರಂತತೆಯ ಬೃಹತ್ಪ್ರಮಾಣವಿಲ್ಲ, ರಾವಣನ ಉದಾತ್ತತೆಗೆ ಅಲ್ಲಲ್ಲಿ ವಿಸಂಗತಿಗಳು ಒದವಿ ಬಂದಿವೆ. ಆದರೂ ರಾವಣನ ದುರಂತತೆಗೆ ಪರಿಣಾಮ ರಮಣೀಯವಾದ ಕರುಣ ಸ್ವರೂಪವಿದೆ.

ನಾಗಚಂದ್ರನ ಶೈಲಿ ಮಲದೂಕ್ತಿಗಳಿಂದ ಕೂಡಿದೆ. ಎಂಥ ಆವೇಶಪ್ರಸಂಗದಲ್ಲಿಯೂ ನಾಗಚಂದ್ರನ ಲೆಕ್ಕಣಿಕೆಯಿಂದ ಬಿರುಸುಮಾತು ಬಾರದು. ಅವನ ಹೃದಯ ಕುಸುಮಾದಪಿ ಮೃದುವಾದುದು. ಆದರೆ ನಾದ ಮಾಧುರ್ಯದಿಂದ ಕೂಡಿದ ಮಂಜುಳ ಶಬ್ದಗಳ ಬಳಕೆ ವೆಗ್ಗಳವಾಗಿದೆ. ಮೃದು ಪದ ಬಂಧ ಅವನದು. ಕನ್ನಡ ಹಾಗೂ ಸಂಸ್ಕೃತಗಳ ಸುಂದರ ಸಮನ್ವಯವಿದೆ. ಅಲಂಕಾರಗಳಲ್ಲಿ ಅರ್ಥಾಂತರನ್ಯಾಸ ಅಧಿಕ ಉಪಯೋಗಿಸಲಾಗಿದೆ. ರಸ ಸ್ಥಾನಗಳನ್ನು ಕಾವ್ಯದ ಘನತೆ ಹೆಚ್ಚುವಂತೆ ಉಪಯೋಗಿಸಿಕೊಳ್ಳಲಾಗಿದೆ. ಇಲ್ಲಿ ಕವಿ ಹೃದಯ ಪಕ್ವವಾಗಿದೆ, ಕೈ ಪಳಗಿದೆ. ಕೆಲ ಸನ್ನಿವೇಶಗಳು ಹೃದಯಂಗಮವಾಗಿವೆ. ಸೌಕುಮಾರ್ಯ, ಮಾಧುರ್ಯ, ಲಾಲಿತ್ಯವನ್ನು ಕಾಣಬೇಕಾದರೆ ನಾಗಚಂದ್ರನ ಈ ಕಾವ್ಯವನ್ನು ಓದಬೇಕು ಆನಂದಿಸಬೇಕು. ಪಂಪನ ಅಸಾಧಾರಣ ಪ್ರತಿಭೆ ಉಭಯ ಭಾಷಾ ಪ್ರೌಢಿಮೆ (ಪ್ರಾಕೃತವನ್ನೂ ಇಲ್ಲಿ ಸೇರಿಸಿಕೊಳ್ಳಬೇಕು.) ಸಂಗ್ರಹನಕಾ ಹೃದ್ಯತೆ, ಜಾಣ್ಮೆಗಳನ್ನು ಇಲ್ಲಿ ಕಾಣಬಹುದು.

ಆ) ಮಲ್ಲಿನಾಥ ಪುರಾಣ— ಇದು ನಾಗಚಂದ್ರನ ಮೊದಲ ಕೃತಿಯಾಗಿರಬೇಕು. ಪಂಪ-ರನ್ನರ ಮಾರ್ಗದಲ್ಲಿ ನಡೆದು ಆತ್ಮೋನ್ನತಿಗಾಗಿ ಇಲ್ಲಿ ಧರ್ಮವನ್ನು ಬೆಳಗಿದ್ದಾನೆ. 'ವಿಜಯ ಪುರಕ್ಕಳಂ ಕರಣಮಾಗಿರೆ ಮಲ್ಲಿಜಿನೇಂದ್ರ ಗ್ರಹ'ವನ್ನು ಕಟ್ಟಿಸಿದ್ದಾನೆ ಕವಿ ನಾಗಚಂದ್ರ. ಅಲ್ಲದೆ ೧೯ನೆಯ ತೀರ್ಥಂಕರನಾದ 'ಮಲ್ಲಿನಾಥ ಪುರಾಣ'ನವ್ನೂ ಬರೆದಿದ್ದಾನೆ.

ಈ ಪುರಾಣದ ಕಥೆ ಚಿಕ್ಕದಾಗಿದ್ದರೂ ನಿರೂಪಣೆಯಲ್ಲಿ ೧೪ ಆಶ್ವಾಸನಗಳ ವಿಸ್ತಾರಗೊಂಡಿದೆ. ಇದು 'ಮಹಾಪುರಾಣ'ವೇ. ವೈಶ್ರವಣನೆಂಬ ಅರಸನು ಅತ್ಯಂತ ಸುಖೋಭೋಗಗಳನ್ನು ಹೊಂದಿರುವಾಗ 'ಸಿಡಿಲೆಂಬ ಜವನ ಕೊಡಲಿಯ | ಕಡುವೊಯ್ಲಿಂ ನೆಗೆದ ಬೇರ್ಗಳೊಡನೆ ನೆಲಂ ಬಾಯ್ಬಿಡೆ ಬಿಟ್ಟು ಕೆಡೆವ ತೆರದಿಂ | ಕೆಡೆದಾಲಮನಿದರೊಳವನಿಪಾಳಂ ಕಂಡಂ ||.||' ಹೀಗೆ ಕಂಡಾಗ ವಿಸ್ಮಯಮೆ ತನಗೆ ವೈರಾಗ್ಯ ರಸಕ್ಕೆ ಸೇತುವಾಗೆ' ಸಂಸಾರದ ಅನಿತ್ಯತೆಯನ್ನು ಅರಿತನು. ಮಗನಿಗೆ ರಾಜ್ಯವನ್ನು ಒಪ್ಪಿಸಿ ನಾಗಯತಿಗಳಿಂದ ಧರ್ಮಕೇಳಿ, ತಪೋನಿರತನಾಗಿ, ಕಾಲಾಂತರದಲ್ಲಿ ಅಹಮಿಂದ್ರನಾದನು. ಮುಂದೆ ಮಲ್ಲಿನಾಥನಾಗಿ ಹುಟ್ಟಿ ಕೌಮಾರ್ಯದಲ್ಲಿಯೇ ವೈರಾಗ್ಯ ಪಡೆದು ಪರಿನಿಷ್ಕ್ರಮಣವನ್ನು, ಮಾಡಿ, ಕೇವಲ ಜ್ಞಾನಿಯಾಗಿ ತೀರ್ಥಂಕರನಾದನು.

ಕಥೆಯಿಲ್ಲದ ಈ ಅಲ್ಪ ಚರಿತೆಯನ್ನು ವರ್ಣನೆಗಳಿಂದ ವಿಸ್ತರಿಸಿ ಭೋಗ ತ್ಯಾಗಗಳ ದ್ವಿವಿಧ ಚರಿತ್ರೆಗಳಲ್ಲಿ ಬಣ್ಣ ತುಂಬಿ ನಾಗಚಂದ್ರನು ಘನವಾದ ಯಶಸ್ಸನ್ನು ಪಡೆದಿದ್ದಾನೆ. ಇಲ್ಲಿ ಯೌವನದ ವೈಭವವಿದೆ, ವಸ್ತುರಚನೆಯ ಸೌಂದರ್ಯವಿದೆ. ಮಲ್ಲಿನಾಥನ ಎರಡು ಜನ್ಮದ ಚರಿತ್ರೆಯನ್ನು ಒಂದು ಮಹಾಜನ್ಮದ ಪೂರ್ವೋತ್ತರ ಭಾಗಗಳೆಂಬಂತೆ ನಾಗಚಂದ್ರನು ಜಾಣ್ಮೆಯಿಂದ ಸಂಧಿರುವನು.... ಸಮಗ್ರ ವಸ್ತುವಿನ ಸಮ್ಯಕ್ ಸೌಂದರ್ಯದಲ್ಲಿ ದೃಷ್ಟಿಯಿಟ್ಟು ಪ್ರತ್ಯಂಗಗಳನ್ನೂ ಅನುಗೊಳಿಸುವ ಜಾಣ್ಮೆಯು ಮಲ್ಲಿನಾಥನ ಪುರಾಣದಲ್ಲಿಯೂ ಕಾಣುವದು.

ಶೈಲಿ ಉನ್ನತವಾಗಿದೆ, ಉಜ್ವಲವಾಗಿದೆ. ವೈದಿಕಪುರಾಣದಲ್ಲಿ ಶಿವನು ಕಾಮನನ್ನು ಸುಟ್ಟರೆ ಈ ಪುರಾಣದಲ್ಲಿ 'ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಂ ಸ್ಮರಂ ನಂದೆ ಪೊಯ್ದಂ' ಎಂಬಲ್ಲಿ ಕಾಮನೇ ಶಿವನ ಹಣೆಗಣ್ಣು ನಂದುವಂತೆ ಹೊಡೆದನೆಂದಿದೆ. ವೈರಾಗ್ಯ ಹುಟ್ಟಿದ ಅರಸನು 'ನಿನಗೆ ರಸವೊಂದೆ ಶಾಂತಮೆ | ಜಿನೇಂದ್ರ ಮನಮಾರಸಾಂಬುನಿಧಿಯೊಳಗವಗಾಹನಮಿರ್ದು ಮಿಕ್ಕರಸಂ | ಕನಸಿನೊಳಂ ನೆನೆಯುದಂತು ಮಾಡೆಮಗರ್ಹಾ ||೦|| ಮೊದಲಾದ ಜಿನಸ್ತುತಿಯ ಪದ್ಯಗಳು ಜೈನ ಪುರಾಣಗಳಲ್ಲಿ ಪರ್ಯವಸಾಯಿಯಾಗಿ ಬರುವ ಶಾಂತರಸಕ್ಕೆ ಸೂತ್ರದಂತಾಗಿವೆ.

ಇಷ್ಟಾದರೂ ಸಜೀವ ಸನ್ನಿವೇಶ ಪಾತ್ರಗಳು ಇಲ್ಲಿ ಅರಳಿ ನಿಂತಿಲ್ಲ. ಆದರೆ ಇದು 'ಮಲ್ಲಜಿನೇಂದ್ರ ಮಹಾಪುರಾಣ'ವಾದರೂ ಮಹಾಕಾವ್ಯವಲ್ಲ. ಪಂಪನ 'ಆದಿ ಪುರಾಣ' ಇಲ್ಲವೇ ರನ್ನನ 'ಅಜಿತ ಪುರಾಣ'ದ ಮಟ್ಟಕ್ಕೆ ಇದು ಬರಲಾರದು. ಆದರೂ ಭಕ್ತ ಹೃದಯ ಇಲ್ಲಿ ಏಕತಾನವಾಗಿ ಮಿಡಿದಿದೆ.

(ಇ) ಧರ್ಮಾಮೃತ — ಇದರ ಕರ್ತೃ ನಯಸೇನ. ಕಾಲ ೧೨ನೆಯ ಶತಮಾನದ ಮೊದಲ ಭಾಗ. ಜೈನ ಮತಾಚಾರದಲ್ಲಿ ೧೪ ರತ್ನಗಳೆಂದು ಹೆಸರಾದ ಗುಣವ್ರತಗಳಲ್ಲಿ ಒಂದೊಂದನ್ನು ಆಚರಿಸಿ, ಸದ್ಗತಿಯನ್ನೈದಿದ ೧೪ ಮಹಾಪುರುಷರ ಕಥೆಗಳನ್ನು ೧೪ ಅಶ್ವಾಸಗಳಲ್ಲಿ ನಿರೂಪಿಸಲಾಗಿದೆ. ಕನ್ನಡ ಚಂಪೂ ವಿಷಯ, ವಿನ್ಯಾಸ ಎರಡರಲ್ಲಿ ಜನ ಸಮ್ಮುಖವೂ ದೇಸಿ ಸಂಪನ್ನವೂ ಆದದ್ದು ಈ ಗ್ರಂಥದಲ್ಲಿಯೇ.

ಈ ವರೆಗೆ ಬರೆಯಲ್ಪಟ್ಟ ಪ್ರೌಢ ಪುರಾಣಗಳ ಮೂಲಕ ಧರ್ಮಜ್ಞಾನ ಕಷ್ಟ ಸಾಧ್ಯವಾಯಿತು, ಸುಲಭತೆಯ ರೀತಿ ಅಗತ್ಯವಾಗಿತ್ತು. ಈ ದೃಷ್ಟಿಯಿಂದ ಸಾಮಾನ್ಯ ಜನತೆಗಾಗಿ ಬರೆದ ಮೊದಲನೆಯ ಜೈನಪುರಾಣ ಎಂಬ ಕೀರ್ತಿ ಇದಕ್ಕೆ ಸಲ್ಲುತ್ತದೆ. ಇದು ಕೇವಲ ಕಥಾ ಸಂಗ್ರಹ ಸ್ವರೂಪದ ಪುರಾಣ. ಜೈನ ಮತದ ಸಾರ ಇಲ್ಲಿ 'ಲೇ ಸಾಗಿತೋರ್ಪುದು' ಎಂದೂ 'ಪೆಳ್ವಿನರಿಯೆ ಧರ್ಮಾಮೃತಮಂ' ಎಂದಿರುವದರಿಂದಲೂ ನಯಸೇನನ ಕಲಾದೃಷ್ಟಿ ಹಾಗೂ ಜನತಾ ದೃಷ್ಟಿ ವ್ಯಕ್ತವಾಗುತ್ತದೆ.

ಸನ್ನಿವೇಶ, ಪಾತ್ರ, ಶೈಲಿಗಳಲ್ಲಿ ಈ ದ್ವಿವಿಧ ದೃಷ್ಟಿಯಿದೆ. ಜಾನಪದ ಕತೆಗಾರನ ಕಥನ ಕೌಶಲ್ಯ, ವಿಡಂಬಕ ಹಾಸ್ಯ, ಜನಜೀವನ ಪ್ರಜ್ಞೆ ಇಲ್ಲಿ ವ್ಯಕ್ತವಾಗಿದೆ. ಇಲ್ಲಿ ಮತೀಯತೆ, ಧರ್ಮ ಪ್ರಚಾರದ ಅಚ್ಚು ಮೂಡಿ ಸ್ವಾಭಾವಿಕತೆ ಕಡಿಮೆಯಾಗಿದೆ. ಕಥೆಯನ್ನು ಹೇಳು ಹೇಳುತ್ತಲೇ ರಾಶಿರಾಶಿಯಾಗಿ ಅವನು ತೂರುವ ಸಾದೃಶ್ಯ ಮಾಲಿಕೆ ಇಲ್ಲಿಯ ಬರೆವಣಿಗೆಯ ಗುಣ ವಿಶೇಷವೆನಿಸಿದೆ. ಇಲ್ಲಿಯ ಉಪಮೆಗಳಲ್ಲಿ ಹೆಚ್ಚಾಗಿ ಔಚಿತ್ಯವಿದೆ, ರುಚಿಯಿದೆ, ನಗೆಯೂರಿದೆ. ಆಳವಾದ ಜನಜೀವನದ ಅರಿವು, ಲೋಕ ವ್ಯವಹಾರದ ಜ್ಞಾನ ಅಚ್ಚರಿಗೊಳಿಸುವಂತಿದೆ. ಧರ್ಮಾಮೃತದಲ್ಲಿ.

'ನಾಣ್ಣುಡಿ ದೇಸಿವೆತ್ತ ಪೊಸ ನುಡಿ ಮಾರ್ಗ' ಇದು ನಯಸೇನನ ಶೈಲಿಯ ಆದರ್ಶ. 'ಮಿಸುಕದ ಸಕ್ಕದ'ವನ್ನು ಇಕ್ಕುವವರನ್ನು ಕಡೆಗಣಿಸಿ 'ಸುದ್ದ ಕನ್ನಡ' ದಲ್ಲಿ ಬರೆಯಬೇಕೆಂದು ಸೂಚಿಸಿದ್ದಾನೆ. ಆದರೂ ಸಂಸ್ಕೃತ ಅವನ ಬೆನ್ನು ಬಿಟ್ಟಿಲ್ಲ. ಆದರೆ ಅವನ ಒಟ್ಟು ಬರೆಹದಲ್ಲಿ ಅಚ್ಚಗನ್ನಡದ ಹೊಗರು ಹೆಚ್ಚಿದೆ. ಜನತೆಯ ಕವಿಯಾದ ನಯಸೇನನು ಸಾಮಾನ್ಯ ಜನತೆಗೆ ಧರ್ಮಾಮೃತವನ್ನು ವಿತರಿಸಲೆಂದು ಬರೆದ ಗ್ರಂಥ ಧರ್ಮಾಮೃತ ಪುರಾಣ.

(ಈ) ಸಮಯ ಪರೀಕ್ಷೆ— ಇದರ ಕವಿ ಬ್ರಹ್ಮ ಶಿವ, ಕಾಲ ೧೨ನೆಯ ಶತಮಾನದ ಮಧ್ಯ ಭಾಗ, ಛಂದಸ್ಸು, ವಿಷಯ, ವಿಷಯ ನಿರೂಪಣೆಯಿಂದ ಚಂಪೂ ಮಾರ್ಗದಿಂದ ಭಿನ್ನವಾದ ವಿಸ್ತಾರವಾದ ಗ್ರಂಥವಿದು. ಹೆಚ್ಚಾಗಿ ಇದು ಮತ ಪ್ರಸಾರಕ ಗ್ರಂಥ, ಸಾಹಿತ್ಯ ದೃಷ್ಟಿಯಿಂದ ಆದ್ಯವಿಡಂಬನ ಕಾವ್ಯ ವೆಂದು ಸ್ತುತ್ಯವಾಗಿದೆ, ಸ್ಥಾನ ಪಡೆದಿದೆ.

ಇತರ ಮತ, ಪುರಾಣ, ಲೋಕಾಚಾರದಲ್ಲಿದ್ದ ದೋಷಗಳನ್ನು ಎತ್ತಿ ತೋರಿಸಿ ಜೈನ ಮತವೇ ಶ್ರೇಷ್ಠವೆಂದು ಇಲ್ಲಿ ತೋರಿಸಲಾಗಿದೆ. ಇದರಲ್ಲಿ ಕಥಾನಕವಿಲ್ಲ, ಪಾತ್ರ ಸೃಷ್ಟಿಯಿಲ್ಲ, ನವರಸವಿಲ್ಲ, ಅಷ್ಟಾದಶವರ್ಣನೆಯಿಲ್ಲ. ಕಥೆಯಿದ್ದರೆ ಅದು ಜೈನ ಮತದ್ದೇ, ಜನಸಾಮಾನ್ಯರೇ ಇಲ್ಲಿ ಪಾತ್ರ ವರ್ಗ, ವಿಡಂಬನೆಯ ನವರಸ, ಅಪಹಾಸ್ಯವೇ ಇಲ್ಲಿಯ ಸ್ಥಾಯಿ. ಅನ್ಯಮತ ಜನದ ಮೂಢ ನಂಬಿಕೆಗಳೇ ಅಷ್ಟಾದಶವರ್ಣನೆಗಳು. ಒಟ್ಟನಲ್ಲಿ 'ಸಮಯ ಪರೀಕ್ಷೆ' ಯು ಕನ್ನಡದಲ್ಲಿ ಅಪೂರ್ವವಾದ ತಾತ್ವಿಕ ವಿಡಂಬಕ ಕಾವ್ಯವಾಗಿದ್ದು ತನ್ನ ಮಿತಿಯಲ್ಲಿ ನೇರವಾದ, ತತ್ಕಾಲೀನವಾದ ಜನಜೀವನದ ಚಿತ್ರವನ್ನೂ ಚಿತ್ರಿಸಿದೆ.

ಇಲ್ಲಿ ನಿರೂಪಿಸಲ್ಪಟ್ಟ ೧೫ ವಿಷಯಗಳಲ್ಲಿ ವೈದಿಕ ವಿಡಂಬನ, ಕುದೃಷ್ಟಿ ಲಕ್ಷಣ, ಕುಲಿಂಗಿ ಕುಚಾರಿತ್ರ ನಿರೂಪಣ ಮೊದಲಾದ ವಿಷಯಗಳನ್ನು ಗಮನಿಸಿದರೆ ಮೇಲೆ ನಿರೂಪಿಸಿದ ಮಾತಿನ ಸತ್ಯತೆ ವ್ಯಕ್ತವಾಗದಿರದು. ಇಲ್ಲಿ ಬಂದ ವಿಡಂಬನೆ ಹಾಗೂ ಟೀಕೆ ಕಟುವಾಗಿದೆ. ಮತೀಯ ಪಕ್ಷಪಾತ ಅಸಹನೆಯ ಗುರುತಾಗಿದೆ. ಆದರೂ ಅಲ್ಲಲ್ಲಿ ಅವಕ್ಕೆ ಹಗುರಾದ ನಗೆಯ ಲೇಪಯಿರುವದರಿಂದ ಅವು ಸಹ್ಯವಾಗಿವೆ ಅಷ್ಟೇ.

ಜನ ಮೂಢ ನಂಬಿಕೆಗಳ ಮತ್ತು ಆಚಾರ ಪದ್ಧತಿಗಳ ಟೀಕೆಯನ್ನು "ಮಾರಜ್ಜಿ, ಮಸಣವಾಸಿನಿ, ಬೀರ ಮೈಲಾರನೆಂಬವರ ನೋಂಪಿಗಳಲ್ಲಿ ಹಾರುವರನ್ನೂ ಹೊಲೆಯರನ್ನೂ ಒಂದೇ ಸಮನಾಗಿ ಮುಟ್ಟಬಹುದೆಂದು ಹಾರುವರು ಹೇಳುತ್ತಾರೆ. ಲಿಂಗಕ್ಕೆ ಎರಗುವದು, ಹಾರುವನಿಗೆ ಎಲೆಯೆರಡು, ಅಡಕೆ ಪೋಂದು ಈ ಮದು ಇದೇ ಧರ್ಮ; ಮೃತಗುಣ ಚಾರಿತ್ರಗಳು ಒಂದಿನಿಸು ಇಲ್ಲಿ ಶೈವರಿಗೆಲ್ಲ" ಈ ಮುಂತಾದ ಮಾತುಗಳಲ್ಲಿ ಕಂಡುಕೊಳ್ಳಬಹುದು.

ಹೀಗೆ ಪರಮತಗಳನ್ನು ಟೀಕೆ ಮಾಡುತ್ತ ಜೈನ ಧರ್ಮದ ಶ್ರೇಷ್ಠತೆಯನ್ನು ವರ್ಣಿಸುತ್ತ 'ಉತ್ತಮ ಚಾರಿತ್ರ ಮೆಲ್ಲಿತಲ್ಲಿಯೇ ಧರ್ಮಂ' ಎಂಬ ನಾತನ ಸತ್ಯವನ್ನೂ ಬ್ರಹ್ಮಶಿವನು ಇಲ್ಲಿ ಸಾರಿದ್ದಾನೆ. ನಯಸೇನದಲ್ಲಿದ್ದ ವಿಡಂಬಕ ಶಕ್ತಿ ಬ್ರಹ್ಮ ಶಿವನಲ್ಲಿ ಇನ್ನೂ ಹರಿತವಾಗಿ ವ್ಯಕ್ತವಾಗಿದೆ. ಮಹಾ ಕವಿ ಎನಿಸಿಕೊಂಡ ಬ್ರಹ್ಮಶಿವನು ಪುತ್ರ ಪಕ್ಷಪಾತಿಯೂ ಪ್ರಚಾರಕನೂ ಆಗಿರುವದರಿಂದ ಸಮಗ್ರ ಜೀವದ ದೃಷ್ಟಿಯಲ್ಲಿ ದೂರವಾಗಿದೆ.

✓ಪ್ರಶ್ನೆ ೧೩— 'ವಚನ ಸಾಹಿತ್ಯವು ಆತ್ಮಾನುಭವ, ದೃಷ್ಟಿ ವೈಶಾಲ್ಯ ಸತ್ಯ ಧರ್ಮ ದರ್ಶನಗಳಿಂದ ಕೂಡಿದ, ಜನ ಶಾಂತ ದೃಷ್ಟಿಯಿದ್ದ ಭಾವಗೀತೆಗಳ ಸತ್ವವುಳ್ಳ ಶ್ರೇಷ್ಠ ಮಟ್ಟದ ಸಾಹಿತ್ಯವಾಗಿದೆ, ವಿವರಿಸಿರಿ.

ಉತ್ತರ— ಮಾನವ ಪ್ರೇಮ, ನೀತಿನಿಷ್ಠೆ, ಶಿವಭಕ್ತಿ, ಸಮಾನುಭಾವ ಇವುಗಳನ್ನು ಹೆಚ್ಚೆಂದು ತಿಳಿದು ನಡೆಯುವ ಸಮಾನ ವ್ಯಕ್ತಿಗಳ ಹೊಸ ಸಮಾಜ ವ್ಯವಸ್ಥೆ, ಅದಕ್ಕೆ ಮಾದರಿಯಾಗಿ ಎತ್ತರದ ಶರಣ ಮಾರ್ಗದಲ್ಲಿರುವ ದಿವ್ಯ ಜೀವಿಗಳ ಅನುಭಾವ ಗೋಷ್ಠಿ. ಇವೆಲ್ಲ ವಚನ ಸಾಹಿತ್ಯದಲ್ಲಿ ಮೂಡಿ ಬಂದಿವೆ.

ಹೀಗೆ ಜನ ಜೀವನದಿಂದೆತ್ತಿಕೊಂಡು, ಜನ ಹೃದಯವನ್ನು ತಟ್ಟುವ; ಲೌಕಿಕ ಕಥೆ, ಗಾದೆ, ಒಳ್ಳು ನುಡಿಗಳಿಂದ ಅನುಭಾವದ ಆಳವನ್ನೂ ನವ ಸಮಾಜ ನೀತಿಯನ್ನೂ ಸಹಜ ಸುಂದರವಾಗಿ, ವೆಗ್ಗಳವಾಗಿ ನಿರೂಪಿಸಿದ್ದರಲ್ಲಿಯೇ ವಚನಗಳ ವೈಶಿಷ್ಟವಿದೆ, ಸಾಫಲ್ಯವಿದೆ. ವಚನಗಳಿಗೆ ಕೃತಿಗಳಿಗಿಂತ ಶ್ರುತಿಯ ಲಕ್ಷಣವಿದೆ.

'ಸೂಕ್ಷ್ಮವಾಗಿ ವಿಚಾರಿಸಿದರೆ ವಚನಗಳು ಗದ್ಯಪದ್ಯದ ನಡುವಿನ ಒಂದು ಮಾದರಿಯೆಂದೇ ಹೇಳಬೇಕಾಗುವದು, ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲ.

ದಿದ್ದರೂ ಅದರ ಸರಳತೆ ಇದೆ; ಪದ್ಯದ ಕ್ರಮಬದ್ಧ ಛಂದೋಗತಿ ಇಲ್ಲದಿದ್ದರೂ ಅದರ ಲಯವಿದೆ ಈ ಲಯವು ಛಂದೋಗತಿಗೆ ಸಮೀಪ ವರ್ತಿಯಾಗಿರುವದ ರಿಂದ ಸರಾಗವಾಗಿ ಹಾಡಲು ಅನುಕೂಲವಾಗಿದೆ.

ವಚನಗಳೆಂದರೆ ನಡುಗನ್ನಡ ಶೈಲಿಯ ಅನುಭಾವ ಗದ್ಯದಲ್ಲಿ ಉಸುರಿದ ಆಧ್ಯಾತ್ಮಿಕ ಭಾವಗೀತೆಗಳು. ಜಗತ್ತಿನ ಸಾಹಿತ್ಯದಲ್ಲಿ ಇವುಗಳನ್ನು ಹೋಲುವ ರೂಪಕ ಡಿಮೆ.

ವಿಷಯ ಹಾಗೂ ಶೈಲಿಯು, ದೃಷ್ಟಿಯಿಂದ ವಚನಗಳ ಲಕ್ಷಣಗಳನ್ನು ಹೀಗೆ ಹೇಳಬಹುದು. ಅನುಭವದ ಗಾಢ ಸೂಕ್ಷ್ಮತೆಯೊಡನೆ ಉಕ್ತಿಯ ಸಹ ಜತೆ, ಅಲಂಕಾರ ರಮ್ಯತೆ; ಲೌಕಿಕ ದೃಷ್ಟಾಂತಗಳ ಗಾದೆಮಾತು ಒಳ್ಳೆ ನುಡಿಗಳ ಮಾಲಿಕೆ; ಇಷ್ಟದೇವತೆಯಿದಿರಿನಲ್ಲಿ ಭಕ್ತಿ ನಮ್ರವಾದ, ಪ್ರಾಂಜಲ ವಾದ ಅಂತರಂಗ ನಿರೀಕ್ಷಣೆ; ಸ್ವಂತದ ಕಾಯಕಗಳಿಗೆ ಅನುಗುಣವಾದ ಹೋಲಿಕೆಗಳಿಂದ ಪರಮಾರ್ಥದ ವಿವರಣೆ; ಸ್ವಾಭಾವಿಕ ಲಾಲಿತ್ಯ-ಮಾರ್ದವ; ಕ್ವಚಿತ್ತಾದ ಪೌರುಷ, ಸಾತ್ವಿಕ ಸಂತಾಪ, ಕಟು ಟೀಕೆ. ಹಳಗನ್ನಡವು ಹೊಸಗನ್ನಡವಾಗಿ ರೂಪಾಂತರವಾಗುತ್ತಿರುವ ಸಂಧಿಕಾಲದ ನಡುಗನ್ನಡ ಶೈಲಿ ಮಾರ್ಗ ದೇಸಿಗಳ ಸಮನ್ವಯ ಪ್ರಯೋಗೀಕತೆಯ ಮೂಲಕ ಹಳಗನ್ನ ಡಕ್ಕೆ ಒಪ್ಪದ ವ್ಯಾಕರಣ ದೋಷಗಳು, ಹಳಗನ್ನಡ ಹೊಸಗನ್ನಡಗಳೆರಡ ರಲ್ಲಿಯೂ ಕಾಣದೊರೆಯದ ಹಲಕೆಲವು ನಡುಗನ್ನಡ ಪದಗಳು ಇಲ್ಲಿವೆ.

ವಚನ ಸಾಹಿತ್ಯವು ಸಾಹಿತ್ಯವೂ ಹೌದು, ಶಾಸ್ತ್ರವೂ ಹೌದು. ಇಷ್ಟೇ ಅಲ್ಲ ಇದು ಮೇಲ್ತರಗತಿಯ ಸಾಹಿತ್ಯ. ವಚನಗಳಲ್ಲಿ ರಸಭಾವ ಅಲಂಕಾರ ಗಳೂ ಉದಾತ್ತ ಧ್ಯೇಯವೂ ಇರುವದರಿಂದ ಇವು ಉತ್ತಮ ಸಾಹಿತ್ಯವಿಷ್ಟೇ ಅಲ್ಲ ವಚನಗಳು ಕನ್ನಡ ಸಾಹಿತ್ಯದ ಉಪನಿಷತ್ತುಗಳು ಎಂಬ ಅಗ್ಗಳಿಕೆಗೆ ಪಾತ್ರವಾಗಿವೆ. ಇಲ್ಲಿ ಸಾಹಿತ್ಯವೇ ದರ್ಶನ, ದರ್ಶನವೇ ಸಾಹಿತ್ಯ; ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ.

ಉತ್ತಮ ಸಾಹಿತ್ಯಕ್ಕೆ ಅವಶ್ಯವಾದ ವ್ಯಕ್ತಿತ್ವ ಮಹಿಮೆ, ಜೀವನ ಸಿದ್ಧಿ ವಚನಕಾರರಲ್ಲಿರುವದೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಉಪನಿಷತ್ತುಗಳಿಗೆ ಹೋಲುವ ಉಕ್ತಿಗಳು ವಚನಗಳಲ್ಲಿ ಬಂದಿವೆ ಮಾತ್ರವೇ ಅಲ್ಲ, ಉಪನಿಷತ್ಕಾರರ

ಆತ್ಮಾನುಭವ, ದೃಷ್ಟಿ ವೈಶಾಲ್ಯ, ಸತ್ಯ ಧರ್ಮ ದರ್ಶನ ವಚನಕಾರರಲ್ಲಿವೆ. ಜೊತೆಗೆ ಉಪನಿಷತ್ತುಗಳಲ್ಲಿ ಇಲ್ಲದ ತತ್ವಪ್ರಣಾಳಿ, ಸಮಾಜ ನೀತಿ, ಆಚಾರ ಧರ್ಮಗಳೂ ಅವುಗಳನ್ನು ಕನ್ನಡಿಸುವದಕ್ಕೆ ಹೊರಟ ಭಾಷೆಯ ಜನಸಮ್ಮುಖ ದರ್ಶನವೂ ಸ್ವರೂಪಗಳೂ ವಚನಗಳಲ್ಲಿವೆ. 'ಜನತಾಂತರ್ದೃಷ್ಟಿ' ಎಂಬ ಸಾಹಿತ್ಯದ ಸಾಮಾನ್ಯ ಲಕ್ಷಣವು ವಚನ ವಾಙ್ಮಯಕ್ಕೆ ವಿಶೇಷವಾಗಿ ಸರಿ ಹೋಗುತ್ತದೆ.

ಪ್ರಶ್ನೆ ೧೪— ಟಿಪ್ಪಣಿ ಬರೆಯಿರಿ– (ಅ) ಅಲ್ಲಮ ಪ್ರಭು, (ಆ) ಬಸ ವೇಶ್ವರ, (ಇ) ಚೆನ್ನ ಬಸವೇಶ್ವರ, (ಈ) ಅಕ್ಕಮಹಾದೇವಿ, (ಉ) ಸಿದ್ಧರಾಮ (ಊ) ಶೂನ್ಯ ಸಂಪಾದನೆ.

ಉತ್ತರ (ಅ) ಅಲ್ಲಮ ಪ್ರಭು— ಅಲ್ಲಮ ಪ್ರಭು ಅಥವಾ ಪ್ರಭು ದೇವರು ಶರಣರಲ್ಲಿಯೇ ಶ್ರೇಷ್ಠ ವ್ಯಕ್ತಿಯಾಗಿದ್ದನು. ಅವನ ಊರು ಬಳ್ಳಿಗಾವೆ. ವೈರಾಗ್ಯ ಜ್ಞಾನಗಳಲ್ಲಿ ಪರಿಣಿತ ಪ್ರಜ್ಞನಾಗಿ, ಶಿವಾದ್ವೈತದ ಮೂರ್ತಿಯಾಗಿ ಕಂಗೊಳಿಸಿದನು. ಸಾಧಕ ಸಿದ್ಧರೆಲ್ಲರ ಮೇಲೆ ತನ್ನ ಪ್ರಭಾವವನ್ನು ಬೀರಿದನು. ಮತ ಪಂಥಗಳ ಬಲೆಗೆಬೀಳದಾದನು. ವೀರಶೈವ ಸಿದ್ಧಾಂತದ ಮೂರ್ತಸ್ವರೂಪ ನಾಗಿ ಶರಣ ಮಾರ್ಗಕ್ಕೆ ಗುರುವಾದನು. ಅನುಭವಮಂಟಪದ ಅಧ್ಯಕ್ಷನಾದನು ಶೂನ್ಯಸಿಂಹಾಸನದ ದೊರೆಯಾದನು ಎಲ್ಲರ ಗುಣಗಳನ್ನು ಮೆಚ್ಚಿದನು ಅವ ಗುಣಗಳನ್ನು ಕಿಡೆನುಡಿದನು. ಅವನದು ನಿಷ್ಠುರ ವಿಮರ್ಶೆ ಆದರೆ ಆ ನಿಷ್ಠುರ ತೆಯ ಹಿಂದೆ ಜ್ಞಾನಿಯು, ಸತ್ಯಪ್ರೇಮಿಯು ಸಾತ್ವಿಕ ದೃಷ್ಟಿಯಿದ್ದುದರಿಂದಲೇ ಎಲ್ಲರೂ ಅವನಿಗೆ ತಲೆಬಾಗುತ್ತಿದ್ದರು. ಪ್ರಭುದೇವರ ವ್ಯಕ್ತಿತ್ವ ಮತ್ತು ವಚನಗಳು ಕನ್ನಡ ವಾಙ್ಮಯಕ್ಕೆ ಇಷ್ಟೇ ಅಲ್ಲದೆ ಭಾರತೀಯ ಹಾಗೂ ಜಾಗ ತಿಕ ಸಾಹಿತ್ಯಕ್ಕೆ ಅಸಾಧಾರಣವಾದ ತೇಜಸ್ಸುಳ್ಳ ಕಾಣಿಕೆಯಾಗಿರುತ್ತವೆ.

ಅವನ ವಚನಗಳು ಎಂಥವರಿಗೂ ಸುಲಭ ಗ್ರಾಹ್ಯವಲ್ಲ ಅನುಭವದ ಆಳದಿಂದ, ಜ್ಞಾನದ ಶಿಖರದಿಂದ ಬಂದವುಗಳವು. ಇಲ್ಲಿ ಮಾತೆಂಬುದು ಜ್ಯೋತಿ ರ್ಲಿಂಗ'ವಾಗಿದೆ. ಬೆಡಗಿನ ನುಡಿ, ಬೆಡಗಿನ ವಚನಗಳಲ್ಲಿ ಅನುಭಾವದ ನಿರಾ ಕಾರವನ್ನು ಸಿಲುಕುವಷ್ಟು ಮಾತಿನಲ್ಲಿ ಸಾಕಾರಗೊಳಿಸಿದ್ದಾರೆ ಅಲ್ಲಮಪ್ರಭು; 'ಅರಿಯಬಾರದ ಘನವನರಿದವರು ಅರಿಯದಂತಿರ್ಪರು ಗುಹೇಶ್ವರಾ', 'ಘನವ ಮನಕಂಡು ಅದನೊಂದು ಮಾತಿಂಗೆ ತಂದು ನುಡಿದರೆ ಅದಕ್ಕದೇ ಕಿಂದು

ನೋಡಾ', 'ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ....' 'ಬೆಟ್ಟಕ್ಕೆ ಚಳಿಯಾದಡೆ ಏನು ಹೊದ್ದಿಸುವರಯ್ಯಾ. ಬಯಲು ಬತ್ತಲೆ ಇದ್ದರೆ ಏನ ನುಡಿಸುವರಯ್ಯಾ, ಭಕ್ತನು ಭವಿಯಾದಡೆ ಅದನೇನು ನಮಿಸುವೆನಯ್ಯಾ ಗುಹೇಶ್ವರಾ', ಮುಗಿಲ ಬಣ್ಣದ ಪಕ್ಷಿ, ಮಗನ ಕೈಯರಗಿಳಿ ಗಗನಕೋಲಂಬಿನಲ್ಲಿ ಸ್ವಪ್ನದ ನಿಲವನು ತಗೆದೆಚ್ಚವನಾರೋ', ಅಂಬರದೊಳಗಾಡುವ ತುಂಬಿಯ ಬಿಂಬದ ಕಂಬನಿಯೊಳಗಣ ರತ್ನದ ಬಯಕೆಯ ಆದ್ಯಂತ ಮನೇ ನೆಂಬೆನಯ್ಯಾ', ಇತ್ಯಾದಿ ವಚನಗಳಲ್ಲಿ ಪ್ರಭುವಿನ ಅನೂನ ಉಜ್ವಲ ವ್ಯಕ್ತಿತ್ವವು ಎದ್ದು ಬರುತ್ತದೆ. ಇದೆಲ್ಲ ಜ್ಞಾನಿಯ ಅಧಿಕಾರವಾಣಿ; ಇದರಲ್ಲಿ ಹೋರಾಟವಿಲ್ಲ. ಏಳು ಬೀಳುಗಳಿಲ್ಲ. ಇಲ್ಲಿ ಆತ್ಮ ವಿಶ್ವಾಸವುಳ್ಳ ವಿನಯವಿದೆ, ಉಪಕಾರ ಭಾವವಿದೆ.

'ತನ್ನ ತಾನರಿದವಂಗೆ ಅರಿವೆ ಗುರು', 'ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ...', ಲಿಂಗಾನುಭಾವಿಗಳ ಸಂಗದಿಂದಾನು ಕಣ್ತೆರೆದೆನು....', 'ಕಾಮವಸುಟ್ಟು ಹೋಮವನರುಹಿ...', 'ನಾನು ಘನ, ತಾನು ಘನವೆಂಬ ಹಿರಿಯರುಂಟೆ ?....', 'ಲೋಕ ನಚ್ಚು ಮೆಚ್ಚು ಬಿಟ್ಟು ನಿಶ್ಚಿಂತವಾಯಿತ್ತು ...', 'ನಿಜವನರಿದ ನಿಶ್ಚಿಂತನೇ, ಮರವಗೆಲಿದ ಮಹಂತನೇ....' ಮುಂತಾದ ವಚನಗಳಲ್ಲಿ ವಿಶಾಲ ವ್ಯಕ್ತಿತ್ವದ ಪಡಿನೆಳಲನ್ನು ಕಾಣಬಹುದು.

ಪ್ರಭುದೇವರು ಹೋದ ಹೋದಲ್ಲಿ ಜ್ಞಾನ ಪ್ರಭೆಯನ್ನು ಬೀರಿದರು. ಅವನ ಲೋಕ ವಿಮರ್ಶೆ, ಕಟುಟೀಕೆಗಳು ಅಂತಿಮ ಸತ್ಯದ ಸವಿಯನ್ನು ಉಣ್ಣಿಸುವ ಕಹಿ ಗುಳಿಗೆಗಳು. ಇದಕ್ಕೆ ಉದಾಹರಣೆಯಾಗಿ, 'ಆಚಾರವ ನರಿಯದೆ ...', 'ಒಳಗೆ ತೊಳೆಯಲರಿಯದೆ....', 'ಮರ್ತ್ಯಲೋಕದ ಮಾನವರು....', 'ಕಲ್ಲು ದೇವರೆಂದು ಪೂಜಿಸುವರು....'ಮುಂತಾದ ವಚನಗಳನ್ನು ನೋಡಬೇಕು.

ಹೀಗೆ ಇಲ್ಲಿ ಆತ್ಮೋದ್ಧಾರಕ್ಕೆ ಪ್ರೇರಕವಾದ ವಚನಗಳಿವೆ. ಜೊತೆಗೆ ನಿಜವಾದ ಭಕ್ತಿ - ಜ್ಞಾನ - ಮುಕ್ತಿಗಳನ್ನು ಕುರಿತು ಸಹಜ ಉಕ್ತಿಗಳಿವೆ. ಚುಚ್ಚಿಯೂ ಮೆಚ್ಚಾಗುವ ಇಲ್ಲಿಯ ವಿಡಂಬನೆಯ ರೀತಿ ವಿಲಕ್ಷಣವಾಗಿದೆ.

ಪ್ರಭುದೇವರು ಸಾಕ್ಷಾತ್ ಶಿವನ ಅವತಾರವೆಂದೇತಿಳಿಯಲಾಗಿದೆ. ಚಾಮರನು ಚಿತ್ರಿಸಿದ ಅಲ್ಲಮನ ಚಿತ್ರ ಅನುಪಮವಾಗಿದೆ ಭವ್ಯವಾಗಿದೆ. ಶರಣರ ನಿಲ

ವನ್ನರಿತು, ಮೆಚ್ಚಿ ಇಲ್ಲವೇ ಜಾಗೃತಗೊಳಿಸಿ ಅವರಿಗೆ ಐಕ್ಯಪದವಿಯನ್ನು ಕರುಣಿಸಿದ ಜ್ಞಾನಮೂರ್ತಿಯವನು. ಶರಣ ರತ್ನ ಮಾಲಿಕೆಯಲ್ಲಿ ಶಿರೋರತ್ನವಾಗಿ ರಾರಾಜಿಸಿದನು.

(ಆ) ಬಸವಣ್ಣನವರು— ಇವನು ಭಕ್ತಕುಲ ತಿಲಕನು. ಧರ್ಮ ಹಾಗೂ ಸಾಹಿತ್ಯಗಳಲ್ಲಿ ಕ್ರಾಂತಿಕಾರನಿದ್ದಂತೆ ಸಂಘಟನಾ ಚತುರನೂ ಆಗಿದ್ದನು. ಅವನದು ಘನವಾದ ವ್ಯಕ್ತಿತ್ವ. ಉದಾತ್ತವಾದ ಮಾನವ ಹೃದಯ, ಅವನ ಆರ್ತ ಭಕ್ತಿ, ಕರ್ಮ ಜೀವನದ ತೊಡಕು, ಅಂತರಂಗದ ತುಮುಲ, ಪ್ರತಿಕೂಲ ಸಮಾಜದೊಡನೆ ಅವನು ನಡೆಯಿಸಿದ ಕಣಸು, ಭಕ್ತರಲ್ಲಿ ತಾರತಮ್ಯವನ್ನರಿಯದ ದಾಸೋಹಂ ಭಾವದ ಭಕ್ತಿನಿರೂಪಣೆ ಇದಕ್ಕೂ ಹೆಚ್ಚಾಗಿ ವಿಕಾಸ ಶೀಲವಾದ ಅವನ ಮಹಾವ್ಯಕ್ತಿತ್ವವನ್ನು ಅವನ ವಚನಗಳಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳಬಹುದು.

ಬಸವಣ್ಣನವರ ವಚನಗಳಲ್ಲಿ ನಿಸ್ಸಂಕೋಚವಾದ ಆತ್ಮ ನಿರೀಕ್ಷಣೆಯಿದೆ, ಪ್ರಬಲವಾದ ಮನೋಯುದ್ಧದ ಚಿತ್ರಣವಿದೆ. ಪರಿಣತ ಭಕ್ತಿಯ ಸಮರ್ಪಣ ಭಾವ, ನಿರ್ಭೀತಿ, ನಿಶ್ಚಿಂತತೆಯಿದೆ, ಭಕ್ತಿಪ್ರೇರಿತವಾಗಿ ನಿರ್ಭಯ ವೃತ್ತಿಯಿದೆ, ಸಮಾಜದ ನಿರ್ದಾಕ್ಷಿಣ್ಯವಾದ ಕುಂದು ಕೊರತೆಗಳ ವಿಡಂಬನೆಯಿದೆ, ಸನ್ಮಾರ್ಗ ದ್ಯೋತಕವಾದ ಉಪದೇಶವಿದೆ, ಉಪದೇಶ ಪರವಚನಗಳಲ್ಲಿ ಸರ್ವ ಸಮಾನತೆ, ಭೂತದಯ, ನೀತಿನಿಷ್ಠೆಗಳ ಸಂಗಮವಿದೆ.

ಸಾಹಿತ್ಯ ಸತ್ವದ ದೃಷ್ಟಿಯಿಂದ ವಚನಗಳು ಭಕ್ತಿಭಾವದ ಪರಿಣತಿಯನ್ನು ರಸರೂಪಕ್ಕೆ ಇಳಿಸಿವೆ. ಇವುಗಳ ಸಹಜ ಸ್ಫೂರ್ತವಾದ ಚಿತ್ರ ಶಕ್ತಿ, ಶಬ್ದ ಶಕ್ತಿ ಅಚ್ಚರಿಗೊಳಿಸುವಂಥವಿವೆ. ಜನಜೀವನವಿಂದೆತ್ತಿದ ದೃಷ್ಟಾಂತಗಳು, ಗಾದೆಗಳು, ಪಡೆಮಾತುಗಳು. ಸೂರೆಯಾಗಿವೆ; ಅಧ್ಯಾತ್ಮ ನೀತಿ ಇವುಗಳ ಸೂಕ್ಷ್ಮವೆಲ್ಲ ವಚನಗಳ ಮುಖಾಂತರ ಸುಲಭ ವೇದ್ಯವಾಗಿದೆ. ಆಧ್ಯಾತ್ಮಿಕ ಭಾವಗೀತೆಯ ಸತ್ವ ಇಲ್ಲಿ ಸುಸ್ಪಷ್ಟವಾಗಿದೆ. ಉಪಮೆ, ರೂಪಕ ಮೊದಲಾದ ಅಲಂಕಾರಗಳು ಮನಸ್ಸನ್ನು ಸೂರೆಗೊಳ್ಳುತ್ತದೆ. ಭಾಷೆಗೆ ಬೆಡಗು ಹೆಚ್ಚಿದೆ. ಕಿರಿದು ಮಾತುಗಳಲ್ಲಿ ಹಿರಿಯ ಅರ್ಥವನ್ನು ಹಿಡಿದಿಡಲಾಗಿದೆ. ನಡುಗನ್ನಡ ಶೈಲಿ ಇಲ್ಲಿ ಫಲಿಸಿದೆ. ಕನ್ನಡತನ ಮೆರೆದಿದೆ.

'ಬೆದಕದಿರು. ಬೆದಕಿದರೆ ಹುರುಳಿಲ್ಲ.... ಎನ್ನುವ ಚಿತ್ತವು ಅತ್ತಿಯಹಣ್ಣು ನೋಡಯ್ಯಾ....', 'ಬೆಳೆವ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ ತಲೆ ಯಲೀಯದು, ಎಚ್ಚರಲೀಯದು.', '....ಕೆಸರಿನಲ್ಲಿ ಬಿದ್ದ ಪಶುವಿನಂತೆ ಅನು ದೆಸೆದೆಸೆಗೆ ಬಾಯಿಬಿಡುತ್ತಿದ್ದೆನಯ್ಯಾ' ಮುಂತಾದ ವಚನಗಳಲ್ಲಿ ಅವರ ಆತ್ಮದ ತುಮುಲ ವ್ಯಕ್ತವಾಗುತ್ತದೆ. 'ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆಯು ಕೆರೆತುಂಬಿದಂತಯ್ಯಾ', ವಚನದಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ' 'ಎನ್ನ ಕಾಯುವವರಂಗಗೆಡಿಸು ಮಾಡ ಯ್ಯಾ....' ಮೊದಲಾದ ವಚನಗಳು ಭಕ್ತಿಯ ಭರದಿಂದ ಕೂಡಿ ವಚನ ಸಾಹಿತ್ಯ ಹಿರಿಮೆ ನಿದರ್ಶನವಾಗಿವೆ. ನಾಳೆ ಬಪ್ಪುದು ನಮಗಿಂದೇ ಬರಲಿ....', 'ಜೋಳವಾಳಿಯವ ನಾನಲ್ಲವಯ್ಯಾ', ಮೊದಲಾದ ವಚನಗಳಲ್ಲಿ ಭಕ್ತಿಪ್ರೇರಿತ ನಿರ್ಭಯತೆಯಿದೆ. 'ಆಲಿಕಲ್ಲಹರಳಿನಂತೆ,ಅರಗಿನ ಪುತ್ಥಳಿಯಂತೆ, ತನುಕರಗಿ ನೆರೆ ವಸುಖವ ನಾನೇನಂಬೆ, 'ಘನ ಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿ ದ್ದೆನಯ್ಯಾ' ಇಲ್ಲಿ ಅವನ ಘಟ್ಸ್ಥಳ ಜೀವನದ ಕುರುಹಿದೆ. 'ಭಕ್ತರ ಕಂಡರೆ ಬೋಳರಪ್ಪಿರಯ್ಯಾ!', 'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ....', ಕಲ್ಲನಾಗರ ಕಂಡರೆ ಹಾಲನೆರೆ ಎಂಬರು....', 'ಕೊಲ್ಲುವವನೆ ಮಾದಿಗ....', ಮೊದಲಾದ ವಚನಗಳಲ್ಲಿ ಸಮಾಜ ವ್ಯವಸ್ಥೆಯ ಸೂತ್ರಗಳಿವೆ. ಇಲ್ಲಿ ಬರುವ ವಿಡಂಬನೆ, ಉಪದೇಶಗಳು ಸಾಹಿತ್ಯ ಗುಣದಿಂದ ಕೂಡಿವೆ.

ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ........' 'ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟ ಮಯ್ಯಾ !....' 'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಲೋ: 'ಸತ್ಯವ ನುಡಿವುದೇ ದೇವಲೋಕ...' 'ದಯವಿಲ್ಲದ ಧರ್ಮವಾವುದಯ್ಯಾ?.... ದಯವೇ ಧರ್ಮದ ಮೂಲವಯ್ಯಾ' ಮುಂತಾದ ವಚನಗಳಲ್ಲಿ ಕಳಕಳಿಯಿದೆ, ಸನ್ಮಾರ್ಗ ತೋರಿಸುವ ನವೀನ ರೀತಿಯಿದೆ. 'ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಬಲುಹಾಗಬಲ್ಲುದೆ ? ಸಗಣಿಯ ಬೆನಕಂಗೆ ಸಂಪಿಗೆಯರಳಿ ನಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ', ಇಂಥ ವಚನ

ಗಳಲ್ಲಿ ಲೌಕಿಕ ದೃಷ್ಟಾಂತವನ್ನೂ ಸಹಜ ಪ್ರಾಸದ ಲಾಲಿತ್ಯವನ್ನೂ ಕಾಣ ಬಹುದು. ಇದು ಕಾವ್ಯಶೀಲವಾದ ಗದ್ಯ. ಕೊನೆಗೆ, 'ಕರಿಘನ, ಅಂಕುಶ ಕಿರಿದೆನ್ನಬಹುದೇ?....' ಮುಂತಾದ ವಚನಗಳ ಬೆಡಗಿನ ವಚನದ ಕ್ಲಿಷ್ಟತೆ ತೋರದೆ. ಒಟ್ಟನಲ್ಲಿ ಬಸವೇಶ್ವರನ ವಚನಗಳು ಪ್ರಸನ್ನ ಲಲಿತವಾಗಿವೆ, ಹೃದಯಸ್ಪರ್ಶಿಯಾಗಿವೆ. ಅವು ವೀರಶೈವ ಧರ್ಮದ ಹಾಗೂ ವಿಶ್ವಧರ್ಮದ ಕನ್ನಡಿಯಾಗಿದ್ದು ಕನ್ನಡ ಸಾಹಿತ್ಯಕ್ಕೆ ವಿಶೇಷ ಕಾಂತಿಯನ್ನುಂಟು ಮಾಡಿವೆ.

✓ಇ) ಚೆನ್ನಬಸವೇಶ್ವರ — ಇವನು ಬಸವೇಶ್ವರನ ಸೋದರಳಿಯ, ಮಹಾಜ್ಞಾನಿ ಎಂದು ಅಲ್ಲಮ ಪ್ರಭುವಿನಿಂದ ಹೊಗಳಿಸಿಕೊಂಡ ಶರಣ ಜ್ಞಾನನಿಷ್ಠ, ಖಂಡಿತ ವಾದಗಳಲ್ಲಿ ಇವನು ಅಲ್ಲಮನನ್ನು ಹೋಲುತ್ತಾನೆ. ಕ್ರಿಯಾಜ್ಞಾನಿ, ಇವನು ಷಟ್ಸ್ಥಲ ಸಿದ್ಧಾಂತಕ್ಕೆ ಸರಿಯಾದ ತಳಹದಿಯನ್ನು ಹಾಕಿ ಅದರ ಸೃಷ್ಟಿಶಾಸ್ತ್ರ ಮನಶಾಸ್ತ್ರಗಳನ್ನು ವಿಸ್ತಾರವಾಗಿ ವರ್ಣಿಸಿರು ವದಕ್ಕೆ 'ಕರುಣ ಹಸುಗೆ' ಸಾಕ್ಷಿಯಾಗಿದೆ.

ಇವನ ವಚನಗಳಲ್ಲಿ ಮತ ಪ್ರಸಾರದ ದೃಷ್ಟಿಯಿರುವದರಿಂದ ಅವುಗಳ ಶೈಲಿಯಲ್ಲಿ ಹೃದ್ಯತೆ ಕಡಿಮೆಯಾಗಿದೆ. ಪ್ರಚಾರಕ ಆವೇಶವು ಅಲ್ಲಲ್ಲಿ ಅನ್ಯ ದೈವನಿಂದೆಯಲ್ಲಿಯೂ ಡಾಂಭೀಕರ ನಿಷ್ಠೆಯ ಟೀಕೆಯಲ್ಲಿಯೂ ತಲೆದೋರಿದೆ. ಆದರೂ ಸಾಹಿತ್ಯ ತತ್ವವೇನೂ ಕಡಿಮೆಯಾಗಿಲ್ಲ.

'ಬಟ್ಟ ಬಯಲೆಲ್ಲ ಗಟ್ಟಿಗೊಂಡೊಡೆ ಸ್ವರ್ಗಮರ್ತ್ಯ ಪಾತಳಕ್ಕೆ ಠಾವಿ ನ್ನೆಲ್ಲಿಹುದೊ ? ಮೇಘ ಜಲವೆಲ್ಲ ಮುತ್ತಾದಡೆ, ಸಪ್ತ ಸಾಗರಂಗಳಿಗೆ ಉದಕ ವಿನ್ನೆಲ್ಲಿಹುದೋ ?' 'ಕಬ್ಬುನದ ಶುನಕನ ತಂದು ಪರುಷವ ಮುಟ್ಟಿಸಲೊಡನೆ ಹೊನ್ನ ಶುನಕನಪ್ಪುದಲ್ಲದೆ ಪರುಷವಾಗಲರಿಯದು ನೋಡಾ, 'ಒಡಲು ಗೊಂಡು ಒಡಲು ವಿಡಿಯದೆ ಒಡಲಿಲ್ಲದ ನಿಜವ ಬೆರೆಸಲವೋ' ಎಂಬೀ ಮೊದ ಲಾದ ವಚನಗಳಲ್ಲಿ ಸಾಹಿತ್ಯ ಸತ್ವವನ್ನೂ ಬೆರಗುಗೊಳಿಸುವ ಸೂತ್ರ ಬದ್ಧತೆ ಯನ್ನೂ ಕಾಣಬಹುದು.

ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳಿದಂತೆ 'ಪಾದರಸ ದಂತೆ, ಆತನ ಪ್ರತಿಭೆ. ಆದರೂ ಬಸವೇಶ್ವರ, ಪ್ರಭುದೇವರ ವಚನಗಳಲ್ಲಿಯ ಸಾಹಿತ್ಯದ ಘನತೆ ಚೆನ್ನಬಸವೇಶ್ವರನಲ್ಲಿ ಗೋಚರವಾದುದು ಕಡಿಮೆ.

Imp

ಈ) ಅಕ್ಕಮಹಾದೇವಿ— ಮಹಾದೇವಿಯಕ್ಕನು ವ್ಯಕ್ತಿ ವೈಶಿಷ್ಟ್ಯದಿಂದಲೂ ವಚನ ಮಹಿಮೆಯಿಂದಲೂ ಮೇಲಾದ ಶಿವಶರಣೆ. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಅವಳೇ ಮೊದಲನೆಯ ಕವಿಯತ್ರಿ. ಆಧ್ಯಾತ್ಮ ಮತ್ತು ಗದ್ಯ ಕವಿತ್ವಗಳ ಸಮ್ಮಿಳನಕ್ಕಾದರೂ ಮೊದಲಗಿತ್ತಿ. ಸಾಂಪ್ರದಾಯಿಕ ಸಮಾಜದ ಸಂಕೋಲೆಗಳನ್ನು ಮುರಿದೊಗೆದು, ಲಗ್ನ ಸಂಸ್ಥೆಗಳನ್ನು ಅತಿಗಳೆದು ಚೆನ್ನಮಲ್ಲಿಕಾರ್ಜುನನೆಂಬ ಲೋಕಪತಿಯನ್ನೇ ಪತಿಯಾಗಿ ವರಿಸಿದಳು. ಈ ಪಥದಲ್ಲಿ ಅವಳು ಮಾಡಿದ ಉಗ್ರಸಾಧನೆ, ಪಡೆದ ಸಿದ್ಧಿ ಆಶ್ಚರ್ಯಕರವಾಗಿದೆ.

'ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಮಾಡಿ ತನ್ನ ನೂಲು ತನ್ನ ಸುತ್ತಿಸಾವಂತೆ....', 'ಕಳವಳದ ಮನವು ತಲೆಗೆಳಗಾದುದವ್ವಾ!....' 'ಅಳಿ ಸಂಕುಳವೇ, ಮಾಮರವೇ, ಬೆಳದಿಂಗಳೇ...', ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಸಿದ್ದೆ ನೋಡಾ...', 'ಜಲದ ಮಂಟಪದ ಮೇಲೆ ಉರಿಯ ಚಪ್ಪರವನ್ನಿಕ್ಕಿ....', 'ಸಾವಿಲ್ಲದ, ಕೇಡಿಲ್ಲದ, ಚಲುವಂಗಾನೊಲಿದೆ ಅವ್ವಾ....' ಈ ಮೊದಲಾದ ವಚನಗಳಲ್ಲಿ ಅವಳ ಸಂಸಾರ ಹೇಯು, ಸತಿಪತಿ ಭಾವವನ್ನು ತಿಳಿಯಬಹುದಲ್ಲದೆ ಆಧ್ಯಾತ್ಮ ಶೃಂಗಾರದ ಅಸದೃಶವಾದ ಸ್ಥಾಯಿ ಭಾವವು ಆ ಸತ್ತ ಚಿತ್ತಕ್ಕೆ ನವೀನ ರಸದ ಸವಿಯನ್ನುಣಿಸುತ್ತದೆ.

ಅಕ್ಕನ ಜ್ಞಾನ ಭಕ್ತಿಗಳ ಬಲದಿಂದ ಉಂಟಾದ ನಿಶ್ಚಿಂತೆ, ನಿರ್ಭೀತಿ, ಮಾನಸಿಕ ಧೈರ್ಯಗಳು ವಿಲಕ್ಷಣವಾದುವು. ಅವುಗಳಿಂದ ದೊರೆಯುವ ಸ್ಫೂರ್ತಿ ಮೇಲಾದುದು. 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯಾ' ಮುಂತಾದ ವಚನಗಳು ಚಿರಂತನ ಸ್ಫೂರ್ತಿಯ ಚಿಲುಮೆಯಾಗಿವೆ. 'ಹಸಿವಾದೊಡೆ ಭಿಕ್ಷಾನ್ನಗಳುಂಟು....' ಮೊದಲಾದ ವಚನಗಳಲ್ಲಿ ಮಹಾದೇವಿಯಕ್ಕನ ಧೈರ್ಯವನ್ನು ಕಾಣಬಹುದು.

ಸಾಹಿತ್ಯ ಗುಣವು ಒಮ್ಮೊಮ್ಮೆ ವ್ಯಕ್ತಿತ್ವದ ಘನತೆಯಿಂದ ಉಂಟಾದುದು. ಅಕ್ಕನಲ್ಲಿ ಸಮಾಜ ವಿಮರ್ಶೆ, ಬೋಧನೆಯ ವಚನಗಳು ಹೆಚ್ಚಾಗಿಲ್ಲ. ಇದ್ದವುಗಳಲ್ಲಿ ಶರಣ ಮಾರ್ಗದ ಸುವಿಶಾಲ ದೃಷ್ಟಿ, ಸ್ಪಷ್ಟವಾದ ಮಾತುಗಾರಿಕೆ ತೋರಿಬರುತ್ತವೆ.

ವಚನಗಳಲ್ಲದೆ ಅವಳಿಂದ ರಚಿತವಾದ 'ಯೋಗಾಂಗ ತ್ರಿವಿಧಿ'ಯಿಂದ ಅವಳ ಜೀವನ ಚರಿತ್ರೆಯು ಅವರಿಗೆ ಸಹಾಯಕವಾದ ಸಾಮಗ್ರಿಯಿದೆ. ಇದು

ಚಿಕ್ಕದಾದರೂ ಅಕ್ಕನ ಅನುಭಾವ ಸಂಪತ್ತಿಯನ್ನು ಸಹಜ ಸಾಹಿತ್ಯಸೌಂದರ್ಯ ತಂದ ಚೆಲುವಾದ ಕೃತಿ.

ಹರಿಹರ

(ಉ) ಸಿದ್ಧರಾಮ— ಸಿದ್ಧರಾಮನು ಕರ್ಮಯೋಗಿ, ಸೊನ್ನಲಾಪುರವು ಇವನ ಕಾರ್ಯ ರಂಗ. ಯೋಗಿಯಾಗಿದ್ದರೂ ಕೆರೆ, ಗುಡಿ ಮೊದಲಾದವುಗಳನ್ನು ಕಟ್ಟುವಲ್ಲಿ ನಿರತನಾದ ಕರ್ಮಯೋಗಿಯಾಗಿದ್ದನು. ಅಲ್ಲಮ ಪ್ರಭುವು ಅವನನ್ನು ಜಾಗೃತಗೊಳಿಸಿ ಬಸವಣ್ಣನ ಮಹಮನೆಗೆ ಕರೆದುಕೊಂಡು ಹೋದುದು ಜ್ಞಾನವು ಕರ್ಮವನ್ನು ಭಕ್ತಿಯ ಬಳಿ ಒಯ್ದುದ್ದರ ಸಂಕೇತ. ಭಕ್ತಿ ಜ್ಞಾನ ಕರ್ಮಗಳ ಈ ಸಂಯೋಜನೆಯೇ ವೀರಶೈವ ಸಾಂಪ್ರದಾಯದ ಘನತೆಗೆ ಮಾರ್ಗ ಸುಗಮವಾಯಿತು.

ಸಿದ್ಧರಾಮನ ವ್ಯಕ್ತಿತ್ವದ ಘನತೆಯನ್ನು ಅವನ ವಚನಗಳಿಂದ ಕಂಡು ಕೊಳ್ಳಬಹುದು. 'ಭಕ್ತನಾದರೆ ಬಸವಣ್ಣನಾಗಬೇಕು. ಜಂಗಮನಾದರೆ ಪ್ರಭುವಿನಂತಾಗಬೇಕು. ಭೋಗಿಯಾದರೆ ನಮ್ಮ ಗುರುಚನ್ನಬಸವಣ್ಣನಂತಾಗಬೇಕು. ಯೋಗಿಯಾದರೆ ನನ್ನಂತಾಗಬೇಕು' ಎಂಬ ವಚನದಲ್ಲಿ ಇತರರ ಹಾಗೂ ತನ್ನ ಯೋಗ್ಯತೆಯ ಪ್ರಜ್ಞೆ ಅವನಿಗೆ ಇದ್ದಿತೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

'ಕಲ್ಲಿನಲ್ಲಿ ವಲ್ಲಭನಿದ್ದಾನೆಂದು ಅಲ್ಲಾಡುತ್ತಾರೆ ನೋಡಾ ಅಲ್ಲಯ್ಯಾ....' 'ಕಾಯ ಧರಿಸಿದವ ನವನೀತ ರೋಮದಂತಿರಬೇಕು. ಮುಕುರದಲ್ಲಿಯ ಪ್ರತಿಬಿಂಬದಂತಿರಬೇಕು' ಎಂದು ಕರ್ಮಯೋಗದ ಕೌಶಲ್ಯವನ್ನು ಅರಿತುಕೊಂಡನು. ಅವನ ಚರಿತ್ರೆ, ಅನುಭವ ಸಂಪತ್ತಿ, ವ್ಯಕ್ತಿ ವಿಕಾಸ ಇವಕ್ಕೆ ನಿದರ್ಶನವಾಗಿ ಅವನ ವಚನಗಳು ಸಾಹಿತ್ಯ ಗುಣದಿಂದ ಕಂಗೊಳಿಸುತ್ತವೆ.

ಋ) ಶೂನ್ಯ ಸಂಪಾದನೆ— ಕವಿಚರಿತೆಕಾರರ ಪ್ರಕಾರ ಇದರ ಕರ್ತೃವು ಅಲ್ಲಮ ಪ್ರಭುವಾಗಿದ್ದಾನೆ. ಆದರೆ ಇದು ಪ್ರಭು ದೇವರು ಹಾಗೂ ಇತರ ಶಿವಶರಣ ಶರಣೆಯರ ನಡುವೆ ಅನುಭವ ಮಂಟಪದಲ್ಲಿ ನಡೆದ ಅನುಭಾವ ಗೋಷ್ಟಿಯ ಸಂಕಲನ ಗ್ರಂಥ, ಸಂವಾದ ಪದ್ಧತಿಯ ಚರಿತ್ರಾತ್ಮಕಗ್ರಂಥ ಇದರ ಸಂಪಾದಕರು ೧೫-೧೬ನೆಯ ಶತಮಾನದಲ್ಲಿದ್ದ ಗೂಳೂರು ಸಿದ್ಧವೀರಣಾಚಾರ್ಯರು, ಇದಲ್ಲದೆ ಇನ್ನೂ ನಾಲ್ವರು ಸಂಪಾದಿತ 'ಶೂನ್ಯ ಸಂಪಾದನೆ'

ಗಳು ಉಪಲಬ್ಧವಿದ್ದರೂ ಸಿದ್ಧವೀರಣಾಚಾರ್ಯರಿಂದ ಸಂಪಾದಿತವಾದುದು ಅಧಿಕೃತವೆಂದು ಪರಿಗಣಿಸಲಾಗಿವೆ.

ಶೂನ್ಯ ಸಂಪಾದನೆಯು ಅನುಭವ ಮಂಟಪದ ಸಮ್ಯಕ್ ಚಿತ್ರವನ್ನು ಒದಗಿಸುತ್ತದೆ. ಇಲ್ಲಿಯ ಪುಟಗಳನ್ನು ತಿರುವಿ ಹಾಕಿದರೆ ಆಯಾ ಶರಣ ಶರಣೆಯರ ಅಂತಸ್ತನ್ನು ಗುರುತಿಸಬಹುದಾಗಿದೆ. ಇಲ್ಲಿಯ ಸಂಪಾದನೆಯಲ್ಲಿ ನಾವಿನ್ಯವಿದೆ. ಸ್ವತಂತ್ರ ನಿರ್ಮಾಣವಿದೆ. ಇಲ್ಲಿ ಅಳವಡಿಸಲಾದ ವಚನಗಳಲ್ಲಿ ಕೆಲವಾದರೂ ಸಂಪಾದಕರಿಂದ ರಚಿಸಲ್ಪಟ್ಟಿರಲೂ ಬಹುದಾಗಿದೆ. ಇಲ್ಲಿ ದೊರೆಯುವ ಚಾರಿತ್ರಿಕ ಸಾಮಗ್ರಿಯು ಅಮೌಲ್ಯವಾಗಿದೆ. ಕನ್ನಡ ಸಾಹಿತ್ಯದಲ್ಲಿ ಇದು ಅಪೂರ್ವ ಗ್ರಂಥ.

ಪ್ರಭುದೇವರೇ ಈ ಗ್ರಂಥದಲ್ಲಿ ಕೇಂದ್ರ ವ್ಯಕ್ತಿ. ಅವನು ನಡೆಯಿಸಿದ ಸಂವಾದಗಳಲ್ಲಿ ಅವನ ಹಾಗೂ ಇತರ ಶಿವಶರಣ ಶರಣೆಯರ ಸಾಧನ ಸಿದ್ಧಿಗಳೂ ಮನೋಧರ್ಮಗಳೂ ಅಚ್ಚೊತ್ತಿದಂತೆ ಮೂಡಿರುತ್ತವೆ. ಇಲ್ಲಿಯ ಪ್ರಭುದೇವರ ವಚನಗಳನ್ನು ಕುರಿತು 'ಇಲ್ಲಿಯ ಕರ್ಕಶವಾದ ತರ್ಕ, ಸಹಜ ವಕ್ರವಾದ ಬೆಡಗು, ಹುಟ್ಟುಗನ್ನಡದ ವಿಡಾಯ್ತ, ಅಧ್ಯಾತ್ಮ ಸಾಹಸದ ಹಾಸ್ಯ, ಮಾತಿನ ಸುಳಿವುಗಳಲ್ಲಿ ಜ್ಯೋತಿಯ ಹೊಳಹನ್ನು ಹುಟ್ಟಿಸುವ ಶಿಲ್ಪಿ, 'ಸರಸ ಸಜ್ಜಿಕೆ, ಎಂದು ಶ್ರೀ ದ. ರಾ. ಬೇಂದ್ರೆಯವರು ಮಾಡಿದ ವರ್ಣನೆಯು ಗಮನೀಯವಾಗಿದೆ.

ಪ್ರಶ್ನೆ ೧೫ ಟಿಪ್ಪಣೆಯನ್ನು ಬರೆಯಿರಿ— (ಅ) ಹರಿಹರ, (ಆ) ರಾಘವಾಂಕ, (ಇ) ಗಿರಿಜಾ ಕಲ್ಯಾಣ, (ಈ) ಬಸವರಾಜ ದೇವರ ರಗಳೆ, (ಉ) ಹರಿಶ್ಚಂದ್ರ ಕಾವ್ಯ, (ಊ) ಸೋಮನಾಥ ಚಾರಿತ್ರ.

ಉತ್ತರ (ಅ) ಹರಿಹರ— ಹರಿಹರನು 'ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ ಸುಪುತ್ರ'ನು. ಇವನಿಗೆ ಹರೀಶ್ವರನೆಂದೂ ಹಂಪೆಯ ಹರಿಹರನೆಂದೂ ಕರೆಯುವದುಂಟು. ಇವನ ಕಾಲ ಕ್ರಿಸ್ತಶಕ ೧೨ನೆಯ ಶತಮಾನದ ಕೊನೆಯ ಭಾಗ. ವಚನ ಸಾಹಿತ್ಯದಿಂದ ಸ್ಫೂರಣಹೊಂದಿ ಸಾಹಿತ್ಯ ಮಾಡಿದವರಲ್ಲಿ ಇವನು ಅಗ್ರಗಣ್ಯನು. ಹರಿಹರ ವೀರಶೈವ ಕವಿಕುಲ ಗುರುವಾಗಿದ್ದಾನೆ, ಯುಗ ಪ್ರವರ್ತಕನಾಗಿದ್ದಾನೆ. ಕನ್ನಡ ಸಾಹಿತ್ಯಕ್ಕೆ

ಹೊಸ ಮೆರಗನ್ನು, ಹೊಸ ಜೀವವನ್ನೂ ತುಂಬಿ ತನ್ನ ಸಹಜ ಸೌಂದರ್ಯ ದಿಂದ ಕನ್ನಡ ಭಾಷೆ ಛಂದಸ್ಸು ಮೆರೆಯುವಂತೆ ಮಾಡಿದ ಶ್ರೇಯಸ್ಸು ಹರಿಹರ ಮಹಾಕವಿಗೆ ಪ್ರಪ್ರಥಮವಾಗಿ ಸಲ್ಲುತ್ತದೆ. ಕನ್ನಡ ಸಾಹಿತ್ಯದಲ್ಲಿ ಕನ್ನಡದ ಕೆಚ್ಚನ್ನು, ಸತ್ವವನ್ನು, ಶಕ್ತಿಯನ್ನು ಹರಿಹರನು ವಿಶೇಷವಾಗಿ ತನ್ನ ರಗಳೆ ಗಳಿಂದಲೇ ತಂದು ಕೊಟ್ಟನು. ಆದರೂ 'ಗಿರಿಜಾ ಕಲ್ಯಾಣ'ವನ್ನು ಬರೆದು ಸಾಂಪ್ರದಾಯಿಕ ಪ್ರೌಢ ಚಂಪೂ ಶೈಲಿಯನ್ನೂ ಮೆರೆದನು.

ಹರಿಹರನು ಹಿರಿಯ ಭಕ್ತ ಕವಿ. ಮೇಲಾಗಿ ಶಿವಕವಿ ಇವನ್ನೆಲ್ಲ ಕೃತಿ ಗಳಲ್ಲಿ ಭಕ್ತಿಪೂರ್ಣವಾದ, ಭಾವ ನಿರ್ಭರವಾದ ಸಮಗ್ರ ವ್ಯಕ್ತಿತ್ವವೊಂದು ಎದ್ದು ಕಾಣುತ್ತದೆ. ಪಾಂಡಿತ್ಯ ಪ್ರತಿಭೆಗಳ ರೆಕ್ಕೆಗಳನ್ನು ಬೀರಿ ಭಕ್ತಿ ಹೃದಯ ವನ್ನು ತೆರೆದು, ದಣಿವಿಲ್ಲದೆ, ಹಾಡುತ್ತ ಹಾರುವ ಹಕ್ಕಿಯಂತೆ ಅವನು ತೋರು ತ್ತಾನೆ. ಈ ವ್ಯಕ್ತಿತ್ವದಲ್ಲಿ ಸಮಗ್ರತೆಯಿದೆ, ಉತ್ಸಾಹವಿದೆ.

ಹರಿಹರನ ಕೃತಿಗಳೆಂದರೆ 'ಪಂಪಾಶತಕ', 'ಮುಡಿಗೆಯ ಅಷ್ಟಕ', 'ಗಿರಿಜಾ ಕಲ್ಯಾಣ' ಹಾಗೂ ಶಿವಗಣದ ರಗಳೆಗಳು'. ಈ ರಗಳೆಗಳ ಸಂಖ್ಯೆ ೧೦೬ ಎಂದು ಸಾಮಾನ್ಯವಾಗಿ ಒಪ್ಪಿಕೊಳ್ಳಲಾಗಿದೆ. ಪ್ರಥಮವಾಗಿ ರಗಳೆ ಗಳನ್ನು ಬರೆದದ್ದರಿಂದ ಇವನಿಗೆ 'ರಗಳೆ ಕವಿ' ಎಂದು ಕರೆಯಲಾಯಿತು.

ಶತಕಗಳು ಆತ್ಮಕಥನವಾಗಿವೆ. ಪುಷ್ಪರಗಳೆಯಂತೂ ಹರಿಹರನ ಭಕ್ತಿ ಜೀವನಕ್ಕೆ ಕೈಗನ್ನಡಿಯಾಗಿದೆ. ಇವುಗಳಲ್ಲಿ ವಿರುಪಾಕ್ಷನಲ್ಲಿ ಅವನು ತಳೆದ ಭಕ್ತಿ ಭಾವಾವೇಶವಾಗಿ, ವೀರ ನಿಷ್ಠೆಯಾಗಿ ಸಮರ್ಪಣೆಯಾಗಿ ಹೊರ ಹೊಮ್ಮಿದೆ. ಉದ್ಗಾರ ಪುನರುಕ್ತಿಗಳಿಂದ, ವಿಶಿಷ್ಟವಾದ ಶೈಲಿಯಲ್ಲಿ ಹರಿಹರನು ಇಲ್ಲಿ ಭಕ್ತಿರಸದ ಉತ್ಕಟತೆ, ತನ್ಮಯತೆಗಳನ್ನು, ಕೊರಗು, ಕಳವಳಗಳನ್ನು ವ್ಯಕ್ತಪಡಿಸಿದ್ದಾನೆ. ಸಾಹಿತ್ಯ ದೃಷ್ಟಿಯಿಂದ ಈ ಶತಕಗಳು ಕಲ್ಪನಾ ಶಕ್ತಿಗಿಂತ ಭಾವಶಕ್ತಿಯಿಂದ, ವಿಶಿಷ್ಟ ಸಹಜ ಶೈಲಿಯಿಂದ ರಮ್ಯವಾಗಿವೆ, ಭಾವಗೀತೆಯ ಸತ್ವವನ್ನು ಪಡೆದಿವೆ. ವೀರಶೈವ ಸಾಹಿತ್ಯಕ್ಕೆ ಇವು ಮೊದಲಿನ ಶತಕಗಳು.

ಮುಡಿಗೆಯ ಅಷ್ಟಕವು ಕ್ಷಕಾರ ಪ್ರಾಸದ ೮ ವೃತ್ತಗಳಲ್ಲಿ ವಿರೂಪಾಕ್ಷ ದೇವನ ಸರ್ವ ಶ್ರೇಷ್ಠತೆಯನ್ನು ಸಾರುವ ಹಾಗೂ ಹರಿಹರನ ಪವಾಡವೊಂದನ್ನು ಸೂಚಿಸುವ ಕವಿತೆ ಶತಕಗಳಲ್ಲಿಯ ಭಾವಾವೇಶಕ್ಕಿಂತ ಇಲ್ಲಿ ಆತ್ಮ ಪ್ರತ್ಯ ಯವು ಹೆಚ್ಚಾಗಿ ತೋರಿದೆ.

'ಗಿರಿಜಾ ಕಲ್ಯಾಣವು' ಹರಿಹರನ ವೈಶಿಷ್ಟ್ಯಯುತವಾದ ಚಂಪೂ ಗ್ರಂಥ, ಪ್ರೌಢ ಕಾವ್ಯ ಪರಂಪರೆಗೆ ಅವನ ನಲ್ಗಾಣಿಕೆ. 'ಕಾವ್ಯಂತಾನಿದು ನವರಸ ಸೇವ್ಯಂ', 'ಪೊಸತಿದು ಪಾವನಮಿದು', 'ಹರಿಹರನ ಕಾವ್ಯಮಖಿಳಸೇವ್ಯ ನವ್ಯಂ' ಮುಂತಾದ ಉಕ್ತಿಗಳಿಂದ ಇದರಮಹಿಮೆಯನ್ನು ಕಂಡುಕೊಳ್ಳಬಹುದು. ಇಲ್ಲಿರುವ ವಿಷಯ ಚಂಪೂ ಕಾವ್ಯಗಳಿಗೆ ಹೊಸದು. ಇದು ಸಾಂಕೇತಿಕಾರ್ಥವುಳ್ಳ ರೂಪಕ ಕಾವ್ಯವಾಗಿದೆ. ಇಲ್ಲಿ ವಿಷಯ ನವೀನ, ಭಾವ ಶಿವಪರ, ಆದರೆ ವರ್ಣನೆ ಸಾಂಪ್ರದಾಯ ಬದ್ಧ ಪಾತ್ರಗಳು ದಿವ್ಯಮಾನವ ಅಂಶಗಳಿಂದ ಕೂಡಿವೆ. ಆದರೂ ರಸೋತ್ಕಟ ನಿರೂಪಣೆ, ನಿರರ್ಗಳವಾದ ವ್ಯಕ್ತಿ ವಿಶಿಷ್ಟವಾದ ಶೈಲಿ, ಅಸಾಧಾರಣ ಕಲ್ಪಕತೆ, ಶಿವ ಕವಿತ್ವವುಳ್ಳ ಪ್ರಸನ್ನ ಲಲಿತ ಚಂಪುವಿನ ಹೊಸ ನಿರ್ಮಾಣಗಳಿಂದ ಹರಿಹರನು ಇಲ್ಲಿ ಮಹಾ ಕವಿ ಸತ್ವವನ್ನು ತೋರ್ಪಡಿಸಿದ್ದಾನೆ.

'ಶಿವಗಣದ ರಗಳೆಗಳು' ಹರಿಹರನ ವ್ಯಕ್ತಿತ್ವ ಸಿದ್ಧಿಯ ಪತಾಕೆಗಳು ಅವುಗಳ ಸಂಖ್ಯೆ ಸುಮಾರು ೧೦೬. ಅವುಗಳ ಕಥಾವಸ್ತು ಭಿನ್ನವಾದರೂ ಕಾವ್ಯ ರೂಪ, ವರ್ಣನೆ, ಶೈಲಿಗಳಲ್ಲಿ ಒಂದೇ ಪ್ರತಿಭೆಯ ಕೈವಾಡವಿದೆ. ಹೆಚ್ಚಾಗಿ 'ಪೆರಿಯ ಪುರಾಣ' ವೇ ಇವಕ್ಕೆ ಆಧಾರ. ಹರಿಹರನ ಅನಿರ್ಬಂಧವಾದ, ಲಯ ಬದ್ಧವಾದ ಕಾವ್ಯವಿಹಾರಕ್ಕೆ ರಗಳೆ ಯೋಗ್ಯ ವಾಹಕವಾಯಿತು. ಇಲ್ಲಿ ಕವಿಯ ಭಕ್ತ ಪ್ರಕೃತಿಯ ಪ್ರಭಾವದಿಂದ, ಸಹಜ ಪ್ರತಿಭೆಯ ಪ್ರಸಾದದಿಂದ ರಗಳೆಗಳೆಲ್ಲ ಜೀವಂತ ಉಜ್ವಲ ಚಿತ್ರಗಳಾಗಿವೆ. ಇವುಗಳಲ್ಲೆಲ್ಲ 'ಬಸವರಾಜ ದೇವರ ರಗಳೆ' ಹರಿಹರನ ಶ್ರೇಷ್ಠ ಕೃತಿ, ಅಲ್ಪ ಗಾತ್ರದಲ್ಲಿದ್ದ ಮಹಾಕೃತಿ, ಮೇರುಕೃತಿ. ಹರಿಹರನು ಭಕ್ತಿ ರಸದಲ್ಲಿ ಇಲ್ಲಿ ತನ್ಮಯನಾಗಿದ್ದಾನೆ, ತಾದಾತ್ಮ್ಯ ಹೊಂದಿದ್ದಾನೆ.

ಒಟ್ಟಿನಲ್ಲಿ ಹರಿಹರನ ಕೃತಿಗಳಲ್ಲಿ ಭಕ್ತಿ ನಿರ್ಭರವಾದ, ಉತ್ಸಾಹಪೂರ್ಣವಾದ ವ್ಯಕ್ತಿತ್ವವೊಂದು ಹೊರಹೊಮ್ಮಿದೆ. ಅವನ ಕಲ್ಪನೆಗಳಲ್ಲಿ ಒಂದು ವಿಶೇಷವಾದ ಶಿವದೃಷ್ಟಿ ಸರ್ವತೋಮುಖವಾಗಿದೆ. ಹರಿಹರನು ಕನ್ನಡ ಮಹಾಕವಿಗಳಲ್ಲಿ ಒಬ್ಬ; ವಿಶೇಷವಾಗಿ ವ್ಯಕ್ತಿತ್ವ ಸಂಪತ್ತಿಯನ್ನು ಪಡೆದು ಸಾಹಿತ್ಯ ಸಂಪತ್ತಿಯಲ್ಲಿ ಅದನ್ನು ಪಡಮೂಡಿಸಿದ ಮಹಾಕವಿ ಇವನು. ಬಸವೇಶ್ವರನೂ ಉಳಿದ ಶರಣರೂ ಬೆಳಗಿಸಿದ ಕ್ರಾಂತಿಯ ದಾರಿಯಲ್ಲಿ ನಡೆದು

ಅವನು ತನ್ನ ಪ್ರಾತಿಭ ಸೃಷ್ಟಿಯಿಂದ ಹರಿಹರ ಮಾರ್ಗವನ್ನು ನಿರ್ಮಾಣ ಮಾಡ್ಡಿ ಯುಗಪುರುಷನಾದನು.

(ಆ) ರಾಘವಾಂಕ— ಇವನು ಹರಿಹರ ಕವಿಯ ಸೋದರಳಿಯ ಹಾಗೂ ಶಿಷ್ಯ, ಪಟ್ಟಶಿಷ್ಯ 'ಚತುರ ಕವಿರಾಯ ಹಂಪೆಯ ಹರೀಶ್ವರ ನವರ ಸುತನು', ಹರಿಹರ ಮಾರ್ಗದಲ್ಲಿ ಮೊದಲು ಅಡಿಯಿಟ್ಟವನು. 'ಹಂಪೆಯರಸನ ಪೊಗಳ್ವ ನಾಲಿಗೆಯೊಳ್ ಅನ್ಯದೈವವ, ಭವಿಗಳಂ ಕೀರ್ತಿಸಿದೆನಾದೊಡೆ ಮನಸಿಜಾರಿಯ ಭಕ್ತನಲ್ಲ' ಎಂದು ಅವನ ಬಿರುದು. ಹರಿಹರ ಮಾರ್ಗದ ಗುರುತು. ಕಾವ್ಯದ ಗೊತ್ತುಗುರಿ, ವಿಷಯ, ಶೈಲಿ ಈ ಬಗೆಗೆ ಅವನಿಗೆ ಹರಿಹರನಿಂದ ಸ್ಫೂರ್ತಿ ದೊರೆತಿದೆಯಾದರೂ ಕಾವ್ಯ ರೂಪ. ಕಥಾವಸ್ತು ನಿರೂಪಣ ಪದ್ಧತಿ ಇದರಲ್ಲಿ ರಾಘವಾಂಕನು ಸ್ವತಂತ್ರನಾಗಿ ವೇರೆದಿದ್ದಾನೆ ಚಂಪೂವಿನ ಮೋಹಕ್ಕೆ ಒಳಗಾಗದೇ ಷಟ್ಪದಿಯಲ್ಲಿಯೇ ತನ್ನೆಲ್ಲ ಕೃತಿಗಳನ್ನು ರಚಿಸಿದನು.

ರಾಘವಾಂಕನ ಕೃತಿಗಳು ಆರು. ಅವುಗಳಲ್ಲಿ 'ಸೋಮನಾಥ ಚರಿತ್ರೆ', 'ವೀರೇಶ ಚರಿತ್ರೆ', 'ಸಿದ್ಧರಾಮ ಪುರಾಣ', 'ಹರಿಶ್ಚಂದ್ರ ಚಾರಿತ್ರ' ಇವು ದೊರೆತ ಹಾಗೂ ಪ್ರಕಟವಾದ ಗ್ರಂಥಗಳು. 'ಶರಭ ಚಾರಿತ್ರ' ದೊರೆತಿದೆ ಪ್ರಕಟವಾಗಿಲ್ಲ. 'ಹರಿಹರ ಮಹತ್ವ' ದೊರೆತಿಲ್ಲ 'ದೇವಾಂಗ ದಾಸಿಮಯ್ಯನ ಪುರಾಣ' ಹಾಗೂ 'ಅನುಭವ ಶಿಖಾಮಣಿ'ಗಳನ್ನು ರಾಘವಾಂಕನೇ ಬರೆದನೆಂದು ಹೇಳಲಾಗುತ್ತಿದ್ದರೂ ಅದಕ್ಕೆ ನಿರ್ವಿವಾದವಾದ ಆಧಾರಗಳು ಇಲ್ಲ. ತೆಲುಗಿನಲ್ಲಿ ಬರೆದ ಒಂದು 'ನಳ ಚರಿತ್ರೆ'ಯ ಕರ್ತೃ ರಾಘವಾಂಕನೆಂದಿದೆ.

'ಉಭಯ ಕವಿ ಕಮಲ ರವಿ' ಎಂದು ರಾಘವಾಂಕ ಹೇಳಿಕೊಂಡುದು ಕನ್ನಡ ಹಾಗೂ ಸಂಸ್ಕೃತಗಳಲ್ಲಿ ಕವಿತ್ವ ಶಕ್ತಿಯ ಬಗ್ಗೆ ಇರಬೇಕಲ್ಲದ ತೆಲುಗು ಇಲ್ಲಿ ಗಣನೆಗೆ ಸುಯೋಗ್ಯವಲ್ಲ ರಾಘವಾಕನ ಎಲ್ಲ ಕಾವ್ಯಗಳಲ್ಲಿ ನವೀನ ಪ್ರಯೋಗ ಬುದ್ಧಿಯಿದೆ. ಅಚ್ಚಗನ್ನಡ ಛಂದಸ್ಸಿನತ್ತ ಬಲವಿದೆ. ಕವಿಯ ಆತ್ಮ ವಿಕಾಸವನ್ನು ತೋರಿಸುವ ಆದರ್ಶ, ವ್ಯಕ್ತಿತ್ವ ಶೈಲಿ ಇವುಗಳ ಅಂತಸ್ಥ ಪ್ರಮಾಣದಿಂದ ಸೋಮನಾಥ ಚರಿತೆ, ವೀರೇಶ ಚರಿತೆ, ಸಿದ್ಧರಾಮ ಪುರಾಣ, ಹರಿಶ್ಚಂದ್ರ ಕಾವ್ಯ ಈ ಕ್ರಮದಲ್ಲಿ ಗ್ರಂಥ ರಚನೆಯಾಗಿರಬೇಕೆಂದೂ ಮಿಕ್ಕ ಕಾವ್ಯಗಳನ್ನು ಈ ಮಧ್ಯೆ ರಚಿಸಿರಬಹುದೆಂದೂ ಇವುಗಳಲ್ಲಿಯ ಮತಾಂಶ–ಕಾವ್ಯಾಂಶಗಳ ಪ್ರಕಾರದ ಮೇಲಿನ ಅಭಿಪ್ರಾಯ ಪಡಬಹುದಾಗಿದೆ.

'ಸೋಮನಾಥ ಚರಿತೆ'ಯು ಶಿವಭಕ್ತನಾದ ಸೌರಾಷ್ಟ್ರದ ಆದಯ್ಯನ ಚರಿತ್ರೆಯಾಗಿದೆ. ಸೌರಾಷ್ಟ್ರದ ಸೋಮನಾಥನನ್ನು ಪುಲಿಗೆರೆಗೆ ತಂದು ಪ್ರತಿಷ್ಠೆ ಮಾಡಿ ಪವಾಡಗಳನ್ನು ಮೆರೆದು ಜೈನರನ್ನು ಶಿವಭಕ್ತರನ್ನಾಗಿ ಮಾಡಿದ ಕತೆ ಯಿದು. ಹರಿಹರ 'ಆದಯ್ಯನ ರಗಳೆ' ಇದಕ್ಕೆ ಸ್ಫೂರ್ತಿಯಿತ್ತಿದೆ. ಆದಯ್ಯನ ಮಾಹೇಶ್ವರ ಭಕ್ತಿ, ಏಕನಿಷ್ಠೆ ಕಷ್ಟ ಸಹನೆಗಳನ್ನು ರಾಘವಾಂಕನು ಸುಂದರ ವಾಗಿ ಚಿತ್ರಿಸಿದ್ದಾನೆ, ಸಂವಾದಗಳಲ್ಲಿ ನಾಟಕೀಯ ಶಕ್ತಿಯಿದೆ.

'ವೀರೇಶ ಚರಿತೆ' ಚಿಕ್ಕ ಕಾವ್ಯ. ಇಲ್ಲಿ ವೀರಭದ್ರನು ದಕ್ಷನ ಯಜ್ಞವನ್ನು ನಾಶ ಮಾಡಿದ ಕತೆಯಿದೆ. ಇಲ್ಲಿ 'ವೀರಭದ್ರ ರಗಳೆ'ಯ ಪ್ರಭಾವವಿದ್ದರೂ ಅದರ ಪ್ರತಿಛಾಯೆಯಿಲ್ಲ. ಮಾಡಿಕೊಂಡ ಬದಲಾವಣೆ ಹೃದ್ಯವಾಗಿದೆ ಇದು ಉದ್ದಂಡ ಷಟ್ಪದಿಯ ಹೊಸ ಪ್ರಯೋಗ. ಇದೊಂದು ಆದರ್ಶ ಕಾವ್ಯವೆಂದೂ ಮೇಲ್ತರಗತಿಯ ಭವ್ಯ ಕಾವ್ಯವೆಂದೂ, ಅಲ್ಲಿಯ ಸನ್ನಿವೇಶಗಳೂ ಭವ್ಯ, ಪಾತ್ರ ಗಳು ಭವ್ಯ, ಅವುಗಳ ನುಡಿ ಭವ್ಯ, ನಡೆ ಭವ್ಯ, ಕೊನೆಗೆ ಕವಿಯ ಶೈಲಿಯೂ ಭವ್ಯ ಎಂದು ಡಾಕ್ಟರ ಆರ್. ಸಿ. ಹಿರೇಮಠ ಅವರು ಅಭಿಪ್ರಾಯ ಪಟ್ಟಿದ್ದಾರೆ.

'ಸಿದ್ಧರಾಮ ಚಾರಿತ್ರ'ವು ೯ ಸಂಧಿಗಳುಳ್ಳ ದೊಡ್ಡ ಕಾವ್ಯ ಸೊನ್ನಲಾ ಪುರದ ಸಿದ್ಧರಾಮನ ಚರಿತ್ರೆ ಇದರ ವಿಷಯ. 'ಜಗದ ಗುರು ಸಿದ್ಧರಾಮ ನಾಥಂ ಮನಜನಲ್ಲ ಕಾರಣ ರುದ್ರ', ಎವೆಯಿಕ್ಕದು ಸಿರಿಕ್ಕದುಣ್ಣದ ಜಿತೇಂದ್ರಿ ಯತ್ವದ ತಳೆದ ನಿರ್ವಾಣಿಯನೆನಿಸುವ ಶಿವಜ್ಞಾನಿ', 'ಬಯಲು ಬಲಿದಾಕಾರ ವಾದಂತಹ ಮಹಾಂತ' ಇದು ಸಿದ್ಧರಾಮನ ವರ್ಣನೆ. ಅವನ ಜನನ, ಬಾಲ್ಯ ಸಿದ್ಧಿ ಎಲ್ಲವೂ ಲೋಕವಿಲಕ್ಷಣವಾಗಿವೆ. ಕರುಣ ಹಾಗೂ ಭಕ್ತಿ ರಸಗಳು ಇಲ್ಲಿವೆ. ಇಲ್ಲಿ ರಾಘವಾಂಕನ ಕಥನಕಲೆ ಪಳಗಿದೆ. ಇದು ಮಾನವ್ಯದ ಮಂದಾರವನ್ನರಳಿಸಿದ ಮಹಾ ಕಾವ್ಯ; ವಸ್ತು, ರೂಪ, ಸತ್ವ ಎಲ್ಲ ದೃಷ್ಟಿ ಯಿಂದಲೂ ಕ್ರಾಂತಿಯನ್ನೊಳಗೊಂಡ ಸ್ವತಂತ್ರ ಕಾವ್ಯ, ಕನ್ನಡ ಸಾಹಿತ್ಯ ದಲ್ಲಿಯೇ ಉನ್ನತ ಸ್ಥಾನವನ್ನಲಂಕರಿಸಿದ ಶ್ರೇಷ್ಠ ತರಗತಿಯ ಕಲಾಕೃತಿ.

'ಹರಿಶ್ಚಂದ್ರ ಕಾವ್ಯ'ವು ರಾಘವಾಂಕನ ಕಾವ್ಯಕಲಾಸಿದ್ಧಿಯ ಹೆಗ್ಗುರುತು. ಅವನ ಶಕ್ತಿ ವಿಶೇಷಗಳೆಲ್ಲ ಇದರಲ್ಲಿ ತನಿಗೊಂಡು ಮೈಳೈಸಿವೆ. ಈ 'ಕೃತಿಗೆ ಪ್ರತಿಯಿಲ್ಲ', 'ಇದರೊಳಗೊಂದು ಕುಂದಿಲ್ಲ,' 'ಪೊಸ ಕಾವ್ಯ ಕನ್ಯಕೆ' ಮುಂತಾಗಿ ರಾಘವಾಂಕನು ಈ ಬಗ್ಗೆ ಹೇಳಿಕೊಂಡಿದ್ದಾನೆ. ಕಥೆ ವೇದ ಪುರಾಣ

ಕಾವ್ಯಗಳಲ್ಲಿ ಪ್ರಸಿದ್ಧವಾದುದ್ದು. ಆದರೆ ಇಲ್ಲಿ ಭಾರತೀಯ ಸಾಹಿತ್ಯದಲ್ಲಿಯೇ ಕಾಣದೊರೆಯದ ನೂತನ ಸನ್ನಿವೇಶಸೃಷ್ಟಿ ಕೃತಿಬಂಧ ಇದ್ದುದು ಹೆಮ್ಮೆಯ ಸಂಗಂತಿಯಾಗಿದೆ. ಇಡೀ ಕಾವ್ಯದಲ್ಲಿ ರಾಘವಾಂಕನ ನಾಟ್ಯ ಪ್ರತಿಭೆ ಅದ್ಭುತ ರಮ್ಯವಾಗಿ ಬೆಳಗಿದೆ. ಹರಿಶ್ಚಂದ್ರ ಕಾವ್ಯವು ರುದ್ರ ಅಂಶವುಳ್ಳ ಭದ್ರನಾಟಕವೇ ಆಗಿದೆ. ವಸ್ತು ರಚನೆ, ಪಾತ್ರಪೋಷಣೆ, ರಸ ನಿರೂಪಣೆ, ಸಂವಾದ ರಚನೆ, ವರ್ಣನೆ ಹೀಗೆ ಯಾವ ಮಗ್ಗುಲಿನಿಂದ ನೋಡಿದರೂ ಈ ಕೃತಿ ಘನತೆಯನ್ನು ಬೆಳಗುತ್ತದೆ. ಇಲ್ಲಿ ಶಿಷ್ಯನಿಂದ ಗುರುವಿಗೆ ಪರಾಜಯವಾಗಿದೆ.

ರಾಘವಾಂಕನಲ್ಲಿ ಮಾರ್ಗಕಾವ್ಯ ಹಾಗೂ ಹರಿಹರ ಮಾರ್ಗದ ಪರಿಣಾಮಗಳನ್ನು ಕಾಣಬಹುದು. ರಾಘವಾಂಕನಲ್ಲಿ ನಾಟ್ಯ ಗುಣವು ಸಂಪನ್ನವಾಗಿ ಪ್ರಕಟವಾಗಿದೆ. ತಾಳಲಯ, ನಾದಗುಣ ಇವುಗಳಲ್ಲಿ ಅವನ ಶೈಲಿ ಪರಿಣತವಾಗಿದೆ. ನಡುಗನ್ನಡದ ಸಮ್ಮಿಶ್ರ ರೂಪಗಳಿಗೂ ಎಡೆಕೊಟ್ಟಿದೆ. ಆದರೂ ಅಚ್ಚಗನ್ನಡದತ್ತ ಅವನ ಒಲವು ಹೆಚ್ಚು. ಮಹಾ ಶೈಲಿಯ ಲಕ್ಷಣಗಳೆನಿಸಿದ ಧ್ವನಿ, ದೈವೀ ಪ್ರೇರಣೆಯ ಪದ ಪ್ರಯೋಗ, ತೇಜಸ್ಸಿನ ವೈಖರಿ ಇವೆಲ್ಲ ರಾಘವಾಂಕನ ಶೈಲಿಯಲ್ಲಿ ತುಂಬಿ ತುಳುಕುತ್ತವೆ. ಇದಲ್ಲದೆ ರಾಘವಾಂಕನ ಶೈಲಿ ಕಥನ ಕವಿಯ ಶೈಲಿ, ನಾಟಕಕಾರನ ಶ್ರೇಷ್ಠ ಗುಣಗಳಿಂದ ಮಾಗಿದ ಶೈಲಿ. ಒಟ್ಟಿನಲ್ಲಿ ರಾಘವಾಂಕನು ಹರಿಹರನಿಂದ ಪ್ರಭಾವ ಹೊಂದಿಯೂ ಸ್ವಪ್ರತಾಪವನ್ನು ಮೆರೆದ, ಗುರುಭಕ್ತಿಯಲ್ಲಿ ವ್ಯಕ್ತಿತ್ವವನ್ನು ಕಳೆದುಕೊಳ್ಳದ, ಉತ್ತಮ ಶಿಷ್ಯ; ಹಿರಿಯ ಕವಿಯವನು.

ಇ) ಗಿರಿಜಾ ಕಲ್ಯಾಣ— ಇದು ಹರಿಹರನ ವೈಶಿಷ್ಟ್ಯಪೂರ್ಣವಾದ ಚಂಪೂ ಗ್ರಂಥ, ಪ್ರೌಢಕಾವ್ಯ ಪರಂಪರೆಗೆ ಅವನ ನಲ್ಗಾಣಿಕೆ. 'ಕಾವ್ಯಂ ತಾನಿದು ನವರಸಸೇವ್ಯಂ', ಪೊಸತಿದು ಪಾವನಮಿದು', 'ಹರಿಹರ ಕಾವ್ಯಮಖಿಳ ನವ್ಯಂ ಸೇವ್ಯಂ' ಮುಂತಾಗಿ ಅವನೇ ಹೇಳಿಕೊಂಡಿದ್ದಾನೆ. ಶೈವ ಪುರಾಣ ಕಾವ್ಯಗಳಲ್ಲಿ ವರ್ಣಿತವಾದ ಶಿವಪಾರ್ವತಿಯರ ಮದುವೆಯೇ ಇದರ ವಿಷಯ. ಕಾಲಿದಾಸನ 'ಕುಮಾರ ಸಂಭವದ' ಪ್ರಭಾವವೂ ಇದರ ಮೇಲೆ ಆಗಿರಬೇಕು.

ಶಿವಪಾರ್ವತಿಯರ ಮದುವೆಯೇ ಇದರ ವಿಷಯವಾದರೂ ಪಾರ್ವತಿಯ ಪಾತ್ರವನ್ನು ಚಿತ್ರಿಸುವದರಲ್ಲಿಯೇ ಹರಿಹರನು ಮಗ್ನನಾಗಿದ್ದಾನೆ. ಇದು

'ಗಿರಿಜಾ ಕಲ್ಯಾಣ'ವಲ್ಲವೇ ! ಮೂಲದಿಂದ ಮಾಡಿಕೊಂಡ ಕೆಲ ಬದಲಾವಣೆಗಳೂ ಇಲ್ಲಿವೆ. ಆದರೆ ವಟುವೇಷದ ಶಿವನನ್ನು ಕುಪಿತಳಾದ ಗಿರಿಜೆಯು ವಿಭೂತಿಯಿಂದ ಹೊಡೆದುದು ಹೊಸ ಕಲ್ಪನೆಯಾಗಿದೆ ಈ ಬದಲಾವಣೆಯಲ್ಲಿ ಬೃಹಸ್ಪತಿಗೆ ಅನ್ಯಾಯವಾಗಿದೆ, ಕೆಲ ಸಂಭಾಷಣೆಗಳಲ್ಲಿ ನಯ ಕಡಿಮೆಯಾಗಿದೆ. ಕೆಲವು ಕಡೆಗೆ ವಿಸಂಗತಿಗಳೂ ತೋರಿವೆ. ಆದರೆ ಕೊನೆಗೆ ಎಲ್ಲವೂ ಮೆಚ್ಚುವಂತೆ ಆಗಿವೆ.

ಕಾವ್ಯದ ಮೊದಲಿನಿಂದ ಕೊನೆಯವರೆಗೆ ವರ್ಣನೆಯ ಮೇಲೆ ವರ್ಣನೆಗಳು ಬಂದಿರುವದರಿಂದ ಕಥಾಗತಿ ಮಂದವಾಗಿದೆ. ಆದರೆ ಉತ್ತರಾರ್ಧದಲ್ಲಿ ಮಾತ್ರ ಕಥೆಯ ಓಟ ಹೆಚ್ಚುವದು ವರ್ಣನೆಗಳಿಗೂ ಸಂಧರ್ಭೌಚಿತ ಬರುವದು. ಸವೇಗವಾದ ಕಥನಕಲೆ ಹರಿಹರನ ಹುಟ್ಟುಗುಣವೆಂಬುದಕ್ಕೆ ಇಲ್ಲಿ ನಿದರ್ಶನವಿದೆ. ಜೊತೆಗೆ ಸಂತೋಷ-ಸಂಭ್ರಮ, ಭಕ್ತಿ-ವೀರಗಳ ಸಂದರ್ಭ ಬಂದಾಗ ಈ ಕಲೆ ಅತ್ಯಂತ ಸಹಜ-ಸಮೃದ್ಧವಾಗುತ್ತದೆ; ಕವಿಯ ಎಲ್ಲ ಶಕ್ತಿಗಳು ಕಾವುಗೊಂಡು ನಿರ್ಮಾಣದ ಎತ್ತರಕ್ಕೆ ಹಾತೊರೆಯುತ್ತವೆ.

ಗಿರಿಜಾ ಕಲ್ಯಾಣವು ಶಿವಲೀಲೆಯು, ದೇವಾಸುರ ಸಂಘರ್ಷಣದ ದೈವೀ ಕತೆಯೂ ಹೌದು, ಸಾಂಕೇತಿಕಾರ್ಥವುಳ್ಳ ರೂಪಕವೂ ಹೌದು. ಮಾನವ ಪಾತ್ರಗಳ ನಿರೀಕ್ಷೆ ಇಲ್ಲಿರಬೇಕಾಗಿಲ್ಲವಾದರೂ ಗಿರಿಜೆ ಮಾತ್ರ ಮಾನವ ಅಂಶಗಳಿಂದ ಕೂಡಿದ ದೈವೀಪಾತ್ರವಾಗಿದ್ದಾಳೆ. ಶಿವಭಕ್ತಿ ತನ್ಮಯಳಾದರೂ ಮಾನವನ ಸಹಜವಾದ ಸ್ವಾಭಿಮಾನ, ಕ್ರೋಧ, ಛಲಗಳನ್ನು ಪ್ರಖರವಾಗಿ ತೋರಿಸುತ್ತಾಳೆ. ಶಿವಪಾರ್ವತಿಯರ ಲಗ್ನ ಸಮಾರಂಭದ ವರ್ಣನೆ ಶೈವ ಸಂಪ್ರದಾಯದ ಮದುವೆಯ ವರ್ಣನೆಯಾಗಿದೆ.

ಮಾರ್ಗಕಾವ್ಯದ ಸಾಂಪ್ರದಾಯ ಶರಣತೆ ಮತ್ತು ಸ್ವಂತ ಪ್ರತಿಭೆಯ ನವೀನತೆಗಳ ಸಂಘರ್ಷಣದಿಂದ ಇಲ್ಲಿ ಕೆಲ ಅಪಕ್ವತೆ, ಅಸಂಗತಿ ತಲೆದೋರಿವೆ. ಅಷ್ಟಾದಶ ವರ್ಣನೆಗಳ ವ್ಯಾಮೋಹ ಸಂದರ್ಭೌಚಿತ್ಯವಿಲ್ಲದಿದ್ದರೂ ಬಿಟ್ಟಿಲ್ಲ. ವೇಶ್ಯಾವಾಟಿಯನ್ನು ನೋಡಲು ಪರ್ವತರಾಜನೊಡನೆ ನಾರದನೂ ಹೋಗುತ್ತಾನೆ ಪಾತ್ರಗಳ ದಿವ್ಯ ಮಾನವ ಅಂಶಗಳಲ್ಲಿ ಮೇಳವಿಕ ಕಡಿಮೆ. ತಾರಕಾಸುರ ಸಂಹಾರ, ಕುಮಾರ ಜನ್ಮ ಸೂಚನೆಯೂ ಇಲ್ಲಿದೆ. ಕೃತಿ ಅಪೂರ್ಣವಾದಂತಾಗಿದೆ.

ಆದರೆ ಗಿರಿಜೆಯ ಪಾತ್ರ ಕಲ್ಪನೆಗನುಗುಣವಾದ ಕಥಾರಚನೆ, ಕಾಮ ದಹನ, ರತಿವಿಲಾಪ, ವಟುವೇಷ ಸಂದರ್ಭ ಈ ಮುಂತಾದ್ದರ ರಸೋತ್ಕಟ ನಿರೂಪಣೆ, ನಿರರ್ಗಳವಾದ ವ್ಯಕ್ತಿ ವಿಶಿಷ್ಟವಾದ ಶೈಲಿ, ಅಸಾಧಾರಣ ಕಲ್ಪಕತೆ, ಶಿವ ಕವಿತ್ವವುಳ್ಳ ಪ್ರಸನ್ನ ಲಲಿತ ಚಂಪುವಿನ ಹೊಸನಿರ್ಮಾಣ ಈ ಗುಣ ಗಳಿಂದ ಹರಿಹರನು ಮಹಾಕವಿ ಸತ್ವವನ್ನು ತೋರ್ಪಡಿಸಿದ್ದಾನೆ. ರಗಳೆಗಳ ಮೇಲ್ಮೆಗೆ ಮುನ್ನರಿಕೆಯನ್ನು ಕೊಟ್ಟಿದ್ದಾನೆ.

ಈ) ಬಸವರಾಜ ದೇವರ ರಗಳೆ— ಹರಿಹರನು 'ರಗಳೆ'ಯ ಕವಿಯು. ರಗಳೆಗಳು ಹರಿಹರನ ವ್ಯಕ್ತಿಸಿದ್ಧಿಯ ಪತಾಕೆಗಳು. ಅವುಗಳ ಕಥಾ ವಸ್ತು ಭಿನ್ನವಾದರೂ ಕಾವ್ಯರೂಪ, ವರ್ಣನೆ, ಶೈಲಿಗಳಲ್ಲಿ ಒಂದೇ ಪ್ರತಿಭೆಯ ಕೈವಾಡವಿದೆ. 'ಪೆರಿಯ ಪುರಾಣ'ದಲ್ಲಿ ಹೇಳಿದ ತಮಿಳುನಾಡಿನ ಶಿವಭಕ್ತರ ಕಥೆಗಳಲ್ಲದೆ ಬೇರೆ ಶಿವಭಕ್ತರ ಕಥೆಗಳು, ಶರಣರ ಚರಿತ್ರೆಗಳೂ, ಉಂಟು. ಚರಿತ್ರೆಯಿಲ್ಲದ ವಿಷಯಕ ರಗಳೆಗಳೂ ಉಂಟು. ಇವುಗಳಲ್ಲೆಲ್ಲ. 'ಬಸವರಾಜ ದೇವರ ರಗಳೆ' ಶ್ರೇಷ್ಠ ಕೃತಿ. ಅಲ್ಪಗಾತ್ರದಲ್ಲಿದ್ದ ಮಹಾಕೃತಿ. ಬಸವಣ್ಣನವರ ಬಾಹ್ಯ ಚರಿತ್ರೆಗಿಂತ ಭಕ್ತ ಜೀವನದ ರಸ ಚಿತ್ರವನ್ನು ಹರಿಹರನು ಇದರಲ್ಲಿ ಸಂಪೂರ್ಣ ತನ್ಮಯನಾಗಿ ಕೊಟ್ಟಿದ್ದಾನೆ. ಹರಿಹರನ ಜೀವನಕ್ಕೂ ಬಸವಣ್ಣ ನವರ ಜೀವನಕ್ಕೂ ಭಕ್ತಿ ವಿಷಯದಲ್ಲಿ ತೀರ ಸಾಮ್ಯವಿರಬೇಕು. ಇದರ ಮೂರ ನೆಯ ಸ್ಥಲವು 'ಪುಷ್ಪರಗಳೆ'ಯ ಹೂ ಕೊಯ್ಯುವ ಸಂದರ್ಭದ ಪ್ರತಿಕೃತಿಯೆನ್ನು ವಂತಿದೆ. ಇವೆರಡರಲ್ಲಿಯೂ ಅದೇ ಭಕ್ತಿ, ಪಾರವಶ್ಯ, ಅದೇ ಸಂಭ್ರಮವಿದೆ.

ಇಲ್ಲಿ ತನ್ನ ಕಥಾವಸ್ತುವಿಗೆ ಚಂಪೂಶೈಲಿಯು ಸರಿಹೋಗುವದಿಲ್ಲವೆಂದೇ ಹರಿಹರನು ರಗಳೆಯನ್ನು ಉಪಯೋಗಿಸಿಕೊಂಡಿದ್ದಾನೆ. ಕಥೆ ನದಿಯ ಪ್ರವಾಹ ದಂತೆ ನಿರರ್ಗಳವಾಗಿ ಹರಿಯಬೇಕಾದರೆ ರಗಳೆಯೇ ಯೋಗ್ಯ ಕಥನ ಕಾವ್ಯಕ್ಕೆ ಇದು ಹೇಳಿ ಮಾಡಿಸಿದಂಥ ವೃತ್ತ. ವೈವಿಧ್ಯತೆಗೆಂದು ಒಂದು ಸ್ಥಳ ರಗಳೆಯಲ್ಲಿ ಹಾಗೂ ಒಂದು ಸ್ಥಳ ಗದ್ಯದಲ್ಲಿ ಇಲ್ಲಿದೆ. ಗದ್ಯ ಶೈಲಿಗೂ ಇಲ್ಲಿ ಎಷ್ಟೋ ಕಡೆಗೆ ರಗಳೆಯ ಓಟವಿದೆ, ಧಾಟಿಯಿದೆ, ಜನರಾಡುವ ಭಾಷೆಯಿದೆ. ವ್ಯಾಕರಣ ನಿಯಮಗಳ ಉಲ್ಲಂಘನೆಯೂ ಇದೆ.

ಇಲ್ಲಿ ಬರುವ ಉಪಕಥೆಗಳು, ಪವಾಡಗಳು, ವರ್ಣನೆಗಳು ಸನ್ನಿವೇಶ ಗಳು ಎಲ್ಲವೂ ಬಸವಣ್ಣನವರ ಘನತೆಯನ್ನು, ಉದಾತ್ತ ವ್ಯಕ್ತಿತ್ವವನ್ನು

ಮೆರೆದಿವೆ. ಬಸವಣ್ಣನು ಬಸವದೇವ ರಾಜನಾಗಿದ್ದಾನೆ. ಶಿವಶರಣರ ಮಹಿಮೆಯನ್ನು ಬೆಳಗುವದರ ಮುಖಾಂತರ ತನ್ನ ವ್ಯಕ್ತಿತ್ವವನ್ನು ಬೆಳಗಿದ್ದಾನೆ.

ಹರಿಹರನ ಮನಸ್ಸು ಭಾವಗಳ ನೃತ್ಯ ಶಾಲೆಯಾಗಿದೆ. ಒಂದು ಮಾತನ್ನು ಎಷ್ಟು ಸಾರೆ ಹೇಳಿದರೂ ಅವನಿಗೆ ತೃಪ್ತಿಯಿಲ್ಲ, ಹೇಳಿದ್ದನ್ನೇ ಇನ್ನೂ ಹೇಳಬೇಕು, ಚೆನ್ನಾಗಿ ಹೇಳಬೇಕೆನ್ನುವ ಸ್ವಭಾವ ಅವನದು. ಇದನ್ನೇ ಉತ್ಸಾಹವೆಂದು ಕರೆಯುವದುಂಟು. ಇಲ್ಲಿ ಪದಗಳ, ಚಿತ್ರಗಳ ನಾದಗಳ ಭಾವಗಳ ಚೆಂಡಾಟವು ಕಾಣುತ್ತದೆ.

ಹರಿಹರನು ಚಿತ್ರಿಸಿದ ವ್ಯಕ್ತಿಗಳೆಲ್ಲ ಜೀವಕಳೆ ತುಂಬಿ ಸಜೀವವಾಗಿ ನಮ್ಮ ಮುಂದೆ ಸುಳಿದಾಡುತ್ತವೆ. ಶಿವಾಲಯ, ಭಕ್ತನ ಓಡಾಟ, ಪೂಜೆ, ನಿಷ್ಠೆ, ಭಕ್ತಿ ಭಕ್ತನ ಮನಸ್ಸನ್ನು ಬರೆದು ನೋಡಬೇಕೆಂದು ಶಿವನ ಮನಸ್ಸು, ಪರೀಕ್ಷೆ, ಭಕ್ತನ ಗೆಲವು, ಪುಷ್ಪಕ ವಿಮಾನ ಈ ಚಿತ್ರಗಳು ಒಂದರಮೇಲೊಂದು ಬರುತ್ತವೆ.

ಹರಿಹರನಿಗೆ ರೂಪಕ ನಿರ್ಮಾಣ ಶಕ್ತಿ ವಿಶೇಷವಾಗಿದೆ. ಈ ಕಾವ್ಯದಲ್ಲಿ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ಹಲವು ಕಡೆಗೆ ಬರುತ್ತವೆ. ಈ ಅಲಂಕಾರಗಳನ್ನು ಹರಿಹರನು ಪ್ರಯತ್ನಪಟ್ಟು ತರುವದಿಲ್ಲ. ಅವೆಲ್ಲ ಸಹಜವಾಗಿ ಸಂದರ್ಭಕ್ಕನುಗುಣವಾಗಿ ರೂಪುಗೊಳ್ಳುತ್ತವೆ. ಇಲ್ಲಿ ಹೆಚ್ಚಾಗಿ ರೂಪಕ, ಉಪಮೆ ಉತ್ಪ್ರೇಕ್ಷೆ ಮೊದಲಾದ ಅರ್ಥಾಲಂಕಾರಗಳೂ ಹಾಗೂ ಅನುಪ್ರಾಸ ಯಮಕಗಳಾದ ಶಬ್ದಾಲಂಕಾರಗಳೂ ಬಂದಿವೆ.

ಉ) 'ಹರಿಶ್ಚಂದ್ರ ಕಾವ್ಯ'— 'ಹರಿಶ್ಚಂದ್ರ ಕಾವ್ಯ'ವು ಕವಿ ರಾಘವಾಂಕನ ಕಾವ್ಯ ಸಿದ್ಧಿಯ ಹೆಗ್ಗುರುತು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಮೊದಲನೆಯ ಷಟ್ಪದಿ ಕಾವ್ಯ. ರಾಘವಾಂಕನ ಕವಿತಾ ಶಕ್ತಿ ವಿಶೇಷಗಳೆಲ್ಲ ಇಲ್ಲಿ ತನಿಗೊಂಡು ಮೇಳಗೊಂಡಿವೆ. ಅವನ ಧಾರ್ಮಿಕತೆಯನ್ನು ಮೀರಿ ಬಂದ ಅಲೌಕಿಕವಾದ ಲೌಕಿಕ ಕಾವ್ಯ, ಕನ್ನಡಕ್ಕೆ ಹಾಗೂ ತನ್ಮೂಲಕ ಭಾರತೀಯ ವಾಙ್ಮಯಕ್ಕೆ ಅವಿರಳವಾದ ಅವನ ನಲ್ಗಾಣಿಕೆ.

'ಈ ಕೃತಿಗೆ ಪ್ರತಿಯಿಲ್ಲ,' 'ತೊಡಗಿದ ನೀ ಮಹಾಕೃತಿಯು', 'ಇದರೊಳಗೊಂದು ಕುಂದಿಲ್ಲ', 'ಪೆರರೊಡನೆಯುಂಕೊಂಡು ಕೃತಿಯು ಪೇಳದ ಭಾಷೆ',

'ಪೊಸಕಾವ್ಯ ಕನ್ನಕೆ' ಮುಂತಾದ ಮಾತುಗಳಲ್ಲಿ ತನ್ನ ಕಾವ್ಯದ ಬಗ್ಗೆ ಕವಿಗೆ ಇರುವ ಅಭಿಮಾನ, ತನ್ನ ಕಾವ್ಯ ಶಕ್ತಿಯಲ್ಲಿ ಇದ್ದ ವಿಶ್ವಾಸ, ತನ್ನ ತನದ ಅರಿವು ಸಂಪೂರ್ಣವಾಗಿ ಇದೆ ಎಂಬುದು ವ್ಯಕ್ತವಾಗದೆ ಇರದು.

ಹರಿಶ್ಚಂದ್ರನ ಕಥೆ ವೇದ, ಪುರಾಣ. ಕಾವ್ಯಗಳಲ್ಲಿ ಪ್ರಸಿದ್ಧವಾದುದು. 'ಈ ಕಥಾ ಬೀಜದೀಬೀಜಮಂ ಬಿತ್ತಿ ಬೆಳೆಸಿದಪೆನೀ ಕಾವ್ಯವೃಕ್ಷಮಂ'. ಪೂರ್ವ ಕಥೆಯನ್ನು ಅಪೂರ್ವವಾಗಿ ಹೇಳಿದುದರಲ್ಲಿಯೇ ರಾಘವಾಂಕನ ಹೊಸತನವಿದೆ. ಭಾರತೀಯ ಸಾಹಿತ್ಯದಲ್ಲಿಯೇ ಕಾಣದೊರೆಯದ ನೂತನ ಸನ್ನಿವೇಶ ಸೃಷ್ಟಿ, ಕೃತಿ ಬಂಧ ಇಲ್ಲಿದೆ ಎಂಬುದು ಹೆಮ್ಮೆಯ ಮಾತು.

ರಾಘವಾಂಕನ ಕಲಾತಿಶಯಕ್ಕೆ ವಶಿಷ್ಟ ವಿಶ್ವಾಮಿತ್ರರ ಸಂದರ್ಭ, ಹರಿಶ್ಚಂದ್ರ ಹೊಲತಿಯರ ಸಂದರ್ಭ; ರಾಜ್ಯ ಸಮರ್ಪಣೆಯ ಸಂದರ್ಭ, ಮೊದಲಾದವುಗಳನ್ನು ಎತ್ತಿತೋರಿಸಬಹುದು. ಎಲ್ಲ ಸಂದರ್ಭಗಳಲ್ಲಿಯೂ ರಾಘವಾಂಕನ ನಾಟ್ಯ ಪ್ರತಿಭೆ ಅದ್ಭುತ ರಮ್ಯವಾಗಿ ಬೆಳಗಿದೆ. ಮೂಲಸತ್ವದಲ್ಲಿ ಹರಿಶ್ಚಂದ್ರ ಕಾವ್ಯ ಒಂದು ಅತ್ಯಂತ ಪ್ರಭಾವಿಯಾವ ನಾಟಕವೇ ಆಗಿದೆ. ಇದು ರುದ್ರ ಅಂಶಗಳುಳ್ಳ ಭದ್ರನಾಟಕವೇ ಸರಿ, ವಸ್ತು ರಚನೆ, ಪಾತ್ರ ಪೋಷಣೆ' ರಸ ನಿರೂಪಣೆ, ಸಂವಾದ ರಚನೆ, ಹೀಗೆ ಯಾವ ಮಗ್ಗುಲಿನಿಂದ ನೋಡಿದರೂ ಈ ಕೃತಿ ಘನತೆಯನ್ನು ಹೊರಹೊಮ್ಮಿಸುತ್ತದೆ. ಇಲ್ಲಿ ನಡುಗನ್ನಡದ ಸಮ್ಮಿಶ್ರರೂಪಗಳಿದ್ದರೂ ಅಚ್ಚಗನ್ನಡದತ್ತ ಅವನ ಒಲವು ಹೆಚ್ಚಿವೆ. ತಾಳಲಯ, ನಾದಗುಣ ಇವನ ಪದ್ಯಗಳಲ್ಲಿ ಪರಿಣತವಾಗಿವೆ. ಇಲ್ಲಿಯ ಭಾವ ರಸ ಛಂದಃಶೈಲಿಗಳ ಸಮರಸದ ಸಾಧನೆಯನ್ನು ಕೊಂಡಾಡಬೇಕು.

ಕೆಲಕಡೆ ತಪ್ಪುಗಳೂ ಇವೆ. ವಿಶ್ವಾಮಿತ್ರನ ಮನಃಪರಿವರ್ತನೆ ಆಕಸ್ಮಿಕವಾಗಿದೆ. ಹರಿಶ್ಚಂದ್ರನ ಸೂಳಿಗೇರಿಯ ಸಂಚಾರಕ್ಕೆ ಒಂದು ಸ್ಥಲವೇ ಮೀಸಲಾಗಿದೆ. ಶೈಲಿ ಆಗೀಗ ಪ್ರಾಸಮೋಹ ಹಾಗೂ ಶಬ್ದ ಜಾಲದಲ್ಲಿ ಸಿಲುಕಿದೆ.

ಊ) ಸೋಮನಾಥ ಚರಿತೆ— ಸೋಮನಾಥ ಚರಿತೆಯು ನಿಜವಾಗಿ ಸೌರಾಷ್ಟ್ರದ ಶಿವಭಕ್ತನಾದ ಆದಯ್ಯನ ಚರಿತ್ರೆಯಾಗಿದೆ. ಇಷ್ಟೇ ಅಲ್ಲದೆ ಆದಯ್ಯನು ಪುಲಿಗೆರೆಗೆ ಬಂದು ಸೌರಾಷ್ಟ್ರದ ಸೋಮನಾಥನನ್ನು ಅಲ್ಲಿ ಪ್ರತಿಷ್ಠೆ ಮಾಡಿ ಪವಾಡಗಳನ್ನು ಮೆರಿದು ಜೈನರನ್ನು ಶಿವಭಕ್ತರನ್ನಾಗಿ ಮಾಡಿದ ಕಥೆ

ಹರಿಹರನ 'ಆದಯ್ಯನ ರಗಳೆ' ಇದಕ್ಕೆ ಸ್ಫೂರ್ತಿಯಿತ್ತಿದ್ದರೂ ಇದು ಅದರ ಅನುವಾದವಲ್ಲ, ಛಾಯೆಯಲ್ಲ, ಹೊಸ ಸನ್ನಿವೇಶಗಳನ್ನು ಅಳವಡಿಸಿ ಕೊಳ್ಳಲಾಗಿದೆ. ಆದರೆ ಕಥಾವಸ್ತುವಿನಲ್ಲಿ ಹೊಂದಿಕೆಯಿಲ್ಲ. ಅಷ್ಟಾದಶ ವರ್ಣನೆಗಳ ಗೀಳು ಬಿಟ್ಟಿಲ್ಲ. ಪ್ರಮಾಣಜ್ಞಾನ ಔಚಿತ್ಯ ದೃಷ್ಟಿ ಕೈಬಿಟ್ಟಿವೆ. ಆದಯ್ಯನು ಸೌರಾಷ್ಟ್ರ ಬಿಟ್ಟು ಬರುವಾಗ ಹೆಂಡತಿಯನ್ನು ನೆನೆಯುವದಿಲ್ಲ. ಪುಲಿಗೆರೆಗೆ ಹೋದಮೇಲಂತೂ ಪದ್ಮಾವತಿಯ ಪ್ರಣಯ ಪ್ರಸಂಗದಲ್ಲಿ ಅವಳನ್ನು ಸಂಪೂರ್ಣವಾಗಿ ಮರೆಯುತ್ತಾನೆ. ಒಂದೆರಡು ತಿಂಗಳುಗಳ ಪ್ರಣಯದ ನಂತರ ಪದ್ಮಾವತಿಯು ಜೈನಳೆಂದು ಅರಿಯುತ್ತಾನೆ. ನಂತರ ಅವಳನ್ನು ಶಿವಭಕ್ತಳನ್ನಾಗಿಸುತ್ತಾನೆ.

ಪಾತ್ರ ಪೋಷಣೆಯಲ್ಲಿ ಕುಂದು ಕೊರತೆಯಿದೆ, ವರ್ಣನೆಗಳಲ್ಲಿ ಸಾಂಪ್ರದಾಯಿಕತೆ ಇದೆ ಶೈಲಿಯಲ್ಲಿ ವಿಷಮತೆ ಕಂಡುಬರುತ್ತದೆ. ಆದರೂ ಆದಯ್ಯನ ಮಾಹೇಶ್ವರ ಭಕ್ತಿ, ಏಕ ನಿಷ್ಠೆ, ಕಷ್ಟ ಸಹನೆಗಳನ್ನು ಸುಂದರವಾಗಿ ನಿರೂಪಿಸಲಾಗಿದೆ. ಇಲ್ಲಿಯ ಸಂವಾದ ರಚನೆಯಲ್ಲಿ ನಾಟಕೀಯತೆಯಿದೆ.

ಜೈನ ಮತೀಯರಿಗೆ ಇಷ್ಟೇ ಏಕೆ ಸುಸಂಸ್ಕೃತ ಜನರಿಗೆ ಹಿಡಿಸದ ಪ್ರಸಂಗ ವೆಂದರೆ ಪದ್ಮಾವತಿಯನ್ನು ಆದಯ್ಯನೊಡನೆ ಗುಪ್ತವಾಗಿ ಶಯ್ಯಾಗೃಹದಲ್ಲಿ ಕೂಡಿಸಿದ ಸನ್ನಿವೇಶವಿದೆ. ರಾಜಗೃಹದಲ್ಲಿ ಅನೇಕ ದಿನಗಳವರೆಗೆ ರಾಜನಿಗೆ ಅರಿಯದೇ ಇದು ನಡೆದುದು ಅಚ್ಚರಿಯೇ ಸರಿ. ನಿರ್ದಿಷ್ಟ ವೇಳೆಯಲ್ಲಿ ಆದಯ್ಯನು ಪುಲಿಗೆರೆಗೆ ತಿರುಗಿ ಬಂದುದು ಅಸಹಜವೆನಿಸದೇ ಇರಲಾರದು. ಪವಾಡವೊಂದೇ ಇದಕ್ಕೆ ಸಮ್ಮತಿಸಬೇಕಷ್ಟೆ.

ಋ) ಸಿದ್ಧರಾಮಚರಿತ್ರ — ಇದು ದೊಡ್ಡ ಕಾವ್ಯ. ಸೊನ್ನಲಿಗೆಯ ಸಿದ್ಧರಾಮನ ಚರಿತ್ರ ಇದರ ವಿಷಯ, 'ಜಗದ ಗುರು ಸಿದ್ಧರಾಯನಾಥಂ ಮನುಜನಲ್ಲ, ಕಾರಣ ರುದ್ರ', 'ಎವೆಯಿಕ್ಕದುಸಿರಿಕ್ಕದುಣ್ಣದ ಜಿತೇಂದ್ರಿಯತ್ವವ ತಳೆದ ನಿರ್ಮಾಯನೆನಿಸುವ ಶಿವಜ್ಞಾನಿ', ಬಯಲು ಬಲಿದಾಕಾರವಾದಂತಿಹ ಮಹಾಂತ', ಇದು ಸಿದ್ಧರಾಮನ ಹೊಗಳಿಕೆ. ಅವನ ಜನನ, ಬಾಲ್ಯ, ಸಿದ್ಧಿ, ಕಾರ್ಯ ಎಲ್ಲವೂ ವಿಲಕ್ಷಣವಾಗಿವೆ.

ಈ ಕಾವ್ಯವು ಕರ್ಮಯೋಗಿಯಾದ ಸಿದ್ಧರಾಮನ ಬಗ್ಗೆ ಇದ್ದ ಜನಜನಿತ ವಾದ ಚಾರಿತ್ರಿಕ ಸತ್ಯದ ತಳಹದಿಯ ಮೇಲೆ ನಿಲ್ಲಿಸಿದ ಅತಿಶಯೋಕ್ತಿಯ

ಸುವರ್ಣ ಮಂದಿರದಂತೆ ಭಾಸವಾಗುತ್ತದೆ. ಅವನ ವಿಕಾಸಶೀಲ ವ್ಯಕ್ತಿತ್ವ ಇಲ್ಲಿ ಅರಳಿಲ್ಲ.

ಪ್ರಾರಂಭಿಕ ಸಂಧಿಗಳಲ್ಲಿ ಇದು 'ಸೊಗಸಿನ ಸುಗ್ಗಿ, ರಸದ ಮಡು'ವಾಗಿದೆ, 'ಸುಳಿವ ಶಾಸನವೆನಿಸುವ ಸತ್ಕೃತಿಯೂ ಆಗಿದೆ. ಮುದ್ದಣ್ಣನ ಕರುಣ, ಸಿದ್ಧರಾಮನ ಭಕ್ತಿ ಇವೆರಡೂ ರಸದ ಮೇಲೆ ರಸವಾಗಿ ಹರಿದು ಬಂದು ವಿಸ್ಮಯಗೊಳಿಸುತ್ತವೆ. ಇದು 'ಕಥಾರಸದ ಲಹರಿ', ಇಲ್ಲಿ ರಾಘವಾಂಕನ ಕಥನ ಕಲೆ ಪಳಗಿದೆ.

ಸಾಂಪ್ರದಾಯಕ ವರ್ಣನೆಗಳು ಬಂದಿದ್ದರೂ ಅವೆಲ್ಲ ಹಿತಮಿತವಾಗಿವೆ. ವಸ್ತುರೂಪ, ಸತ್ವ ಎಲ್ಲ ದೃಷ್ಟಿಯಿಂದಲೂ ಕ್ರಾಂತಿಯನ್ನೊಳಗೊಂಡ ಸ್ವತಂತ್ರ ಕಾವ್ಯವಿದು. ಕನ್ನಡ ಸಾಹಿತ್ಯದಲ್ಲಿಯೇ ಉನ್ನತ ಸ್ಥಾನವನ್ನಲಂಕರಿಸಿದ ಶ್ರೇಷ್ಠ ತರಗತಿಯ ಕಲಾಕೃತಿ, ಮಾನವ್ಯದ ಮಂದಾರವನ್ನರಳಿಸಿದ ಮಹಾಕಾವ್ಯ, ಹರಿಶ್ಚಂದ್ರ ಕಾವ್ಯ.

ಪ್ರಶ್ನೆ ೧೬- ಟಿಪ್ಪಣಿ ಬರೆಯಿರಿ— ಅ) ನೇಮಿಚಂದ್ರ ಆ) ರುದ್ರ ಭಟ್ಟ ಇ) ಲೀಲಾವತಿ ಈ) ನೇಮಿನಾಥಪುರಾಣ ಉ) ಜಗನ್ನಾಥ ವಿಜಯ.

ಉತ್ತರ— ಅ) ನೇಮಿಚಂದ್ರ— ಬ್ರಾಹ್ಮಣ ಕವಿಯಾದ ಇವನ ಕಾಲ ೧೨ನೆಯ ಶತಮಾನದ ಕೊನೆಯು. ಹೊಯ್ಸಳ ವೀರಬಲ್ಲಾಳನ ಕಾಲದವನು ಅವನ ಆಸ್ಥಾನದಲ್ಲಿ ಪಂಡಿತ ಕವಿಯು. ವೀರಬಲ್ಲಾಳನ ಮಹಾಪ್ರಧಾನವಾದ ಪದ್ಮನಾಭನು ಇವನಿಂದ ಜೈನ ಪುರಾಣ, 'ನೇಮಿನಾಥ ಪುರಾಣ'ವನ್ನು ಬರೆಯಿಸಿದನು. ಇಲ್ಲಿ ತನ್ನನ್ನು 'ಜಿನಸಮಯ ದೀಪಕ'ನೆಂದು ಕರೆದುಕೊಂಡಿದ್ದಾನೆ. ಇವನ ಇನ್ನೊಂದು ಗ್ರಂಥ 'ಲೀಲಾವತಿ. ನೇಮಿ 'ಚಂದ್ರನು ಸಾರಸ್ವತವಾದ'ನಾದ ಮಹಾಪಂಡಿತ, ಶೃಂಗಾರಪ್ರಿಯ. ಲೀಲಾವತಿಯನ್ನು ರಟ್ಟರಾಜ ಲಕ್ಷ್ಮಣದೇವನ ಆಶ್ರಯದಲ್ಲಿ ಬರೆದನು.

ಮಧುರ ಕವಿಯು, 'ನೇಮಿ ಜನ್ಮಮರಿರ್ವರೆ ಕರ್ನಾಟಕ ಕೃತಿಗೆ ಸೀಮಾ ಪುರುಷರ್' ಎಂದು ನೇಮಿಚಂದ್ರನ ಕಾವ್ಯ ಪ್ರಭುತ್ವವನ್ನು ಮುಕ್ತ ಕಂಠದಿಂದ ಹೊಗಳಿದ್ದಾನೆ. ಶೃಂಗಾರಂ ಕಾವ್ಯ ಬೋಧನದೊಳ್ ತಾಂ ಪೆಂಗೆಯ್ದು ಮೆಯ್ಮೆಯೊಳಿವಂ ಶೃಂಗಾರ ಕಾರಾಗೃಹಂ' ಎಂದು ತನ್ನನ್ನು ಕವಿಯು ಬಣ್ಣಿಸಿಕೊಂಡಿ

ದ್ದರಿಂದ ಶೃಂಗಾರ ರಸ ನಿರೂಪಣೆಯಲ್ಲಿ ಕವಿಗೆ ಇದ್ದ ಆಸಕ್ತಿ ವ್ಯಕ್ತವಾಗದಿರದು. ಅಲ್ಲದೆ 'ಸ್ತ್ರೀ ರೂಪಮೆ ರೂಪಂ, ಶೃಂಗಾರಮೆ ರಸಂ' ಎಂದಾಗಲಂತೂ ಇದು ಸುಸ್ಪಷ್ಟವಾಗಿದೆ.

'ಲೀಲಾವತಿ ಬಹುತರವಾಗಿ ಅವನ ಪ್ರಥಮಕೃತಿ; ಶೃಂಗಾರ ರಸವೊಂದನ್ನೇ ನಿರೂಪಿಸಿದ ಚಂಪೂ ಕಾವ್ಯ. ಇದೊಂದು ಪ್ರಣಯ ರಮ್ಯ ಕಥೆ. ಸುಬಂಧುವಿನ 'ವಾಸವದತ್ತೆ' ಇದಕ್ಕೆ ಸ್ಫೂರ್ತಿಯಾಗಿದೆ. ಶ್ರೀ ಕುಂದಣಗಾರರ ಅಭಿಪ್ರಾಯದಂತೆ ಇದರ ಕಥಾವಸ್ತುವಿನ ಮೇಲೆ ಬಾಣಸುರಾಖ್ಯಾನ, ಸ್ವಪ್ನ ವಾಸವದತ್ತ, ಬಾಣ ಕಾದಂಬರಿ, ವಿಕ್ರಮೋರ್ವಶಿಯ ಇವುಗಳ ಪರಿಣಾಮವಾಗಿರಬೇಕು. ಜೈನ ಮತೀಯತೆಯ ಝಳಕು ಅಲ್ಲಲ್ಲಿ ಹಾದಿದೆ. ಕಥಾವಸ್ತುವಿಗಿಂತ ವರ್ಣನೆಗಳೇ ಮುಖ್ಯವಾಗಿವೆ. ಲೀಲಾವತಿ ಅನುವಾದವಲ್ಲ, ಅನುಕರಣವಲ್ಲ, ಸ್ವತಂತ್ರ ಕಾವ್ಯಭಾವಗಳೂ, ಕಲ್ಪನೆಗಳೂ ಇದರಲ್ಲಿ ಹೇರಳವಾಗಿವೆ. ಕಲ್ಪನಾ ಚಮತ್ಕೃತಿಯಲ್ಲಿ, ಶಬ್ದ ಸಂಪತ್ತಿಯಲ್ಲಿ ನೇಮಿಯದು ಮೇಲುಗೈಯಾಗಿದೆ. ಶೃಂಗಾರಮಯವಾದ ಈ ಕಾವ್ಯವನ್ನು ರಚಿಸಿ ನೇಮಿಚಂದ್ರನು ವೈಶಿಷ್ಟ್ಯವನ್ನು ಮೆರೆದಿದ್ದಾನೆ.

ಇವನ ಎರಡನೆಯ ಚಂಪೂಕಾವ್ಯ 'ನೇಮನಾಥ ಪುರಾಣ' ಜಿನ ಕಥೆಯೊಳ್ ಸಂಧಿಸಿ ವಸುದೇವಾಚ್ಯುತ ಕಂದರ್ಪರ ಕಥೆಗಳನಿತುಮಂ ವಿರಚಿಸವೆಂ ಎಂದಿದ್ದಾನೆ. ಇದು ಮುಖ್ಯವಾಗಿ ಕೃಷ್ಣಕಥೆ ಗೋವರ್ಧನೋದ್ಧರಣದಿಂದ ಕಂಸವಧೆಯವರೆಗಿನ ಕಥಾನಕವು ಇಲ್ಲಿದೆ. ಇದರಿಂದ ಕವಿಯು ತನ್ನ ಜೈನನಿಷ್ಠೆ ಅರಸನ ವಿಷ್ಣುಭಕ್ತಿ ಎರಡಕ್ಕೂ ಅವಸರ ದೊರಕಿಸಿಕೊಂಡಿದ್ದಾನೆ. 'ಚಾವುಂಡರಾಯ ಪುರಾಣ' ಹಾಗೂ ಕರ್ಣಪಾರ್ಯನ 'ನೇಮಿನಾಥ ಪುರಾಣ'ಗಳೂ ಇದೇ ವಿಷಯನ್ನೊಳಗೊಂಡಿವೆ. ಕವಿಯು ಸಂಸ್ಕೃತ–ಪ್ರಾಕೃತ ಆಕರಗಳನ್ನು ನೋಡಿರಬಹುದಾದರೂ 'ಚಾವುಂಡರಾಯ ಪುರಾಣ'ವನ್ನೇ ಅವಲಂಬಿಸಿದ್ದಾನೆ ಈಗ ದೊರೆತ ೮ ಆಶ್ವಾಸಗಳಲ್ಲಿ ಸಾಮಾನ್ಯವಾದ ಭವಾಭವಳಿಯ ಕ್ಲಿಷ್ಟತೆ, ಮತಪ್ರಚಾರದ ನೀರಸತೆ ಇಲ್ಲ. ಪಾತ್ರಗಳು ಜೀವಕಳೆ ತುಂಬಿವೆ. ಸನ್ನಿವೇಶಗಳು ರಸಮಯವಾಗಿವೆ. ಇಲ್ಲಿ ಬರುವ ವ್ಯಕ್ತಿಗಳು ನಿರ್ಜೀವ ಗೊಂಬೆಗಳಲ್ಲ, ಸಾಮಾನ್ಯ ಮನುಷ್ಯರು.

ಅ) ರುದ್ರಭಟ್ಟ— ಹೊಯ್ಸಳ ವೀರಬಲ್ಲಾಳನ ಆಳಿಕೆಯಲ್ಲಿ ಇದ್ದ ಕವಿ ಈತನು. ವೀರಬಲ್ಲಾಳನ ಮಂತ್ರಿಯೂ ಪಂಡಿತನೂ ಆದ ಚಂದ್ರಮೌಳಿಯು ರುದ್ರನು ಬರೆದ ವಿಷ್ಣು ಪುರಾಣವನ್ನು ಕೇಳಿ ಕೊಂಡಾಡಿದನು. ಇವನ ಕೃತಿ 'ಜಗನ್ನಾಥ ವಿಜಯ', 'ರಸಕಳಿಕೆ' ಎಂಬ ಇನ್ನೊಂದು ರಸಶಾಸ್ತ್ರ ಕುರಿತಾದ ಗ್ರಂಥ. ಬಹುತರ ಮದ್ರಾಸ ಪ್ರಾಚ್ಯ ವಸ್ತು ಕೋಶಾಗಾರದಲ್ಲಿ ಕಾಣಲಿರುವ 'ರಸಕಳಿಕೆ' ಎಂಬ ಸಂಸ್ಕೃತ ಗ್ರಂಥವೇ ಇದಾಗಿರಲೂಬಹುದು. ಆದರೆ ಈ ಹೆಸರಿನ ಕನ್ನಡ ಗ್ರಂಥ ದೊರೆತಿಲ್ಲ.

ರುದ್ರಭಟ್ಟನು ಸ್ಮಾರ್ತ ವೈದಿಕ ಬ್ರಾಹ್ಮಣ ಅಲ್ಲದೇ ಹರಿಹರದಲ್ಲಿ ಭೇದವನ್ನು ಮನ್ನಿಸದ ಭಾಗವತ ಸಂಪ್ರದಾಯದವ ವಿಶಾಲವಾದ ಭಾಗವತ ದೃಷ್ಟಿ, ಉಪನಿಷದ್ದರ್ಶನ ರುದ್ರಭಟ್ಟನ ಕಾವ್ಯದಲ್ಲಿ ಹೆಜ್ಜೆ ಹೆಜ್ಜೆಗೆ ಮೂಡಿಬಂದಿವೆ.

ಜಂಗಮಂ ನುಂಗುವ ಶೂಲಿ ನೀನೇ ಜಗಮಂ ಮಾಳ್ಪಬ್ಜಜಂ ನೀನೆ ತ- |
ಜ್ಜಗಮಂ ರಕ್ಷಿಪ ವಿಷ್ಣು ನೀನೆ ಜಂಗಮಂ ಪೋ ನೀನೇ ಸರ್ವೇಶ ಶ- |
ರ್ವಗ ಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಭಿನ್ನವಾಗಿರ್ಪ ವ- |
ಸ್ತುಗಳಿಲ್ಲ ಈ ರಿಪುಭಿನ್ನನಾದನಿದು ಚಿತ್ರಂ ಪದ್ಮ ಪತ್ರಾಂಬಕಾ ||

ಎಂಬ ಪದ್ಯದಲ್ಲಿ ರುದ್ರಭಟ್ಟನ ದರ್ಶನ ಮತ್ತು ಕಲ್ಪನಾ ಚಮತ್ಕೃತಿ ಏಕ ಜೀವವಾಗಿ ಬಂದಿದೆ. ಶಿವನು ವಿಷ್ಣುವನ್ನು ಕುರಿತು 'ದ್ವಯ ಭಾವಂ ನಮಗಿಲ್ಲಬಲ್ಲವರೇ ನಾನುಂ ನೀನುಂ ಈ ಮಾತ....ಏಕಮೂರ್ತಿಯು ಮೂರ್ತಿತ್ರಯವಾಯ್ತು' ಎಂದು ಹೇಳಿದ್ದನ್ನು ನೆನಸಿದರೆ ರುದ್ರಭಟ್ಟನು ದೇವನೊಬ್ಬ ನಾಮ ಹಲವು ಎಂದು ನಂಬಿದವರಲ್ಲಿ ಒಬ್ಬನೆಂದು ತಿಳಿಯದೆ ಇರದು.

ಬ್ರಾಹ್ಮಣ ಕವಿಗಳು ಧಾರ್ಮಿಕ ವಿಷಯವನ್ನು ಕನ್ನಡದಲ್ಲಿ ಬರೆಯಬಹುದು ಎಂಬ ಮಾನಸಿಕ ಹೊಯ್ದಾಟ ಇನ್ನೂ ಇರುವಾಗ ನಾಗವರ್ಮಾಚಾರ್ಯನು ಮಾತ್ರ ತಾತ್ವಿಕವಾದ ವೈರಾಗ್ಯ ಶತಕವನ್ನು ರಚಿಸಿದನು. ಅವನ ತರುವಾಯ ವಿಷ್ಣು ಪುರಾಣದ ಆಧಾರದ ಮೇಲೆ ಭಕ್ತಿ ಪ್ರಧಾನವಾದ ಒಂದು ಧಾರ್ಮಿಕ ಕಥನ ಕಾವ್ಯವನ್ನು ರುದ್ರಭಟ್ಟನೇ ಮೊದಲಿಗನಾಗಿ ಬರೆದನು. ಈ ದೃಷ್ಟಿಯಿಂದ ಇವನದು ಸಾಹಸವೇ ಸರಿ. ಇಲ್ಲಿ ಅವನು 'ರುದ್ರಭಟ್ಟ ಕೃತಿ ವೈಷ್ಣವ ಕಾವ್ಯದಸಾರ್ಣಂ ತುಳುಂಕಾಡುಗೆ ಭೂಮಿನಿಲ್ವಿನಂ' ಎಂದು ಹೇಳಿಕೊಂಡಿದ್ದಾನೆ ಅಭಿಮಾನ ಪೂರ್ವಕವಾಗಿ ರುದ್ರಭಟ್ಟ ಕವಿ.

ರುದ್ರಭಟ್ಟನ ಶೈಲಿಯಲ್ಲಿ ಸಂಸ್ಕೃತ ಪೌಢಿಮೆಯು ಮುದ್ರೆಯಿದೆ, ಅಚ್ಚ ಗನ್ನಡ ದೇಶಿಯು ಅಚ್ಚಿದೆ. ಚಂಪೂ ರಚನೆಯಲ್ಲಿ ಇವನು ಬಲ್ಲಿದನು. ಪ್ರಸಾದ ಗುಣಲಾಲಿತ್ಯ ಇವನಲ್ಲಿ ಹೆಚ್ಚಿದೆ. ಭಕ್ತಿರಸ ಇಲ್ಲಿ ಉಳಿದ ರಸಗಳಿಗೆ ಮಿಕ್ಕಿ ಹರಿದಿದೆ. ಸ್ವತಂತ್ರ ಕಲ್ಪನೆಗಳಲ್ಲದೆ. ಉತ್ಪ್ರೇಕ್ಷೆ, ರೂಪಕ, ಅತಿಶಯೋಕ್ತಿ ಮೊದಲಾದ ಅಲಂಕಾರಗಳನ್ನು ಹೃದ್ಯವಾಗಿ ಎರಕ ಹೊಯ್ಯಲಾಗಿದೆ ರುದ್ರ ಭಟ್ಟನಿಂದ. ವಿಶಾಲ ದೃಷ್ಟಿಯಿಂದ ಮೇಲಾದ ಭಕ್ತಿ ಕಾವ್ಯವನ್ನು ರಚಿಸಿ ರುದ್ರಭಟ್ಟನು ಸತ್ಕವಿಯ ಮನ್ನಣೆಯ ಸ್ಥಾನಕ್ಕೆ ಅರ್ಹನಾಗಿದ್ದಾನೆ.

ಇ) ಲೀಲಾವತಿ— ಇದರ ಕರ್ತೃ ನೇಮಿಚಂದ್ರ, 'ಸಾರಸ್ವತಪಾರ' ನಾದ ಮಹಾಪಂಡಿತ, ಶೃಂಗಾರಪ್ರಿಯ, ಈ 'ಲೀಲಾವತಿ ಪ್ರಬಂಧ'ವನ್ನು ರಟ್ಟರಾಜ ಲಕ್ಷಣ ದೇವನ ಆಶ್ರಯದಲ್ಲಿ ಬರೆದನು. ಇದು ಅವನ ಪ್ರಥಮ ಕೃತಿಯಾಗಿರಬೇಕು. ಇದು ೧೪ ಆಶ್ವಾಸಗಳಲ್ಲಿ ಶೃಂಗಾರ ರಸವೊಂದನ್ನೇ ನಿರೂಪಿಸಿದ ಚಂಪೂ ಕಾವ್ಯ. 'ಶೃಂಗಾರಂ ಕಾವ್ಯ ಬಂಧದೊಳ್ ತಾಂ ಸೆರೆ ಗೆಯ್ದು ಮೈಮೆಯೊಳಿವಂ ಶೃಂಗಾರ ಕಾರಾಗೃಹಂ' ಎಂದು ಕವಿಯು ತನ್ನನ್ನು ಬಣ್ಣಿಸಿಕೊಂಡದ್ದನ್ನು ನೋಡಿದರೆ ಶೃಂಗಾರ ರಸಪ್ರಿಯಕವಿಯು ಪಟ್ಟವನ್ನು ಯಾರಾದರೂ ಇವನಿಗೆ ಕಟ್ಟಬೇಕು.

ಸಂಸ್ಕೃತ ಗದ್ಯ ಕಾವ್ಯವಾದ ಸುಬಂಧುವಿನ 'ವಾಸವದತ್ತೆ' ಇದಕ್ಕೆ ಸ್ಫೂರ್ತಿಯಿತ್ತಿರಬೇಕು. ಕನಸಿನಲ್ಲಿ ಒಬ್ಬರನ್ನೊಬ್ಬರು ನೋಡಿ ಪ್ರೀತಿಸಿ, ಕೂಡಿ ಅಗಲಿ ಮತ್ತೆ ಕೂಡಿದ ರಮ್ಯ ಪ್ರಣಯ ಕಥೆಯೇ ಲೀಲಾವತಿಯ ವಸ್ತುವಾಗಿದೆ, ಕಥೆಯ ನಿಮಿತ್ತದಿಂದ ವರ್ಣನೆಗಳ ವೈಖರಿ ಬೆಳಗಿದೆ. ಇದು ಬಾಣ, ಸುಬಂಧಗಳ ಬಳುವಳಿಯಾಗಿದೆ. ಕನ್ನಡ ಕಾವ್ಯ ಪ್ರಂಪಂಚಕ್ಕೆ, ನೇಮಿ ಚಂದ್ರನಲ್ಲಿಯಂತೂ ಇದನ್ನು ಸ್ಪಷ್ಟವಾಗಿ ಕಾಣಬಹುದು.

ಇಲ್ಲಿಯ ಕಥೆಯ ಪೂರ್ವಾರ್ಧವನ್ನೆಲ್ಲ ಸುಬಂಧುವಿನಿಂದಲೇ ತೆಗೆದುಕೊಳ್ಳ ಲಾಗಿದೆಯಲ್ಲದೆ ಶ್ಲೇಷೋಸಮೆ, ವಿರೋಧಾಭಾಸಗಳ ಬಗ್ಗೆ, ಕಲ್ಪನೆಗಳ ಸಾಮ್ಯ ನೋಡಿದರೂ ಅವನದೇ ಪ್ರಭಾವ ಒಡೆದು ಕಾಣುತ್ತದೆ. ಉತ್ತರಾರ್ಧದಲ್ಲಿ ವ್ಯತ್ಯಾಸವಿದೆ. ಸುಬಂಧುವಿನ ವಾಸವದತ್ತೆ ಶಿಲಾಪ್ರತಿಮೆಯಾಗಿ ಕಂದರ್ಪ ಕೇತುವಿನ ಸ್ಪರ್ಶದಿಂದ ಜೀವತಳದಾದರೆ ಇಲ್ಲಿ ಲೀಲಾವತಿಯು ಬಳ್ಳಿಯಾಗಿ

ಕಂದರ್ಪ ದೇವನ ಅಪ್ಪುಗೆಯಿಂದ ಮೊದಲಿನಂತೆ ಆಗುತ್ತಾಳೆ ಶ್ರೀ ಕುಂದಣ ಗಾರರ ಅಭಿಪ್ರಾಯದಂತೆ 'ಲೀಲಾವತಿ'ಯ ಕಥಾವಸ್ತುವಿನ ಮೇಲೆ ಬಾಣಾ ಸುರಾಖ್ಯಾನ, ಸ್ವಪ್ನವಾಸವದತ್ತ, ಬಾಣ ಕಾದಂಬರಿ, ವಿಕ್ರಮೋರ್ವಶಿಯ ಇವುಗಳ ಪರಿಣಾಮವಾಗಿದೆ.

ಕೆಲ ನವೀನ ಕಥಾಂಶಗಳೂ ಇವೆ. ಜೈನ ಮತದ ಒಲವನ್ನೂ ಸಾಧ್ಯ ಮಾಡಿಕೊಳ್ಳಲಾಗಿದೆ. ಕಥೆಗೆ ಭಾರವೆನಿಸಬಹುದಾದ ವರ್ಣನೆಗಳೇ ಇಲ್ಲಿ ಹೆಚ್ಚು. ಈ ವರ್ಣನೆಗಳು ಒಮ್ಮೊಮ್ಮೆ ಬಂದು ಆಶ್ವಾಸವನ್ನೇ ಆಕ್ರಮಿಸಿವೆ. ಸನ್ನಿವೇಶ ಸ್ವಭಾವಕ್ಕೆ ಅಲ್ಲಲ್ಲಿ ಉಚಿತವಾದ ರಸಚಿತ್ರಗಳಿವೆ. ಕಂದರ್ಪ ದೇವನ ಚಿತ್ರ ಹೃದ್ಯವಾಗಿದೆ.

ಸ್ವತಂತ್ರ ಉನ್ನತ ಕಲ್ಪನೆಗಳನ್ನು ಉತ್ಪ್ರೇಕ್ಷೆ, ರೂಪಕ, ಅತಿಶಯೋಕ್ತಿ ಮುಂತಾದ ಶ್ರೇಷ್ಠ ಅಲಂಕಾರಗಳಲ್ಲಿ ಎರಕ ಹೊಯ್ಯುವದರಲ್ಲಿ ಇವನು ನಿಪುಣನು. ಸ್ವಭಾವೋಕ್ತಿಯಲ್ಲಿ ಇವನದು ಮೇಲುಗೈ. ಇಲ್ಲಿ ಸಂಸ್ಕೃತ ಪ್ರಾಢಿಮೆಯ ಮುದ್ರೆಯಿದೆ, ಅಚ್ಚ ಕನ್ನಡ ದೇಶಿಯ ಕೆಚ್ಚಿದೆ. ಶೃಂಗಾರ ಪ್ರಿಯತೆಯೇ ಇಲ್ಲಿ ಸ್ಫುಟವಾಗಿ ವ್ಯಕ್ತಗೊಂಡಿದೆ.

'ಲೀಲಾವತಿ' ಅನುಕರಣವಲ್ಲ, ಅನುವಾದವಲ್ಲ. ಸ್ವತಂತ್ರ ಕಾವ್ಯ ಭಾಗಗಳೂ ಕಲ್ಪನೆಗಳೂ ಇಲ್ಲಿ ಹೇರಳವಾಗಿವೆ. ಕಲ್ಪನಾಚಮತ್ಕೃತಿಯಲ್ಲಿ, ಶಬ್ದ ಸಂಪತ್ತಿಯಲ್ಲಿ ನೇಮಿಚಂದ್ರನದು ಮೇಲುಗೈ. 'ಸ್ತ್ರೀರೂಪಮೆರೂಪಂ ಶೃಂಗಾರಮೇ ರಸಂ' ಎಂಬ ಪ್ರತಿಜ್ಞೆಗನುಸರಿಸಿ ಶೃಂಗಾರರಸಮಯವಾದ ಕಾವ್ಯವನ್ನು ರಚಿಸಿ ಕವಿಯು ತನ್ನ ವೈಶಿಷ್ಟ್ಯವನ್ನು ಮೆರೆದಿದ್ದಾನೆ.

ಈ) **ನೇಮಿನಾಥ ಪುರಾಣ**— ಕಂಸವಧೆಯ ವರೆಗಿನ ಎಂಟೇ ಆಶ್ವಾಸಗಳು ಉಪಲಬ್ಧವಿರುವದರಿಂದ ಇದಕ್ಕೆ 'ಅರ್ಧನೇಮಿ' ಎಂದೂ ಕರೆ ಯುವದುಂಟು. ಇದನ್ನು ಬರೆದವರು ನೇಮಚಂದ್ರ. 'ಜಿನ ಕಥೆಯೊಳ್ ಸಂಧಿಸಿ ವಸುದೇವಾಚ್ಯುತಕಂದರ್ಪರ ಕಥಗಳನಿತುಮಂ ವಿರಚಿಸುವೆಂ' ಎಂದು ಹೇಳಿ ದ್ದಾನೆ. ಇಲ್ಲಿರುವ ಹರಿವಂಶ ಕುರುವಂಶ ಚರಿತ್ರ, ಮುಖ್ಯವಾಗಿ ಕೃಷ್ಣ ಕಥೆ ಯಿಂದ ತನ್ನ ಜೈನ ನಿಷ್ಠೆ, ತನ್ನರಸನ ವಿಷ್ಣುಭಕ್ತಿ ಇವೆರಡನ್ನೂ ವ್ಯಕ್ತ ಗೊಳಿಸಲು ಅನುಕೂಲವಾಗಲೆಂದೇ ಈ ವಿಷಯವನ್ನು ಕವಿಯು ಆಯ್ಕೆ ಮಾಡಿಕೊಂಡಿದ್ದಾನೆ.

ಈ ಮೊದಲು 'ಚಾವುಂಡರಾಯ ಪುರಾಣ' ಹಾಗೂ ಕರ್ಣಪಾರ್ಯನ 'ನೇಮನಾಥ ಪುರಾಣ'ಗಳಲ್ಲಿ ಇದೇ ವಿಷಯ ನಿರೂಪಿಸಲ್ಪಟ್ಟಿದೆ. ಸಂಸ್ಕೃತ, ಪ್ರಾಕೃತ ಗ್ರಂಥಗಳೂ ಆಧಾರವಾಗಿರಬಹುದು. ಆದರೆ ವಿವರಗಳನ್ನು ಬಿಟ್ಟು ಕೃಷ್ಣ ಚರಿತ್ರೆಗೆ ಮಾತ್ರ ಪ್ರಾಧಾನ್ಯತೆಯನ್ನು ಕೊಟ್ಟು ಸ್ವತಂತ್ರ ಪ್ರಜ್ಞೆಯನ್ನು ಕವಿಯು ತೋರಿಸಿದ್ದಾನೆ.

ಜೈನ ಪುರಾಣಗಳಲ್ಲಿ ಸಾಮಾನ್ಯವಾಗಿ ಬರುವ ಭವಾವಳಿಯ ಕ್ಲಿಷ್ಟತೆ, ಮತಪ್ರಚಾರದ ನೀರಸತೆ ಇಲ್ಲಿ ಇಲ್ಲ, ಪಾತ್ರಗಳಲ್ಲಿ ಜೀವಕಳೆ ತುಂಬಿದೆ. ರಸಮಯವಾದ ಸನ್ನಿವೇಶಗಳಿಂದ ಕಥೆಯನ್ನು ನಿರೂಪಿಸಲಾಗಿದೆ. ಕಂಸವಧೆಯ ಸಂದರ್ಭವನ್ನು ರಸೋತ್ಕಟವಾಗಿ ಬಣ್ಣಿಸಲಾಗಿದೆ. ಇಲ್ಲಿ ಬರುವ ವ್ಯಕ್ತಿಗಳು ನಿರ್ಜೀವ ಗೊಂಬೆಗಳಲ್ಲ, ಸಾಮಾನ್ಯ ಮನುಷ್ಯರು. ವಸುದೇವ ಕೃಷ್ಣರು ಕಾರಣ ಪುರುಷರಾದರೂ ಅತಿ ಮಾನುಷ ಪರಿವೇಶದಲ್ಲಿ ಮುಚ್ಚಿ ಹೋಗಿಲ್ಲ. ಕಂಸ ಕೇವಲ ದುರುಳತನದ ಸಂಕೇತವಲ್ಲ; ಅವನಲ್ಲಿ ಭಯ, ಸ್ನೇಹ, ಗುರು ಭಕ್ತಿಗಳಿವೆ.

ಇಲ್ಲಿಯ ವರ್ಣನೆಗಳು ಮಿತವಾಗಿ ಸಂದರ್ಭೋಚಿತವಾಗಿವೆ. ಪ್ರತಿ ವರ್ಣನೆಯಲ್ಲಿಯೂ ನಿರೀಕ್ಷಣ ಶಕ್ತಿಯಿದೆ, ಕಲ್ಪೊನ್ನತಿಯಿದೆ, ಭಾವಾವೇಶವಿದೆ. ಇವಕ್ಕೆಲ್ಲ ಪದಪ್ರಯೋಗ ಕುಶಲತೆಯೂ ಸೇರಿ ಹೃದ್ಯವಾಗಿವೆ. ಸಭಾವೋಕ್ತಿ, ಅತಿಶಯೋಕ್ತಿಗಳನ್ನು ವೆಗ್ಗಳವಾಗಿ ಬಳಸಲಾಗಿದೆ. ಕಲ್ಪನೆಗಳ ಭವ್ಯತೆ ಚಮತ್ಕೃತಿಯಲ್ಲಿ ಆಗೀಗ ಅವು ಮುಚ್ಚಿಹೋಗಿದೆ. ಪಾಂಡಿತ್ಯ ಪ್ರಚುರತೆಗೆ ಪ್ರಾಶಸ್ತ್ಯ ದೊರೆತಿದೆಯಿಲ್ಲಿ.

ಉ) ಜಗನ್ನಾಥ ವಿಜಯ — ಹೊಯ್ಸಳ ವೀರ ಬಲ್ಲಾಳ ಆಳಿಕೆಯಲ್ಲಿ ಅವನ ಮಂತ್ರಿಯೂ ಪಂಡಿತನೂ ಆದ ಚಂದ್ರಮೌಳಿಯು ರುದ್ರಭಟ್ಟನು ಬರೆದ ವಿಷ್ಣು ಪುರಾಣದ ಕಥೆ— 'ಜಗನ್ನಾಥ ವಿಜಯ'ವನ್ನು ಕೇಳಿ ಅದನ್ನು ಕೊಂಡಾಡಿದನು. 'ಕೃಷ್ಣಕಥೆ' ಹೇಳೆಂದು ಬುಧರು ಹೇಳಲು 'ಕಾವ್ಯ ಸಮಾಧಿಯಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ವಭೋದ ಮುದ್ಯೋಗಿ ಪುದೆಂಬುದುಂ ಬಯಸಿ ಪೇಳಲೊಡರ್ಚಿದೆನೀ ಪ್ರಬಂಧಮಂ' ಎಂದು ರುದ್ರಭಟ್ಟನು ಹೇಳಿದ್ದಾನೆ.

ಇಲ್ಲಿ ಕೃಷ್ಣ ಚರಿತ್ರೆಯ ಮೂಲಕ ನಿರ್ಮಳ ತತ್ವಬೋಧೆಯಿದೆ. ಈ ಗ್ರಂಥ ರಚನೆಯ ಉದ್ದೇಶ ಭಕ್ತಿ ಮಾರ್ಗಾನುಸಾರವಾಗಿ ಜ್ಞಾನಾರ್ಜನೆಯಾಗಿದೆ. 'ವಿಷ್ಣು ಪುರಾಣ ಭಾಗವತ ಭಾರತಗಳ ಪ್ರಭಾವ ಇಲ್ಲಿದೆ. ಆದರೂ 'ಜಗನ್ನಾಥ ವಿಜಯ'ದ ರೀತಿ ವಿಸ್ತಾರವಾದ ಪ್ರೌಢಕಾವ್ಯದ್ದಾಗಿದೆ. ಕೃಷ್ಣ ಜನ್ಮದಿಂದ ಸಾಲ್ವಥೆಯ ವರೆಗೆ ಇಲ್ಲಿ ಕಥೆಯು ಹರವಿದೆ ಮೂಲದಿಂದ ಕೆಲ ವ್ಯತ್ಯಾಸಗಳನ್ನು ಇಲ್ಲಿ ಮಾಡಿಕೊಳ್ಳಲಾಗಿದೆ.

' ಈ ಯೆರಡೆ ದಂತಮಿವಂ ಪಿಡಿ ಕಂಸ ನಿನ್ನ ಭಂಡಾರದೊಳಿಕ್ಕಿಸು' ಎಂದು ಕೃಷ್ಣಬಲರಾಮರು ಆನೆಯ ಹಲ್ಲುಗಳೆರಡನ್ನು ತೂರಿ ಹೇಳಿದಾಗ ಆ ಚಿಕ್ಕ ಬಾಲಕರ ಉದ್ಧತ ಪ್ರತಾಪದಿಂದ ಕಂಸನು ಕಂಗನೆ ಕನಲ್ಲರಿದು ಸಹಜವಾಗಿದೆ. ಇಂಥ ಸನ್ನಿವೇಶಗಳು ಪ್ರಭಾವಿಯಾಗಿವೆ, ರಸವತ್ತಾಗಿವೆ. ಭಕ್ತಿರಸದ ಸಂದರ್ಭಗಳಲ್ಲಿ ರುದ್ರಭಟ್ಟನ ಪ್ರತಿಭೆ ಕಾವುಗೊಳ್ಳುತ್ತದೆ. ಇಂಥಲ್ಲಿ ಕಾವ್ಯಗುಣಕ್ಕಿಂತ ಭಕ್ತಿಭಾವಕ್ಕೆ ಪ್ರಾಮುಖ್ಯತೆ ಬರುತ್ತದೆ. ಅಷ್ಟಾದಶವರ್ಣನೆಗಳನ್ನು ತರುವ ಹವ್ಯಾಸದಲ್ಲಿ ಔಚಿತ್ಯ ಹೋಗಿದೆ.

ರುದ್ರಭಟ್ಟನ ಸ್ವತಂತ್ರ ರೂಪಕ ಶಕ್ತಿ ಇಲ್ಲಿ ಭವ್ಯವಾಗಿದೆ. ಇಲ್ಲಿ ವಿಷ್ಣು ಭಕ್ತಿಯ ಸ್ಥಾಯಿ ಇದಕ್ಕೆ ಪೋಷಕವಾಗಿ ಅದ್ಭುತವಿದೆ. ಕೃಷ್ಣ-ವಿಷ್ಣುವಿನ ಸಾಮ್ಯದಿಂದ ತೋರಿದ ಭಕ್ತಿ ಸ್ವಾರಸ್ಯವನ್ನುಂಟು ಮಾಡಿದೆ. ಇದೇ ರುದ್ರಭಟ್ಟನ 'ಕಾವ್ಯಸಮಾಧಿ'. ಇಂಥಲ್ಲಿ ಭಕ್ತಿಯು ಜ್ಞಾನದಲ್ಲಿ ಪರಿಣಮಿಸಿದೆ. 'ರಸಭಾವ ಸಂಸ್ಥಾನಕ ನೃತ್ಯಂ ಆಪರ ತತ್ತ್ವ ಸುಖಕ್ಕೆಣೆಯಾಗಿ ತೋರೆ' ಎಂದುದನ್ನು ನೋಡಬೇಕು. ಕವಿಯು ಇಟ್ಟುಕೊಂಡ ಈ ಮಹೋದ್ದೇಶವು ಬಹುಮಟ್ಟಗೆ ಫಲಿಸಿದೆ.

ರುದ್ರಭಟ್ಟನ ವಿಶಾಲವಾದ ಭಾಗವತ ದೃಷ್ಟಿ, ಉಪನಿಷದ್ದರ್ಶನ ಅವನ ಕಾವ್ಯದಲ್ಲಿ ಹೆಜ್ಜೆ ಹೆಜ್ಜೆಗೆ ಮೂಡಿ ಬಂದಿವೆ ಅಲ್ಲದೆ,

ಜಗಮಂ ನುಂಗುವ ಶೂಲಿನೀನೆ ಜಗಮಂ ಮಾಳ್ಪಬ್ಜಜಂ ನೀನೆ ತ-|
ಜ್ಜಗಮಂ ರಕ್ಷಿಪ ವಿಷ್ಣು ನೀನೆ ಜಗಮಂ ಪೋ ನೀನೆ ಸರ್ವೇ ಸ- |
ರ್ವಗ ಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಭಿನ್ನ ವಾಗಿರ್ಪ ವ- |
ಸ್ತುಗಳಿಲ್ಲ ಈ ಅಪ್ಪು ಭಿನ್ನಸಾದನಿದುಂ. ಚಿತ್ರಂ ಪದ್ಮಪತ್ರಾಂಬಕಾ ||

ಎಂಬ ಪದ್ಯದಲ್ಲಿ ರುದ್ರಭಟ್ಟನ ದರ್ಶನ ಮತ್ತು ಕಲ್ಪನಾಚಮತ್ಕೃತಿ ಏಕಜೀವವಾಗಿ ಬಂದಿವೆ. ವಿಷ್ಣುಪುರಾಣದ ಆಧಾರದ ಮೇಲೆ ಭಕ್ತಿ ಪ್ರಧಾನವಾದ ಒಂದು ಧಾರ್ಮಿಕ ಕಥನ ಕಾವ್ಯವನ್ನು ಬರೆದವನೆಂದರೆ ರುದ್ರಭಟ್ಟನೇ ಮೊದಲಿಗನು. 'ವೈಷ್ಣವ ಕಾವ್ಯ ರಸಾರ್ಣವಂ ತುಳುಂಕಾಡುಗೆ ಭೂಮಿ ನಿಲ್ವಿನಂ' ಎಂಬ ಘನೋದ್ದೇಶದಿಂದ ನಿರ್ಮಿತವಾದ ಮಹಾಕಾವ್ಯವಿದು.

ಪ್ರಶ್ನೆ ೧೭ – ಟಿಪ್ಪಣಿ ಬರೆಯಿರಿ – (ಅ) ಜನ್ನ, (ಆ) ಆಂಡಯ್ಯ (ಇ) ಕೇಶಿರಾಜ, (ಈ) ಕುಮುದೇಂದು (ಉ) ಭೀಮಕವಿ (ಊ) ಯಶೋಧರ ಚರಿತೆ, (ಋ) ಅನಂತನಾಥ ಪುರಾಣ, (ೠ) ಕಬ್ಬಿಗರಕಾವ, (ಎ) ಶಬ್ದಮಣಿ ದರ್ಪಣ, (ಏ) ಬಸವ ಪುರಾಣ.

ಉತ್ತರ— (ಅ) ಜನ್ನ— ಜನ್ನನು ೧೩ನೆಯ ಶತಮಾನದ ಪೂರ್ವಾರ್ಧದಲ್ಲಿ ಆಗಿ ಹೋದ ಕವಿಚಕ್ರವರ್ತಿ. ಆದಿ ಪಂಪನ ಸರಿದೊರೆಯಾದ ಪಾಂಡಿತ್ಯಪ್ರತಿಭೆಗಳಿಂದ ಕೂಡಿದವನು. ಸುಮನೋಬಾಣನು ಇವನ ತಂದೆ, ೨ನೆಯ ನಾಗವರ್ಮನು ಉಪಾಧ್ಯಾಯನು, ಮಲ್ಲಿಕಾರ್ಜುನ ಇವನ ಭಾವ, ಕೇಶಿರಾಜ ಸೋದರಳಿಯ ಇಂಥ ಅಪೂರ್ವ ಬಾಂಧವ್ಯದ ಪರಿಸರದಲ್ಲಿ ಬೆಳೆದ ಕವಿತಿಲಕನೀತನು.

ಹೊಯ್ಸಳ ನರಸಿಂಹನ ಓಲಗದಲ್ಲಿ 'ನಿಂದಿರೆ ದಂಡಾಧೀಶಂ, ಕುಳ್ಳಿರೆ ಮಂತ್ರಿ ತೊಡಂಕೆ ಕವಿ' ಆಗಿ, 'ನಾಳ್ಪ್ರಭುಜನಾರ್ದನದೇವ' ಎಂದು ಬಿರುದು ಪಡೆದ ಸವ್ಯಸಾಚಿ; 'ಮನ್ನಿಸಿ ಬಲ್ಲಾಳಂ ಕುಡೆ ಜನ್ನಂ ಕವಿಚಕ್ರವರ್ತಿಪೆಸರಂ ಪಡೆದಂ' ಎಂಬ ಹೆಗ್ಗಳಿಕೆಗೆ ಅರ್ಹನು. ರಾಮಚಂದ್ರದೇವಮುನೀಂದ್ರರು ಇವನ ಗುರುಗಳು. ಕವಿಯು 'ಚತುರ್ವಿಧ ಪಂಡಿತ', 'ನವವೈಯಾಕರಣಂ ಕರ್ತವಿನೋದಂ, ಭರತಸುರತ ಶಾಸ್ತ್ರ ವಿಳಾಸಂ' ಎಂದು ತನ್ನ ಬಗ್ಗೆ ಅಭಿಮಾನದಿಂದ ಹೇಳಿಕೊಂಡವನು. ಅಲ್ಲದೇ 'ಚತುರನಿಧಿ, ಚಲದ ನೆಲೆ, ಚಾಗದ ಸಾಗರಂ, ಅಣ್ಮನಾಗರಂ' ಎಂಬ ಉದಾತ್ತ ಚರಿತ್ರೆಯುಳ್ಳವನು, 'ಜಾನಿತ್ತ ಕೈಯಲ್ಲದೇ ಒಡ್ಡಿದ ಕೈಯಲ್ಲದ ಪೆಂಪು' ಎಂದು ಕೊಂಡಂತೆ ಜೈನ ಮಂದಿರಗಳನ್ನು ಕಟ್ಟಿಸಿದ್ದಾನೆ.

ಒಟ್ಟಿನಲ್ಲಿ ಜನ್ನನದು ತುಂಬು ಜೀವನ, ವಿವಿಧ ಶಕ್ತಿಗಳಿಂದ ಸಮೃದ್ಧವಾದ ತೃಪ್ತಜೀವನ. ಮೊದಲು ಕೆಲ ಶಾಸನಗಳನ್ನು ಬರೆದು ನಂತರ 'ಯಶೋಧರ ಚರಿತೆ'. 'ಅನಂತನಾಥ ಪುರಾಣ'ಗಳನ್ನು ಬರೆದನು. 'ಅನುಭವ ಮುಕರ', ಸ್ಮರತಂತ್ರಗಳನ್ನು ಬರೆದಿದ್ದಾನೆ.

ಸಣ್ಣಗಾತ್ರದ ಕಾವ್ಯವಾದ 'ಯಶೋಧರ ಚರಿತೆಯ ಪಡಿಯಚ್ಚು ಕನ್ನಡಕ್ಕೆ ಹೊಸದು ನವೀನ ರೂಪದಲ್ಲಿ ಜೈನ ಪರಂಪರೆಯ ಕಥೆಯನ್ನಿಲ್ಲಿ ಹೆಣೆಯಲಾಗಿದೆ. 'ಸರಸ ಪದ ಪದ್ಧತಿ' ಯಲ್ಲಿ 'ಇತಿಹಾಸವೆಂಬ ವಿಮಳಾಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾನ್ವಿತಮಾದಿಕೃತಿ' ಎಂದು ಹೇಳಿದ್ದಾನೆ ಎದೆ ತಟ್ಟಿಕೊಂಡು. ಸಂಸ್ಕೃತ ಪ್ರಾಕೃತಗಳ ಮೂಲ ಇದಕ್ಕಿವೆ. ಅಹಿಂಸೆಯ ಸತ್ಫಲವನ್ನು ಎತ್ತಿ ತೋರಿ ಜೀವ ದಯೆಯ ಮಹತ್ವವನ್ನು ತಿಳಿಸಿಕೊಡುವ ಜೈನ ಧಾರ್ಮಿಕ ಕಥೆಯಿದು. ಈ ಕಾವ್ಯದಲ್ಲಿ ಜನ್ನನ ಕಲಾದೃಷ್ಟಿ ಫಲಿಸಿದೆ. ತಾನು ಮುಟ್ಟಿದ್ದೆಲ್ಲವನ್ನೂ ಜನ್ನನಿಲ್ಲಿ ಚಿನ್ನವನ್ನಾಗಿಸಿದ್ದಾನೆ ಇಲ್ಲಿ ಪದವಿಲಾಸವಿದೆ, ಸಮುದಾಯ ಶೋಭೆಯಿದೆ. ಇವು ಸೂಕ್ಷ್ಮ ವಿವೇಚನೆ, ರೂಪಕ ಸಂಪತ್ತಿ, ಔಚಿತ್ಯ ದೃಷ್ಟಿಯೊಡನೆ ಬೆರೆದುಕೊಂಡಿವೆ. ಜನ್ನನು ಇಲ್ಲಿ ಕಾವ್ಯ ಧರ್ಮವನ್ನು ನಿಷ್ಠೆಯಿಂದ ಪಾಲಿಸಿ ಜೈನ ಧರ್ಮದ ತತ್ವವನ್ನು ಬೋಧಿಸಿದ್ದಾನೆ. ವಿಶ್ವ ಧರ್ಮದ ರಹಸ್ಯವನ್ನು ಸೂಚಿಸಿದ್ದಾನೆ.

'ಅನಂತನಾಥ ಪುರಾಣ'ವು ಜೈನ ಪುರಾಣ ಮಂದಿರಕ್ಕೆ ಜನ್ನನ ಜಿನ ಮೂರ್ತಿರೂಪವಾದ ಕಾಣಿಕೆ. ಇಲ್ಲಿ 'ಕವಿತಾ ಪ್ರೋತ್ಸಂಗ ಸಂಪತ್ತಿ'ಯಿದ್ದರೂ ಮತೀಯ ವಿವರಗಳು ಸಾಕಷ್ಟಿವೆ. ಸಂಸ್ಕೃತ ಉತ್ತರ ಪುರಾಣ, ಚಾವುಂಡರಾಯ ಪುರಾಣಗಳಿಂದ ಕಥೆಯನ್ನು ತೆಗೆದುಕೊಳ್ಳಲಾಗಿದೆ.

ಚಂಡಶಾಸನನ ದುರಂತ ಕಥೆಯಲ್ಲಿ ಜನ್ನನು ತನ್ನ ಉನ್ನತ ಶಕ್ತಿಯನ್ನು ತೋರಿದ್ದಾನೆ. ಪುರಾಣ ಕಾವ್ಯದ ಪ್ರೌಢಾವೇಶದಲ್ಲಿಯ ಸಂಸ್ಕೃತ ಪ್ರಚುರ ಶೈಲಿ, ಅಲಂಕಾರ ವಿದಗ್ಧತೆ, ಪಾತ್ರವಿಕಾಸ, ದುರಂತ ದರ್ಶನಗಳಲ್ಲಿ ಪ್ರಣಯ ಸಮಸ್ಯೆಯ ಪುರುಷ ಮುಖವನ್ನು ತೋರಿಸುವ ಉಜ್ವಲ ಕೃತಿಯಾಗಿ ಇದು ಪರಿಣಮಿಸಿದೆ.

ದಂಡಿಯ 'ದಶಕುಮಾರ ಚರಿತೆ' ಯನ್ನು ಮೂದಲಿಸಿ ಜನ್ನನು ತನ್ನ ಮೂದಲಿಕೆಗೆ ತಾನೇ ಗುರಿಯಾಗಿದ್ದಾನೆ. ಇಲ್ಲಿ ಕನ್ನಡ ಸಾಹಿತ್ಯಕ್ಕೆ ಪ್ರಭಾವಿ

ಯಾದ ದುರಂತ ಚಿತ್ರವೊಂದು ದೊರೆತಿದೆ. ಶಾಸ್ತ್ರೋಕ್ತವಾದ ಮಹಾಕಾವ್ಯದ ಲಕ್ಷಣಗಳೆಲ್ಲವೂ ತುಂಬಿ ತುಳುಕುತ್ತಿರುವದರಿಂದ ಇದು ಮಹಾಕಾವ್ಯ, ಶಾಸ್ತ್ರೋಕ್ತವಾದ ಮಹಾಕಾವ್ಯ.

'ಅನುಭವ ಮುಕುರ'ವು ವಿವಿಧ ವೃತ್ತಗಳಲ್ಲಿಯ ಲಘುಕಾವ್ಯದಲ್ಲಿ ರತಿ ಲೀಲೆಗೆ ಸಂಬಂಧಿಸಿದ ವರ್ಣನೆಯ ಗ್ರಂಥ 'ಸ್ಮರತಂತ್ರ'ವು ಇದೇ ಎಂದೂ ಇದು ಉಪಲಬ್ಧವಾಗಿದೆಯೆಂದೂ ಅಭಿಪ್ರಾಯ ವ್ಯಕ್ತವಾಗಿದೆ.

ಆ) ಅಂಡಯ್ಯ— ಇವನ ಕಾಲ ಕ್ರಿಸ್ತಶಕ ಸುಮಾರು. ೧೨೩೫. ಇವನದು ಜೈನಮತ. ಇವನ ಕಾವ್ಯ 'ಕಬ್ಬಿಗರ ಕಾವ್ಯ'. ಇದಕ್ಕೆ 'ಕಾಮನ ಗೆಲ್ಲ', 'ಮನ್ಮಥ ವಿಜಯ'ವೆಂದೂ ಕರಿಯುವದುಂಟು. ತನ್ನ ಆಶ್ರಯದಾತ ನಾದ ಕದಂಬಕಾಮನ ಸಮ್ಮಿಶ್ರ ಚರಿತ್ರೆಯನ್ನು ಇದರಲ್ಲಿ ಸೂಚಿಸುವ ಉದ್ದೇಶವಿರಬೇಕೆಂದು ಹೇಳಲಾಗಿದೆ.

ಅಂಡಯ್ಯನ ಮುಖ್ಯವಾದ ವೈಶಿಷ್ಟ್ಯವೆಂದರೆ ಭಾಷಾ ಶೈಲಿಯದು ತನ್ನ ಮೊದಲಿಗರು ಯಾರೂ ಮಾಡದ ಸಾಹಸವನ್ನು ಅವನು ಮಾಡಿದನು. ಸಂಸ್ಕೃತ ಬೆರಸದೆ ಕನ್ನಡದಲ್ಲಿ ಬರೆಯುವದು ಸಾಧ್ಯವೆಂದು ತೋರಿಸಲು 'ಅಚ್ಚಗನ್ನಡದಿಂ ಬಿಗಿವೊಂದಿರೆ' ಕಬ್ಬಿಗರನ್ನು ಕಾಯಬಲ್ಲ 'ಕಬ್ಬಿಗರ ಕಾವ' ವನ್ನು ಬರೆದಿದ್ದಾನೆ.

ಮುಂದೆ ಅಂಡಯ್ಯನ ಪ್ರಭಾವವು ಕೆಲವರ ಮೇಲೆ ಕೆಲ ಮಟ್ಟಿಗೆ ಆಯಿತಾದರೂ ಯಾರೂ ಅವನ ಮಾರ್ಗವನ್ನು ಅನುಸರಿಸಲಿಲ್ಲ. ಅವನ ಕೃತಿ ಬರಿಚಮತ್ಕೃತಿಯಲ್ಲಿ, ಕಾವ್ಯ ದೃಷ್ಟಿಯಿಂದ, ಶೈಲಿಯ ದೃಷ್ಟಿಯಿಂದ ಮೆಚ್ಚ ತಕ್ಕ ಸತ್ಕೃತಿಯಾಗಿದೆ.

ಈ) ಕೇಶಿರಾಜ— ಕನ್ನಡದಲ್ಲಿ ಕೆಲವೇ ಶಾಸ್ತ್ರಕಾರರಲ್ಲಿ ಇವ ನೊಬ್ಬನು. ಇವರಲ್ಲೆಲ್ಲ ಇವನ ಸ್ಥಾನ ವಿಶಿಷ್ಟವಾಗಿದೆ. ಈತನ ತಂದೆ 'ಸೂಕ್ತಿ ಸುಧಾರ್ಣವ' ಸಂಕಲನಕಾರನಾದ ಮಲ್ಲಿಕಾರ್ಜುನ. ಇವನ ಶಾಸ್ತ್ರಗ್ರಂಥ 'ಶಬ್ದಮಣಿದರ್ಪಣ' ಇದಲ್ಲದೆ 'ಚೋಳಪಾಲ ಚರಿತ', 'ಸುಭದ್ರಾಹರಣ', 'ಪ್ರಬೋಧ ಚಂದ್ರ', ಮತ್ತು 'ಕಿರಾತ' ಎಂಬ ಕೃತಿಗಳೂ ಈತನವೆಂದು ಹೇಳಲಾದರೂ ಅವು ಉಪಲಬ್ಧವಿಲ್ಲ.

'ಶಬ್ದಸ್ಮೃತಿ'ಯಿಂದ ಕೆಲ ಲಕ್ಷಣ ಲಕ್ಷ್ಯ ಪದ್ಯಗಳನ್ನು ತೆಗೆದುಕೊಳ್ಳಲಾಗಿದೆ. ಆದರೂ ಕೇಶಿರಾಜನು ಇಲ್ಲಿ ಹೊಸ ಸೂತ್ರಗಳನ್ನು ಕಲ್ಪಿಸಿದ್ದಾನೆ, ಉಚಿತ ಪ್ರಯೋಗಗಳನ್ನು ಹೇರಳವಾಗಿ ಸಂಗ್ರಹಿಸಿದ್ದಾನೆ. ಸೂತ್ರ ವೃತ್ತಿ ಅವನದೇ ಆಗಿದೆ. ಅಪಭ್ರಂಶ ಪ್ರಕರಣವೆಲ್ಲವೂ ಅವನದೇ ಆಗಿರುತ್ತದೆ. ಶಾಸ್ತ್ರಕವಿಯ ಉತ್ತಮ ಯೋಗ್ಯತೆ ಕೇಶಿರಾಜನಲ್ಲಿದೆ.

ಕೇಶಿರಾಜನ ವ್ಯಾಕರಣ ಸೂತ್ರರೂಪವಾದ ಕಂದರಚನೆ ಬಹುಮಟ್ಟಿಗೆ ಅಕ್ಲಿಷ್ಟವೂ ರುಚಿಕರವೂ ಆಗಿದೆ. ಅವನ ಪ್ರಯೋಗಗಳ ಆಯ್ಕೆ ಅವನ ಸರಸಕವಿತ್ವಕ್ಕೆ ಸಾಕ್ಷಿಯಾಗಿದೆ. 'ಮನದೊಳ್ ದಯಮಿಲ್ಲದವನ ಕಣ್ಣೇಂ ಪುಣ್ಣೇಂ, ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ' ಇಂಥವುಗಳನ್ನು ನೆನೆಯಬಹುದು. 'ಸಿರಿಗೀಕ್ಷಿಪ ರಸಚಿತ್ರಂ ಸರಸತಿಗೆರಡನೆಯ ಬೀಣೆ' ಎಂದು 'ಶಬ್ದಮಣಿದರ್ಪಣ'ವನ್ನು ಬುಧರು ವರ್ಣಿಸಿದ್ದರೆ ಆಶ್ಚರ್ಯ ಪಡಬೇಕಾಗಿಲ್ಲ, ವ್ಯಾಕರಣ ಶಾಸ್ತ್ರವು ಇಲ್ಲಿ ಶುಷ್ಕವೂ ಆಗಿಲ್ಲ ಶಿಥಿಲವೂ ಆಗಿಲ್ಲ.

ಉ) ಭೀಮಕವಿ— ಇವನ ಕಾಲ ೧೪ ನೆಯ ಶತಮಾನದ ಉತ್ತರಾರ್ಧ. ವೀರಶೈವ ಕವಿ ಈತನು. ಇವನ ಕೃತಿಗಳು 'ಬಸವಪುರಾಣ' ಇದಲ್ಲದೆ 'ಭೀಮ ಕವೀಶ್ವರರ ರಗಳೆ' ಹಾಗೂ 'ಭೃಂಗಿದಂಡಕ'ಗಳನ್ನು ಇವನು ಬರೆದಂತೆ ಕಾಣುತ್ತದೆ.

ಕವಿಸೋಮನಾಥಂ ರಸವೊಸರೆ ಮುನ್ನು ಸುದರ್ುದನೆ ಕನ್ನಡಿಸಿಪೇಳೆಂದ ಎಸೆವ ಬಸವ ಪುರಾಣಮಂ ಪಸರಿಸುವ ನಿರ್ಮಳ ಬೋದೆಯಂ ಕರುಣಿಸೆಂದ ಕಾರಣವೆನಗೆ ಪಿರಿದಾಯುಸವಿನ್ನಿಲ್ಲ', ಎಂಬುದರಿಂದ ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣದ' ಕನ್ನಡ ಅನುವಾದವಿದೆಂದು ತಿಳಿಯುತ್ತದೆ.

ಶಿವಯೋಗ ಸಿದ್ರೆಯಲ್ಲಿರುವಾಗ ಪಾಲ್ಕುರಿಕೆ ಸೋಮನೂ ಅನಘದೇವಾರ್ಯನೂ ಕನಸಿನಲ್ಲಿ ಬಂದು 'ನಾವು ರಚಿಸುವೆವು ಬಸವಕಥಾವಿಸರಮಂ ಬರೆದುಕೋ' ಎಂದು ಭರವಸೆ ಕೊಟ್ಟರಂತೆ ಭೀಮ ಕವಿಗೆ. ಅಲ್ಲದೆ ವಸ್ತುಕವರ್ಣಂಗಳ ನೆರಪಿ ಹರನಂ ಹರಗಣಂಗಳನ್ನೈದೆ ಕೀರ್ತಿಸಿದ' ಹರಿಹರ ರಾಘವಾಂಕರ ಕೃಪೆಯಿಂದ ಇದನ್ನು ರಚಿಸುವದಾಗಿ ಕವಿ ಹೇಳಿದ್ದಾನೆ.

ಸರಸ ಮೃದುತರ ಯಮಕ ವಿ । ಸರಸಮಾಸ ಪ್ರಾಸದೇಶೀ ।
ಸರಣಿ ಶಬ್ದಾರ್ಥೋಪಮಾಚಾತುರ್ಯ ಮಾಧುರ್ಯ ॥
ಸರಳಪದಶಯ್ಯಾ ಧೃಡ ವ್ಯಾ । ಕರಣಯುತ ಲಾಲಿತ್ಯ ನಿಯಮಾ ।
ಕ್ಷರ ಸಲಕ್ಷಣ ಭಾವಮಾಗಿರೆ ರಚಿಸುವೆ ಕೃತಿಯ ॥ ॥

ಇದು ಭೀಮಕವಿಯ ಶೈಲಿಯ ಧ್ಯೇಯ. ಅವನ ಶೈಲಿಯಲ್ಲಿ ಧಾರಾಳತೆ ಯಿದೆ, ಮಾರ್ದವ ಮಾಧುರ್ಯಗಳಿವೆ. ಪಾಂಡಿತ್ಯದ ಆವೇಗವು ಅವನನ್ನು ಆಗಾಗ ಆಕ್ರಮಿಸಿದರೂ ಪುರಾಣಕಾರ ಕವಿಯ ಸಹಜ ಸುಂದರ ರೀತಿಯಲ್ಲಿ ಅವನು ಕಥೆಯನ್ನು ಸಾಗಿಸಿಕೊಂಡು ಹೋಗುತ್ತಾನೆ. ಒಟ್ಟನಲ್ಲಿ ಭೀಮ ಕವಿಯು ಭಾಮಿನಿಯ ಸಹಜ ಲಾಲಿತ್ಯಕ್ಕೆ ಮಾರ್ಗದರ್ಶಿಯಾಗಿದ್ದಾನೆ.

ಊ) ಯಶೋಧರ ಚರಿತೆ— ಕವಿಚಕ್ರವರ್ತಿ ಜನ್ನನ ಕೃತಿರತ್ನವಿದು. ಇದು ನಾಲ್ಕು ಅವತಾರಗಳ ಸಣ್ಣ ಗಾತ್ರದ ಕಾವ್ಯ. ಇಲ್ಲಿಯ ೩೧೦ ಪದ್ಯಗಳಲ್ಲಿ ೩೦೦ ಕಂದ ಪದ್ಯಗಳಿವೆ. ಬೆದಂಡೆಗಬ್ಬ, ಮೇಲ್ವಾಡುಗಳ ಸಮೀಪದ ವೃತ್ತಗಳಿವು. ನವೀನ ರೂಪದಲ್ಲಿ ಜನ್ನನು ಜೈನ ಪರಂಪರೆಯಲ್ಲಿ ರೂಢಮೂಲವಾದ ಕಥೆಯನ್ನು ಇಲ್ಲಿ ಹೇಳಿದ್ದಾನೆ. ತನ್ನ 'ಸರಸ ಪದ್ಧತಿಯೊಳ್' ಸಂಸ್ಕೃತ ಪ್ರಾಕೃತ ಕನ್ನಡಗಳಲ್ಲಿ ಈ ಕೃತಿ ಮಾಡಿದವರು ಕೈಗೂಡಲಿ ಎಂದು ಬೇಡಿದ್ದಾನೆ.

ಯಶೋಧರ ಚರಿತವು 'ಇತಿಹಾಸವೆಂಬ ವಿಮಳಾಮೃತ ವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾನ್ವಿತಮಾದೀಕೃತಿ' ಎಂದು ಹೊಗಳಿದ್ದಾನೆ. ವಾದಿರಾಜನ ಸಂಸ್ಕೃತ ಯಶೋಧರ ಚರಿತೆಯೇ ಇದಕ್ಕೆ ಮೂಲ ಆಧಾರ. ಕಥೆಯನ್ನು ಇದ್ದಂತೆ ಸ್ವೀಕರಿಸಿದ್ದರೂ ಅದನ್ನು ನಿರೂಪಿಸುವಲ್ಲಿ ತನ್ನ ದೃಷ್ಟಿ ವಿಶೇಷವನ್ನೂ ಕಲ್ಪನಾ ವಿಲಾಸವನ್ನೂ ಮೆರೆದಿದ್ದಾನೆ. ತನ್ನ ಕಲೆಯ ಕುಂಚದಿಂದ ಮೂಲದ ಕಾಂತಿಯನ್ನು ಹೆಚ್ಚಿಸಿದ್ದಾನೆ. ಒಟ್ಟನಲ್ಲಿ ಜನ್ನನ ಕನ್ನಡ ಕೃತಿ ಸಂಸ್ಕೃತ ಕೃತಿಯ ಉಜ್ವಲವಾದ ಪ್ರತಿರೂಪಣವಾಗಿದೆ.

ಯಶೋಧರ ರಾಜನ ಹೆಂಡತಿ ಅಮೃತಮತಿ ಅರಮನೆಯ ಮಾವುತನ ಹಾಡು ಕೇಳಿ ಮನಸೋತು ಅವನ ನಲ್ಲೆಯಾದುದು ಈ ಕಥೆಯ ವಿಷಬೀಜ. ಇದು ಹೆಮ್ಮರವಾಗಿ ಬೆಳೆದು ಸಂಕಲ್ಪ ಹಿಂಸೆಯ ಫಲವಾಗಿ ಯಶೋಧರ ಮತ್ತು ಅವನ ತಾಯಿ ಚಂದ್ರಮತಿಯರ ಅನೇಕ ಜನ್ಮಗಳಲ್ಲಿ ಪಶುಪಕ್ಷಿಗಳಾಗುತ್ತಾರೆ.

ಕೊನೆಯ ಜನ್ಮದಲ್ಲಿ ಅಹಿಂಸೆಯ ವ್ರತತೊಟ್ಟು.... ಅಭಯರುಚಿ, ಅಭಯ ಮತಿಗಳಾಗಿ ಹುಟ್ಟಿ ಬಾಲ್ಯದಲ್ಲಿಯೇ ಜೈನದೀಕ್ಷೆ ವಹಿಸುತ್ತಾರೆ.... ಸದ್ಗತಿ ಯನ್ನು ಹೊಂದುತ್ತಾರೆ.

ಹಿಂಸೆಯ ದುಷ್ಫಲ, ಅಹಿಂಸೆಯ ಸತ್ಫಲವನ್ನು ಎತ್ತಿ ತೋರಿಸಿ ಜೀವ ದಯೆಯ ಮಹತ್ವವನ್ನು ತಿಳಿಸಿಕೊಡುವ ಜೈನ ಧಾರ್ಮಿಕ ಕಥೆಯಿದು. ಉತ್ಕಟವಾದ ರಸಚಿತ್ರವಾಗಿಸಿ ತೋರಿಸಬೇಕೆಂಬ ಉನ್ನತವಾದ ಸೌಂದರ್ಯ ಪ್ರಜ್ಞೆ ಸೂಕ್ಷ್ಮವಾದ ಔಚಿತ್ಯದೃಷ್ಟಿಗಳಿಂದ ಮೂಲ ಕಥೆಯಲ್ಲಿ ಕೆಲ ಹೃದ್ಯ ವಾದ ಮಾರ್ಪಾಡುಗಳನ್ನು ಜನ್ನನು ಮಾಡಿಕೊಂಡಿದ್ದಾನೆ.

ಜನ್ನನ ಕೈವಾಡದಿಂದ ಇದು ನೀತಿಯನ್ನು ಬೋಧಿಸಿದರೂ ಅಸಾಧಾರಣ ಕಲೆಯ ಮಾತೀಯ ಮತ್ತು ಮತಾತೀತ ಕಥೆಯಾಗಿದೆ. ತಾನೊಲಿದ ಮಾವು ತನು ಅತ್ಯಂತ ಕುರೂಪಿಯೆಂದು ಗೊತ್ತಾದರೂ ಅಮೃತ ಮತಿಯ 'ಮರುಳೆ. ಫೊಲ್ಲಮೆಯೆ ಲೇಸುನಲ್ಲರ ಪ್ಪೈಯ್ಯೊಳು ಎನ್ನುತ್ತಾಳೆ. ಅಮೃತ ಮತಿಯ ಗಾಢಮೋಹ ಇಲ್ಲಿ ವ್ಯಕ್ತವಾಗುತ್ತದೆ.

ಮಾವುತನೊಡನೆ ನಡೆದ ಹೆಂಡತಿಯ ಬೇಟವನ್ನು ನೋಡಿ ಸೈರಿಸಲಾರದೆ ಕ್ರೋಧಾಂಧನನಾದ ಯಶೋಧರನು ಕೊಲ್ಲಲೆತ್ತಿದ ಕತ್ತಿಯನ್ನು ಹಿಂದೆಗೆದು ಕೊಂಡು ಸನ್ನಿವೇಶದ ನಿರೂಪಣೆಯಲ್ಲಿ ನಾಭಿನ್ನತೆಯಿದೆ, 'ನಿನ್ನುಳಿದೊಡೆ ಸಾವ ವಳೆ ನಗೆ ಮಿಕ್ಕ ಗಂಡರ್ ಸವಸೋದರರೆಂದು ತಿಳಿಪಿದಳ್ ನಂಬುಗೆಯ,' ಎಂದಲ್ಲಿ ಎಂಥ ನಾಟ್ಯಮಯವಾದ ವ್ಯಂಗವಿದೆ. ಈ ಪದ್ಯದಲ್ಲಿಯ ಕ್ರೋಧ ರಸ ಅದನ್ನು ತಡೆದ ಧೃತಿ ಅಡಕವಾದ ಚಿತ್ರವಾಗಿ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ.

ಜನ್ನನು ತನ್ನ 'ಯಶೋಧರ ಚರಿತೆ' ಯಲ್ಲಿ ಕಾವ್ಯಧರ್ಮ ಮತ್ತು ಧರ್ಮವನ್ನು ಸಮನ್ವಯಗೊಳಿಸುವಲ್ಲಿ ಬಹುಮಟ್ಟಿಗೆ ಸಿದ್ಧಿಯನ್ನು ಪಡೆದಿದ್ದಾನೆ. ಅಮೃತಮತಿಯ ಮೋಹವನ್ನು ಕುರಿತು ವಿಚಾರ ಮಾಡುವಾಗ ಕಾಮವೆಂಬುದು ಅದಮ್ಯವಾದ ಶಕ್ತಿ, ಅದ್ಭುತ ವೇಗದಿಂದ ಆಕ್ರಮಿಸುವ ಶಕ್ತಿ, ಅದಕ್ಕೆ ದುರ್ವಿಧಿಯ ಸಹಾಯವೊಂದು ದೊರೆತರೆ ಬೇಕಾದ ಅನಾಹುತವು ಎಸಗಬಲ್ಲದು, ಎಂಬುದನ್ನು ನೆನೆಯಬೇಕು. 'ಮನಸಿ ಜನ ಮಾಯೆ ವಿಧಿ

ವಿಲಸನದನೆರಬಂಡೆಯು ಕೊಂಡು ಕೂಗದೆನರರಂ' ಎಂಬುದೇ ಇದಕ್ಕೆ ಮಾರ್ಮಿಕವಾದ ಮಾತು.

ಅಮೃತಮತಿಯ ಶಶಮುಖವಾದ ಅಧಃಪಾತ, ಯಶೋಧರನ ಸಂಯಮ, ಉದಾತ್ತತೆ, ಧರ್ಮಸಂಕಟ, ದೌರ್ಬಲ್ಯ, ಯಶೋಮತಿಯ ಸಂಪ್ರದಾಯ ಮೂಢತೆ ಇವುಗಳ ಸಮರ್ಪಕವಾದ ಚಿತ್ರಗಳಿಂದ ಕಥೆ ಸವೇಗವಾಗಿ ಮುಂದೆ ಸಾಗಿದೆ. ವಿಮರ್ಶಕರು ತೋರಿದಂತೆ .ರತಿರಹಸ್ಯವನ್ನು ಒಣ್ಣಿಸುವದಕ್ಕಿಂತಲೂ ಪ್ರಣಯ ಸಮಸ್ಯೆಯನ್ನು ಬಿಡಿಸುವದರ ಕಡೆಗೆ ಜನ್ನನ ಆಸಕ್ತಿ ಹೆಚ್ಚು. ಅದೇ ಅವನ ವೈಶಿಷ್ಟ್ಯ, ಕಾವ್ಯದ ಸತ್ವ.

ಕಥನ ಪಾತ್ರಚಿತ್ರಣ, ಪೃಥಕ್ಕರಣ ಇವುಗಳ ಜೊತೆಗೆ ಸೂಕ್ಷ್ಮ ಸಂಪನ್ನವಾದ ರೂಪಕಶಕ್ತಿ ಮತ್ತು ಶಬ್ದ ಶಕ್ತಿಗಳು 'ಯಶೋಧರ ಚರಿತೆ'ಗೆ ಮಹಾ ಕೃತಿಯ ಪಟ್ಟಗಟ್ಟಲು ಕೈಗೊಟ್ಟವೆ. ಕಥನ ವೇಗ ಹಾಗೂ ಬಂಧ ಬಿಗುವಿನಿಂದ ಶೈಲಿ ಆಗಾಗ ಕ್ಲಿಷ್ಟವಾಗಿದ್ದರೂ ಕನ್ನಡ ದೇಶಿಯ ವೆಗ್ಗಳದಿಂದ ಕೂಡಿದೆ. 'ಕಾಲ್ ಮರೆಯಿಸುವದು ಟೊಂಕ ಮುರಿದ ಕತ್ತೆಯ ಕಾಲಂ' ಎಂಬ ಗ್ರಾಮ್ಯ ರೂಪಗಳ ಸವಿಯೂ ಇದರಲ್ಲಿ ಬೆರೆತಿದೆ ಒಟ್ಟನಲ್ಲಿ 'ಪರಮಜಿನೇಂದ್ರ ಶಾಸನ ವಸಂತದೊಳ್ ಈ ಕೃತಿ ಕೋಕಿಲ ಸ್ವರನಂ' ನಮ್ಮಲ್ಲಿ ಮೆಚ್ಚುಗೆಯ ಮಾರ್ದನಿಯನ್ನು ಹುಟ್ಟಿಸುತ್ತದೆ.

ಖ) ಅನಂತನಾಥ ಪುರಾಣ— ಇದು ೧೪ ಆಶ್ವಾಸಗಳುಳ್ಳ, ೧೪ನೆಯ ತೀರ್ಥಂಕರನ ಚರಿತ ಪುರಾಣ ಕವಿಚಕ್ರವರ್ತಿ ಜನ್ನನ ಧಾರ್ಮಿಕ ಕಾವ್ಯವಿದು. ಜೈನ ಪುರಾಣ ಮಂದಿರಕ್ಕೆ ಜನ್ನನ ಜಿನಮೂರ್ತಿ ರೂಪವಾದ ಕಾಣಿಕೆ ಸಂಸ್ಕೃತ ಉತ್ತರ ಪುರಾಣ, ಚಾವುಂಡರಾಯ ಪುರಾಣಗಳ ಅಲ್ಪ ಆಧಾರದ ಮೇಲೆ ಹೆಮ್ಮರದಂತೆ ಈ ಕತೆ ಬೆಳೆದಿದೆ. ಅಷ್ಟಾದಶ ವರ್ಣನೆಗಳು, ಜೈನ ಪುರಾಣದ ಅಷ್ಟಾಂಗಗಳು ಕಾವ್ಯದುದ್ದಕ್ಕೂ ಬೆಳೆದಿವೆ. ಅನಂತ ಜಿನನ ಪಂಚ ಕಲ್ಯಾಣಗಳ ವರ್ಣನೆ ಭವ್ಯವಾಗಿದ್ದರೂ ಅದರಲ್ಲಿ ನಾವಿನ್ಯವಿಲ್ಲ.

'ಅನಂತನಾಥ ಪುರಾಣದ ಗೊಂಡಾರಣ್ಯದಲ್ಲಿ ಚಂಡಶಾಸನನ ದುರಂತ ಕಥೆಯೊಂದು ಚೆಲುವಿನ ಕೊಳ್ಳ ಚಂಡಶಾಸನ ಗೆಳೆಯನ ಹೆಂಡತಿಯನ್ನು ಮೋಸದಿಂದ ಒಯ್ದು, ಅವಳ ಗಂಡನ ಕೃತ್ರಿಮವಾದ ತಲೆಯನ್ನು ತೋರಿಸಿದಾಗ ಅವಳು ಸಾಯುತ್ತಾಳೆ. ಅವಳನ್ನು ಅಪ್ಪಿ ಅವನೂ ಸಾಯುತ್ತಾನೆ.

ಇದಕ್ಕೆ ಹೇಸಿ ವಸುಕ್ಷೇಣ ತಪಸ್ಸಿಗೆ ಹೊರಡುತ್ತಾನೆ. ಈ ಕಥಾ ಭಾಗದ ನಿರೂಪಣೆಯಲ್ಲಿ ಜನ್ನನು ತನ್ನ ಉನ್ನತ ಶಕ್ತಿಯನ್ನು ತೋರಿಸಿದ್ದಾನೆ.

ಪುರಾಣ ಕಾವ್ಯದ ಪ್ರೌಢಾವೇಶದಲ್ಲಿಯು ಸಂಸ್ಕೃತ ಪ್ರಚುರಶೈಲಿ, ಅಲಂಕಾರವಿದಗ್ಧತೆ ಈ ಭಾಗವನ್ನು ಆರಿಸಿವೆಯಾದರೂ ಸನ್ನಿವೇಶ ನಿರ್ಮಾಣ, ಪಾತ್ರವಿಕಾಸ ದುರಂತ ದರ್ಶನಗಳಲ್ಲಿ ಪ್ರಣಯ ಸಮಸ್ಯೆಯ ಪುರುಷ ಮುಖ ವನ್ನು ತೋರಿಸುವ ಉಜ್ವಲ ಕೃತಿಯಾಗಿ ಇದು ಪರಿಣಮಿಸಿದೆ; ಸೂಕ್ಷ್ಮ ವಿವೇಚನೆ, ರೂಪಕ ಸಂಪತ್ತಿ ಔಚಿತ್ಯದೊಡನೆ ಇಲ್ಲಿ ಬೆರೆತುಗೊಂಡಿವೆ. ಚಂಡ ಶಾಸನನ ಕೈಯಲ್ಲಿ ಸುನಂದೆ 'ಬಿದಿ ಎಂಬ ಮದಗಜಂ ನೃಪಸದನ ಸರೋವರದೊಳೆಳೆದು ನೆಳೆತಂದು ವನಾಂತರದೊಳಿಕ್ಕಿದ ಬಾಳ ಮೃಣಾಳದವೊಲ್' ಇರ್ದಳೆಂದು ಹೇಳುತ್ತಾನೆ ಕವಿ. ಅವಳ ಮರಣವನ್ನು 'ಹೃದಯದೊಳಿರ್ದ ವಲ್ಲಭನಾಕ್ಷಣ ಭೀತಿಯ ನೀಕ್ಷಿವಂತೆ ಮುಚ್ಚಿದುವಗರ್ಗಳ್' ಎಂದು ವರ್ಣಿಸಿದುದರ ಔಚಿತ್ಯವನ್ನು ನೋಡಬೇಕು.

'ಆರಿದಿದು ಬಾಳಬಟ್ಟೆ ಪರಮಾಗಮಮಲ್ಲದೆ ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂಬಳಿಕೆಯ್ವ ಚರ್ಚೆಯಲ್ಲ, ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆರೆಯಲ್ಕೆ ಪೇಳ್ದಪೆಂ ಚರಿತಪುರಾಣಮಂ' ಎಂದು ಹೇಳಿಕೊಂಡ ಜನ್ನನಿಗೂ ವಿಧಿವಿಲಾಸವು ಬಿಡಲಿಲ್ಲ' 'ನಿಯತಿಯನಾರ್ ಮೀರಿದಪರ್' ಎಂದು ಅವನೇ ಹೇಳಿದಂತೆ ಇಲ್ಲಿ ಚಂಡಶಾಸನನ ಕಥೆ ಬಂದಿದೆ ದಂಡಿಯ 'ದಶಕುಮಾರ ಚರಿತೆ'ಯನ್ನು ಮೂದಲಿಸಿ ಜನ್ನನು ಇಲ್ಲಿ ತನ್ನ ಮೂದಲಿಕೆಗೆ ತಾನೇ ಗುರಿಯಾಗಿದ್ದಾನೆ. ಆದರೂ ಅವನಿಂದ ಕನ್ನಡಕ್ಕೆ ಒಂದು ಪ್ರಭಾವಿಯಾದ ದುರಂತ ಚಿತ್ರ ದೊರೆಯಿತು, ಜನ್ನನ ಕೀರ್ತಿಗೆ ಕಳಸವಿಟ್ಟಿತು.

ಇಲ್ಲಿ ಸತ್ಕಾವ್ಯದ ಸಹಜ ಅಲಂಕಾರಗಳಿವೆ, ಪ್ರೌಢವಾದ ವರ್ಣನೆಗಳಿವೆ. ವಿದಗ್ಧ ಅಲಂಕಾರಗಳಿವೆ. ಹೀಗಾಗಿ ಶಾಸ್ತ್ರೋಕ್ತವಾದ ಮಹಾಕಾವ್ಯದ ಲಕ್ಷಣಗಳೆಲ್ಲವೂ ತುಂಬಿ ತುಳುಕುತ್ತಿರುವದರಿಂದ ಇದು ಮಹಾ ಕಾವ್ಯವೇ. ಇಲ್ಲಿ ಉದ್ದಾಮ, ಪಾಂಡಿತ್ಯ ಕವಿತ್ವಗಳಿಗೆ ನೆರವಾಗಿ ಪದವಿಲಾಸವಿದೆ. ಕಾಲ ಪ್ರಭಾವದಿಂದ ಸಂಪ್ರದಾಯಕ ಶರಣನಾಗಿ ಶೃಂಗಾರವನ್ನು ವರ್ಣಿಸಿದರೂ ಅದರ ಜೊತೆಗೆ ಕ್ರಾಂತಿಕಾರಕವಾದ ರೀತಿಯಲ್ಲಿ ಅದನ್ನು ಕಾಮದ, ಧರ್ಮವಿರುದ್ಧ–

ಪ್ರಣಯದ ಸ್ತ್ರೀಮುಖ, ಪುರುಷ ಮುಖಗಳನ್ನು ಉಜ್ವಲವಾಗಿ ಚಿತ್ರಿಸಿ ಜನ್ನನು ಕನ್ನಡಕ್ಕೆ ಸ್ವಂತ ಕಾಣಿಕೆ ಸಲ್ಲಿಸಿದ್ದಾನೆ.

ಋ) ಕಬ್ಬಿಗರ ಕಾವ— ಅಂಡಯ್ಯನ 'ಕಬ್ಬಿಗರಕಾವವು' ಕನ್ನಡ ಸಾಹಿತ್ಯಕ್ಕೊಂದು ಅಪೂರ್ವ ಕಾಣಿಕೆಯಾಗಿದೆ. ಇದು ಗಾತ್ರದಲ್ಲಿ ಖಂಡ ಕಾವ್ಯದಷ್ಟು ಚಿಕ್ಕದಲ್ಲ, ಮಹಾಕಾವ್ಯದಷ್ಟು ದೊಡ್ಡದಲ್ಲ. ಇದರಲ್ಲಿ ಜಿನಕಥೆ ಯಿಲ್ಲ, ಲೌಕಿಕ ಕಥೆಯೂ ಇಲ್ಲ. ಆದರೆ ಕಾಮ, ಜೈನಮುನಿ, ಶಿವ ಈ ಮೂವರನ್ನೂ ಒಳಗೊಂಡ ಒಂದು ವಿಶಿಷ್ಟ ಧ್ವನಿಯುಕ್ತ ಕಾವ್ಯವಿದು. ಅಂಡ ಯ್ಯನು ಇಲ್ಲಿ ಲೌಕಿಕ ಆಗಮಿಕಗಳೆರಡನ್ನು ಒಂದುಗೂಡಿಸಿದ್ದಾನೆ.

ಇಲ್ಲಿ ಚಂದ್ರನನ್ನು ಅಪಹರಿಸಿದ ಶಿವನನ್ನು ಕಾಮನು ಸೋಲಿಸಿ ಅರೆ ಹೆಣ್ಣು ಮಾಡುತ್ತಾನೆ, ಅವನ ಶಾಪದಿಂದ ಅಜ್ಞಾತವನ್ನು ಅನುಭವಿಸುತ್ತಾನೆ. ದಾರಿಯಲ್ಲಿ ಕಂಡ ಸವಣನನ್ನು ದಂಡಿಸಲು ಹೋಗಿ ತಾನೇ ಗದಗದ ನಡುಗಿ ಅವನಿಗೆ ದಂಡ ನಮಸ್ಕಾರ ಮಾಡುತ್ತಾನೆ. ಈ ಕಥೆಗೆ ಮೂಲವಿದ್ದಂತೆ ಇಲ್ಲ. ಸಾಮಾನ್ಯವಾಗಿ ಕಾಮನಿಂದ ಶಿವನ ಗೆಲುವು, ಆದರೆ ಸವಣನ ಮುಂದೆ ಕಾಮನ ಸೋಲು ಎಂಬುದನ್ನು ಸ್ಥಾಪಿಸಲು ಈ ಕಥೆಯನ್ನು ಕಟ್ಟಿದಂತಿದೆ. ಇಲ್ಲಿ ಚಂದ್ರನ ಅಪಹರಣವೇ ಕಲಹಬೀಜವೆಂಬುದು ಸೊಗಸಾದ ಕಲ್ಪನೆ ಯಾಗಿದೆ. ಇನ್ನೂ ಅನೇಕ ಹೊಸ ವಿವರಗಳು ಇಲ್ಲಿವೆ.

ತಾತ್ವಿಕ ರಾಜಕೀಯ ಧ್ವನಿಗಳ ಮಿಶ್ರಹೇತುವಿನಿಂದ ಕತೆ ಹೊಯ್ದಾಡಿ ಹೇಗೋ ಮುಗಿದಿದೆ. ಅರೆವೆಣ್ಣಾಗಿ ಸೋತ ಶಿವನಿಂದಲೂ ಶಾಪಕೊಡಿಸಿ ಗೆದ್ದ ಕಾಮನ ಗೆಲವನ್ನು ಕುಂದಿಸಿದ ಬಗೆಯು ಕಥೆಯ ಹೊಯ್ದಾಟಕ್ಕೆ ನಿದರ್ಶನವಾಗಿದೆ. ರಾಜಕೀಯವಾಗಿ ತನ್ನ ಆಶ್ರಯದಾತನಾದ ಕದಂಬ ಕಾಮನ ಸಮ್ಮಿಶ್ರ ಚರಿತೆಯನ್ನು ಇದರಲ್ಲಿ ಸೂಚಿಸಿರಬೇಕೆಂದು ಊಹಿಸಲಾಗಿದೆ.

ತಾತ್ವಿಕವಾಗಿ ಇದು ಕಾಮತತ್ವದ ವಿಜಯ, ಕಾಮನಗೆಲ್ಲ ಇಲ್ಲಿ ಅಭಿಪ್ರೇತ ವಾಗಿದೆ. ಶ್ರೀ ದ. ರಾ. ಬೇಂದ್ರೆ ಅವರು ಹೇಳುವಂತೆ 'ಕಾಮ-ರತಿ; ಶ್ರವಣ-ವಿರಕ್ತಿ; ಶಿವಶಕ್ತಿ ಈ ತ್ರಿಕೂಟ ದ್ವಂದದ ಕಾವ್ಯವು 'ಕಬ್ಬಿಗರ ಕಾವ್ಯ'ದಲ್ಲಿ ನಿರೂಪಿತವಾಗಿದೆ.... ಈ ಕಾವ್ಯದಲ್ಲಿ ಕಾಮನ ಗೆಲವು ಕಾವ್ಯತತ್ವ; ಶಿವನ ಗೆಲುವು ಸೃಷ್ಟಿತತ್ವ; ಶ್ರವಣನ ವಿರಕ್ತಿ ಮುಕ್ತಿ ತತ್ವ' ಎಂದೂ ಇರಬಹುದು.

ಆಂಡಯ್ಯನ ಮುಖ್ಯವಾದ ವೈಶಿಷ್ಟ್ಯವೆಂದರೆ ಭಾಷಾ ಶೈಲಿಯದು. ಅವನು ಈ ದಿಶೆಯಲ್ಲಿ ಅಪೂರ್ವ ಸಾಹಸ ಮಾಡಿದ್ದಾನೆ. ಸಂಸ್ಕೃತ ಬೆರಸದೆ ಕನ್ನಡದಲ್ಲಿ ಬರೆಯುವದು ಸಾಧ್ಯವೆಂದು ತೋರಿಸಲು 'ಅಚ್ಚಕನ್ನಡಂಬಿಗಿ ವೊಂದಿರೆ' ಕಬ್ಬಿಗರನ್ನು ಕಾಯಬಲ್ಲ. 'ಕಬ್ಬಿಗರ ಕಾವ' ವನ್ನು ಬರೆದನು. ತದ್ಭವ ರೂಪಗಳು ಸಾಕಷ್ಟು ಬಂದಿದ್ದರೂ ಶೈಲಿಯ ಒಟ್ಟು ರೂಪದಲ್ಲಿಯ ದೇಸಿ ಪ್ರಚುರತೆಯನ್ನೂ ಸಹಜ ಸೌಂದರ್ಯವನ್ನೂ ಮನವಾರೆ ಮೆಚ್ಚಬೇಕು.

ಆಂಡಯ್ಯನ ಕೃತಿ ಬರಿ ಚಮತ್ಕೃತಿಯಲ್ಲಿ, ಕಾವ್ಯದೃಷ್ಟಿಯಿಂದ, ಶೈಲಿಯ ದೃಷ್ಟಿಯಿಂದ ಮೆಚ್ಚತಕ್ಕ ಸತ್ಕೃತಿಯಾಗಿದೆ. ಇದರ ಉತ್ತಮಿಕೆಯ ಅಂಶಗಳು ಆಂಡಯ್ಯನ ಸ್ವತಂತ್ರವೂ ಉನ್ನತವೂ ಆದ ಕಲ್ಪನಾಶಕ್ತಿಯಲ್ಲಿ ವ್ಯಕ್ತವಾಗಿವೆ.

ಎ) ಶಬ್ದಮಣಿದರ್ಪಣ— 'ಸೂಕ್ತಿ ಸುಧಾರ್ಣವ' ದ ಮಲ್ಲಿಕಾರ್ಜುನನು ಇದರ ಕರ್ತೃವಾದ ಕೇಶಿರಾಜನ ತಂದೆ. ಇದು ಪ್ರಮಾಣಭೂತವಾದ ಹಳಗನ್ನಡ ವ್ಯಾಕರಣ ಗ್ರಂಥ. ಇದು ಕಂದ ಪದ್ಯಗಳಲ್ಲಿದೆ. ಕೇವಲ ವ್ಯಾಕರಣಕ್ಕೆ ಮೀಸಲಾದ ಮೊದಲನೆಯ ಗ್ರಂಥ.

ನಾಗವರ್ಮನ 'ಶಬ್ದಸ್ಮೃತಿ' ಯಿಂದ ಅನೇಕ ಲಕ್ಷಣ-ಲಕ್ಷ್ಯ ಪದ್ಯಗಳನ್ನು ತೆಗೆದುಕೊಂಡಿದ್ದರೂ ಅನೇಕ ಹೊಸ ಸೂತ್ರಗಳನ್ನು ಕಲ್ಪಿಸಲಾಗಿದೆ. ಉಚಿತ ಪ್ರಯೋಗಗಳನ್ನು ಸಂಗ್ರಹಿಸಲಾಗಿದೆ. ಸೂತ್ರವೃತ್ತಿ ಮಾತ್ರ ಕೇಶಿರಾಜನದೇ ಆಗಿದೆ. ಅಪಭ್ರಂಶ ಪ್ರಕರಣವೆಲ್ಲವೂ ಸ್ವಂತದ್ದೇ ಆಗಿದೆ.

ಮಾರ್ಗ ಕಾವ್ಯದ ನಂಬುಗೆ ಕಾವ್ಯಗಳಲ್ಲಿ ಕಂಡರೂ ಕನ್ನಡ ನುಡಿಯ ಸಂಕ್ರಮಣಾವಸ್ಥೆಯನ್ನರಿತು ನವೀನ ಪ್ರಯೋಗಗಳಿಗೆ ಕೆಲವು ಕಡೆಗೆ ಮನ್ನಣೆ ದೊರೆತುದುದು ವ್ಯಕ್ತವಾಗಿದೆ. ಕಂದ ರಚನೆಯು ಆಕ್ಲಿಷ್ಟವೂ ರುಚಿಕರವೂ ಆಗಿದೆ. ಅವನ ಪ್ರಯೋಗಗಳು ಸರಸಕವಿತ್ವಕ್ಕೆ ಸಾಕ್ಷಿಯಾಗಿವೆ.

ಮನದೊಳ್ ದಯುವಿಲ್ಲದವನ ಕಣ್ಣೇಂ ಪುಣ್ಣೇಂ, ಪ್ರಾಯಂಕೂಸಾದೊಡಭಿಪ್ರಾಯಂ ಕೂಸಕ್ಕುಮೆ' ಎಂಬ ಮಾತಿನಲ್ಲಿ ಅವನ ಅಭಿಮಾನ ವ್ಯಕ್ತವಾಗಿದೆ. 'ಸಿರಿಗೀಕ್ಷಿಪ ರಸಚಿತ್ರಂ ಸರಸತಿಗೆರಡನೆಯ ಬೀಣೆ' ಎಂದು ಬುಧರು ಇದನ್ನು ಹೊಗಳುವದರಲ್ಲಿ ಅರ್ಥವಿದೆ. ವ್ಯಾಕರಣ ಶಾಸ್ತ್ರವು ಇಲ್ಲಿ ಶುಷ್ಕವೂ ಆಗಿಲ್ಲ, ಶಿಥಿಲವೂ ಆಗಿಲ್ಲ. ಶಾಸ್ತ್ರಕವಿಯ ಉತ್ತಮ ಯೋಗ್ಯತೆಯಿಲ್ಲಿ ವ್ಯಕ್ತವಾಗಿದೆ.

೨) ಬಸವ ಪುರಾಣ— ಇದನ್ನು ಬರೆದ ಕವಿಯು ಭೀಮಕವಿಯು. ಇವನು ೧೪ ನೆಯ ಶತಮಾನದ ಉತ್ತರಾರ್ಧದಲ್ಲಿ ಇದ್ದನು. ರಾಘವಾಂಕನ ಚಾರಿತ್ರಿಕ ಷಟ್ಪದಿಗಳ ಸಂಪ್ರದಾಯ ಇವನಿಂದ ಮುಂದುವರೆಯಿತು. ಭಾಮಿನಿ ಷಟ್ಪದಿಯಲ್ಲಿ ಸಮಗ್ರವಾಗಿ ಬರೆಯಲಾದ ಮೊದಲನೆಯ ಗ್ರಂಥವಿದು. ಇದು ಭಾಮಿನಿಯ ಸಹಜ ಲಾಲಿತ್ಯಕ್ಕೆ ಮಾರ್ಗದರ್ಶಿಯಾಗಿದೆ. ಹರಿಹರನ 'ಬಸವ ರಾಜ ದೇವರ ರಗಳೆ'ಯ ನಂತರ ಎರಡನೆಯ ಮುಕ್ಕಣ್ಣ ಬಸವಣ್ಣ'ನ ಚರಿತ್ರೆಯ ಎರಡನೆಯ ಗ್ರಂಥವಿದು.

ಕವಿ ಸೋಮನಾಥಂ ರಸಮೂಸರೆ ಮುನ್ನು ಸುರ್ದದನೆ ಕನ್ನಡಿಸಿ ಪೇಳ್ದಿಂದು ಎಸೆವ ಬಸವ ಪುರಾಣಮಂ ಪಸರಿಸುವ ನಿರ್ಮಳ ಬೋಧೆಯಂ ಕರುಣಿಸಿದ ಕಾರಣವೆನಗೆ ಪಿರಿದಾಯಾಸವಿನ್ನಿಲ್ಲ', ಎಂದು ಹೇಳಿರುವದರಿಂದ 'ಬಸವ ಪುರಾಣ'ವು ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವ ಪುರಾಣ'ದ ಕನ್ನಡ ಅನುವಾದವೆಂದು ತಿಳಿದುಬರುತ್ತದೆ. ಅಲ್ಲದೆ ಕವಿಯು ಶಿವಯೋಗ ನಿದ್ರೆಯಲ್ಲಿರುವಾಗ ಪಾಲ್ಕುರಿಕೆಯ ಸೋಮನೂ ಅನಘವೇವಾರ್ಯನೂ ಕನಸಿನಲ್ಲಿ ಬಂದು 'ನಾವು ರಚಿಸುವೆವು ಬಸವ ಕಥಾ ವಿಸರವಂ ಬರೆದುಕೊ' ಎಂದು ಭರವಸೆಯನ್ನೂ, ಇದರ ರಚನೆಗೆ, ಕೊಟ್ಟರೆಂದು ಹೇಳಲಾಗುತ್ತದೆ.

ವಸ್ತುಕ ವರ್ಣಕಂಗಳ ನೆರಪಿ ಹರನಂ ಹರಗಣಂಗಳನ್ನೈದೆ ಕೀರ್ತಿಸಿದ ಹರಿಹರ ರಾಘವಾಂಕರ ಕೃಪೆಯಿಂದ ಇದನ್ನು ರಚಿಸಿರುವದಾಗಿ ಕವಿಯು ಹೇಳಿದ್ದಾನೆ. ಚಾರಿತ್ರಿಕ ಸಾಮಗ್ರಿ, ಕಥನ ಕ್ರಮ. ಪವಾಡಗಳು ಮುಂತಾದ ಅಂಶಗಳಲ್ಲಿ ಇದು ಕನ್ನಡಿಸಲ್ಪಟ್ಟಿದ್ದರೂ ಭೀಮ ಕವಿಯ ಸಹಜ ಕಥನ ಕಲೆಯು ಇಲ್ಲಿ ಆವಿಷ್ಕಾರ ಹೊಂದಿದೆ. ಸ್ಫೂರ್ತಿಯಿಂದ ಉಕ್ಕಿಬಂದ ಭಕ್ತಿ ಉತ್ಸಾಹಗಳು ಇಲ್ಲಿ ಎದ್ದು ಕಾಣುತ್ತವೆ.

ಇದು ಪುರಾಣ ಕಾವ್ಯ. ಬಸವಣ್ಣನವರ ಕಾರ್ಯ ಇಲ್ಲವೆ. ಪವಾಡಗಳಿಗೆ ಇಲ್ಲಿ ಪ್ರಾಮುಖ್ಯತೆಯಿದೆ ಷಟ್ಪದಿಯಲ್ಲಿ ಬರೆದಿದ್ದರೂ ಪ್ರೌಢಕಾವ್ಯದ ಅಲಂಕಾರ ಚಮತ್ಕೃತಿಗಳ ಹಂಬಲ ಇಲ್ಲಿ ಕಾಣುತ್ತದೆ. ಭೀಮ ಕವಿಯು ತನ್ನ ಶೈಲಿಯ ಧ್ಯೇಯವನ್ನು

ಸರಸ ಮೃದುತರ ಯಮಕ ವಿ-| ಸರ ಸಮಾಸ ಪ್ರಾಸದೇಶೀ |
ಸರಣೆ ಶಬ್ದಾರ್ಥೋಪಮಾಚಾತುರ್ಯ ಮಾಧುರ್ಯ ||

ಸರಳ ಪದಶಯ್ಯಾ ದೃಢವ್ಯಾ|ಕರುಣಯುತ ಲಾಲಿತ್ಯ ನಿಯಮಾ
ಕ್ಷರ ಸಲಕ್ಷಣ ಭಾವ ಮಾಗಿರೆ ರಚಿಸುವೆ ಕೃತಿಯ ||.||

ಎಂಬ ಪದ್ಯದಲ್ಲಿ ವ್ಯಕ್ತಪಡಿಸಿದ್ದಾನೆ. 'ವಸ್ತುಕದ ಮುಂದೆ ವಿಳಾಸ ಸಾಮಾನ್ಯ ವರ್ಣಕಕವೀ ಕವಿತೆಯೆಂದು ಓಸರಿಸದಿರಿ' ಎಂದು ಓದುಗರನ್ನು ಕೇಳಿದ್ದಾನೆ. ದೇಸಿಗಬ್ಬದಲ್ಲಿಯೂ ಮಾರ್ಗ ಲಕ್ಷಣದ ಸಂಪ್ರದಾಯವೊಂದನ್ನು ಭೀಮ ಕವಿಯು ಹಾಕಿಕೊಟ್ಟಿದ್ದಾನೆ.

'ಬಸವ ಪುರಾಣದ ಶೈಲಿಯಲ್ಲಿ ಧಾರಾಳತೆಯಿದೆ. ಮಾರ್ದವ ಮಾಧುರ್ಯಗಳಿವೆ, ಪಾಂಡಿತ್ಯದ ಆವೇಗವು ಆಗಾಗ ಕವಿಯನ್ನು ಆಕ್ರಮಿಸಿದರೂ ಪುರಾಣಕಾರ ಕವಿಯು ಸಹಜ ಸುಂದರ ರೀತಿಯಲ್ಲಿ ಕಥೆಯನ್ನೂ ಸಾಗಿಸಿಕೊಂಡು ಹೋಗಲಾಗಿದೆ. ಯಾವ ದೃಷ್ಟಿಯಿಂದ ನೋಡಿದರೂ ಮುಂಬರುವ ಭಾಮಿನಿ ಷಟ್ಪದಿಕಾರರಿಗೆ 'ಬಸವ ಪುರಾಣವು' ಮಾರ್ಗದರ್ಶಿಯಾಗಿದೆ. ಭಾಮಿನಿ ಷಟ್ಪದಿಯಲ್ಲಿ ಸೂಕ್ಷ್ಮ ಲಯ ಮೊದಲಾದ ಶಕ್ತಿಗಳನ್ನು ತುಂಬಲು ಪ್ರೇರಕವಾಗಿದೆ.

ಪ್ರಶ್ನೆ ೧೮— ೧೫ನೆಯ ಶತಮಾನದ ಸಾಹಿತ್ಯದ ರೂಪರೇಷೆಗಳನ್ನು ವಿವರಿಸಿರಿ.

ಉತ್ತರ— ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೫ನೆಯ ಶತಮಾನವು ಹಲವಾರು ದೃಷ್ಟಿಗಳಿಂದ ಮಹತ್ವದ್ದಾಗಿದೆ. ಪಂಪ ಪೂರ್ವ ಕಾಲದಲ್ಲಿ ಆಗಿನ ಜನಜೀವನ, ಸಂಸ್ಕೃತಿ, ಸಾಹಿತ್ಯ ಸ್ವರೂಪಗಳನ್ನು ಕವಿರಾಜ ಮಾರ್ಗವೊಂದನ್ನು ಬಿಟ್ಟರೆ ಶಾಸನಗಳ ಆಧಾರದಿಂದ ತಿಳಿದುಕೊಳ್ಳಬೇಕಾಗಿತ್ತು. ಹತ್ತನೆಯ ಶತಮಾನವು ಕನ್ನಡ ಕಾವ್ಯಶ್ರೀಗೆ ವೀರ ರಸದ ಅಭಿಷೇಕವನ್ನು ಮಾಡಿಸಿ ಅದಕ್ಕೆ ಶಾಂತಿಯ ಪ್ರಸನ್ನತೆಯನ್ನು ತಂದುಕೊಟ್ಟಿತು ಪ್ರೌಢ ಮಾರ್ಗಕಾವ್ಯ ಗೌರಿಶಂಕರದ ಎತ್ತರದಲ್ಲಿ ಮೆರೆಯಿತಾಗ. ೧೨ ನೆಯ ಶತಮಾನದ ಹೊತ್ತಿಗೆ ಸಾಮಾನ್ಯ ಜನ ಜೀವನ ಸಾಹಿತ್ಯವನ್ನು ಪ್ರವೇಶಿಸಿತು ಮಾರ್ಗದಿಂದ ದೇಶಿಯತ್ತ ಸಾಹಿತ್ಯ ಪ್ರವಾಹ ಹೊರಳಿತು. ಸಾಹಿತ್ಯದ ಸವಿಯು ಜನಸಾಮಾನ್ಯರಿಗೂ ಅವರ ಮಾತಿನಲ್ಲಿ ಬಡಿಸಲ್ಪಟ್ಟಿತು. ಅನುಭವ ಮಂಟಪ ಕನ್ನಡ ಶಾಲೆಯು ಸಾಹಿತ್ಯಸಂಗಮವಾಯಿತು. ಭಾಷೆ, ಛಂದಸ್ಸು,

ವಸ್ತು, ವ್ಯಾಕರಣ, ಅಲಂಕಾರ ಹೀಗೆ ಕನ್ನಡದ ದೇಸಿ ವೈಗೂಡಿ ಕನ್ನಡತನ ಕುಸುಮಿಸಿತು. ೧೫ನೆಯ ಶತಮಾನದಲ್ಲಿ ದೇಸಿಯ ಹೆಗ್ಗಳಿಕೆಯನ್ನು ಕಾಣಬಹುದು. ಇಲ್ಲಿ ಕನ್ನಡ ಕಾವ್ಯವನಿತೆ ತನ್ನ ಸಹಜ ಸೌಂದರ್ಯದಿಂದ ವಿರಾಜಿಸಿದ್ದಾಳೆ, ನಲಿದಿದ್ದಾನೆ, ನಲಿಸಿದ್ದಾಳೆ.

ಪಂಪಯುಗದಲ್ಲಿ ಚಂಪೂ ಪ್ರಧಾನವಾಗಿದ್ದರೆ ೧೨ನೆಯ ಶತಮಾನದಲ್ಲಿ ರಗಳೆ, ವಚನ. ಷಟ್ಪದಿಗಳು ಬೆಳಕಿಗೆ ಬಂದು ಬೆಳಗಿದವು. ೧೫ನೆಯ ಶತಮಾನದಲ್ಲಿ ಷಟ್ಪದಿಯು ಮಂಜುಳ ಧ್ವನಿಯಿಂದ ಝೇಂಕರಿಸಿದೆ, ವಚನಗಳ ಸಂಕಲನ ನಡೆದಿದೆ. ಅವುಗಳ ಆಳವಾದ ಅಭ್ಯಾಸದಿಂದ ಶಾಸ್ತ್ರ ಹಾಗೂ ತತ್ವಕ್ಕೆ ಅನುಗುಣವಾಗಿ ಸಂಕಲನಗಳೂ ವಿಮರ್ಶೆಗಳೂ ರೂಪುಗೊಂಡಿವೆ. ಅಲ್ಲದೆ ಸಾಂಗತ್ಯ ಹಾಗೂ, ಹಾಡುಗಳೂ ಜನಜೀವನವನ್ನು ಪ್ರತಿಬಿಂಬಿಸಿವೆ. ಭಕ್ತಿ ಹಾಗೂ ಜ್ಞಾನ ಮಾರ್ಗದರ್ಶನವನ್ನು ಸಾಹಿತ್ಯವು ಪ್ರಾಮುಖ್ಯವಾಗಿ ಈ ಶತಮಾನದಲ್ಲಿ ಮಾಡಿದೆ.

ವಿಜಯನಗರದ ರಾಯರು ಕನ್ನಡ ಸಾಹಿತ್ಯ, ಸಂಸ್ಕೃತಿಗಳಿಗೆ ವಿಶೇಷ ಪ್ರೋತ್ಸಾಹನ್ನಿತ್ತರು. ಕೆಲ ಅರಸ ಆರಸಿಯರಲ್ಲದೆ ಮಂತ್ರಿಗಳೂ ದಂಡಾಧೀಶರೂ ಕವಿಗಳಾಗಿದ್ದರು ಇಲ್ಲವೆ ಕವಿ ಪೋಷಕರಾಗಿದ್ದರು. ನೂರೊಂದು ವಿರಕ್ತದಿಂದ ವೀರಶೈವ ಸಾಹಿತ್ಯವು ಹೊಸ ಜೀವಕಳೆ ತುಂಬಿ ತನ್ನ ಸತ್ವದಿಂದ ಮೆರೆಯಿತು.

ಈ ಶತಮಾನದಲ್ಲಿ ಎಲ್ಲ ಮತದ ಕವಿಗಳೂ ಘನತೆವೆತ್ತಿದ್ದಾರೆ. ಹಳೆಯ ಹಾಗೂ ಹೊಸ ವಿಷಯ, ರೂಪ, ಶೈಲಿಗಳನ್ನು ಬಳಸಿದ್ದಾರೆ. ಸಂಕೀರ್ಣತೆಯೇ ಈ ಯುಗದ ಮುಖ್ಯ ಲಕ್ಷಣ. ದೇಸಿಯ ಮುಖ್ಯ ತತ್ವಗಳಾದ ಅಭಿವ್ಯಕ್ತಿಯ ಸ್ವಾತಂತ್ರ ಮತ್ತು ಜನತಾದೃಷ್ಟಿ ಇಲ್ಲಿ ನಿಚ್ಚಳವಾಗಿ ಕಾಣುತ್ತದೆ.

ಈ ಶತಮಾನದಲ್ಲಿ ಬ್ರಾಹ್ಮಣ ಇಲ್ಲವೆ ಭಾಗವತ ವಾಙ್ಮಯವು ವಿಪುಲವಾಗಿ ಬೆಳೆದಿದೆ. ಮೊದಲಿನ ಮೀನಮೇಷವೃತ್ತಿಯನ್ನು ತೊರೆದು, ಕನ್ನಡದಲ್ಲಿ ಶ್ರದ್ಧೆಯನ್ನು ಬಲಪಡಿಸಿಕೊಂಡು ಜನಸಮ್ಮುಖವಾಗಿ ಅದು ಮುಂದರಿದಿದೆ. ಕುಮಾರವ್ಯಾಸನು ಇವರಲ್ಲಿ ಅಗ್ರಗಣ್ಯನು. ರಾಮಾಯಣ, ಭಾರತ, ಭಾಗವತ ಗ್ರಂಥಗಳು ಬೆಳೆದವು. ದಾಸವಾಙ್ಮಯವು ಸಮೃದ್ಧವಾಗಿ ಬೆಳೆಯಿತು.

ಮಾಧ್ವ ತತ್ವ ಮತ್ತು ಆಚಾರ ಧರ್ಮವನ್ನು ಕನ್ನಡದ ಮುಖಾಂತರ ಪ್ರಚಾರ ಗೊಳಿಸಿತು. ಇದರ ಮುಖಾಂತರ ಕರ್ನಾಟಕ ಸಂಗೀತವು ಜನಪ್ರಿಯು ವಾಯಿತು.

ಈ ಶತಮಾನದಲ್ಲಿ ವೀರಶೈವ ವಾಙ್ಮಯದ ಪುನರುಜ್ಜೀವನವು ಬಹು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಕೆಲವಚನಕಾರರು ಬೆಳ್ಳಿಯಂತೆ ಬೆಳ ಗಿದರು. ಮುಖ್ಯವಾಗಿ ವಚನಗಳ ಸಂಕಲನ, ಸಂಪಾದನೆ, ಟೀಕೆ ಟಿಪ್ಪಣಿ ಈ ಮೊದಲಾದ ವಿಧಾಯಕ ಮತ್ತು ವಿವರಣಾತ್ಮಕ ಕಾರ್ಯವು ಹೆಚ್ಚಾಯಿತು. ಜೊತೆಗೆ ಶಿವಶರಣರ ಮತ್ತು ಶೈವ ಕವಿಗಳ ಚರಿತ್ರ ಗ್ರಂಥಗಳು, ವೀರಶೈವ ವಿಶ್ವಕೋಶವೆನ್ನಿಸಿಕೊಳ್ಳುವ, ಬಹುವಿಷಯಗರ್ಭಿತ ಗ್ರಂಥಗಳು ನಿರ್ಮಾಣ ವಾದವು. ದೇವರಾಜ, 'ಭಕ್ತಿ ಭಂಡಾರಿ' ಲಕ್ಕಣ್ಣ ದಂಡೇಶ ಅಲ್ಲದೆ ನೂರೊಂದು ವಿರಕ್ತರಿಂದ ವೀರಶೈವ ಸಾಹಿತ್ಯವು ನಾನಾಮುಖವಾಗಿ ಬೆಳೆಯಿತು.

ಜೈನ ಕವಿಗಳು ದೇಶೀಯ ದಿಕ್ಕಿನತ್ತ ಬೀಸುವ ಗಾಳಿಯನ್ನರಿತು ತಮ್ಮ ಸಾಹಿತ್ಯ ರಥವನ್ನು ಅತ್ತ ಸಾಗಿಸಿದರು. ತೀರ್ಥಂಕರ ಚರಿತೆಗಳೂ ಹಾಗೂ ಇತರ ಜೈನ ಸಾಂಪ್ರದಾಯಿಕ ವಿಷಯಗಳು ಜನ ಸುಲಭವಾದ ಷಟ್ಪದಿ, ಸಾಂಗತ್ಯಗಳಲ್ಲಿ ನೆಲೆನಿಂತವು ನೀತಿಬೋಧಕವಾದ ಕಥೆಗಳು ಮತ್ತೆ ಮುಂದೆ ಬಂದವು. ಅಲ್ಲದೆ ಶೈವ ವೈಷ್ಣವ ಪಂಥಗಳ ಭಕ್ತಿ ಪ್ರವಾಹವು ಸಹ ಜೈನ ಗ್ರಂಥಕರ್ತರ ಮೇಲೆ ಆಗದೇ ಇರಲಿಲ್ಲ ಜಿನಸ್ತುತಿಯ ಪದ್ಯಗಳಲ್ಲಿ ಉಪನಿ ತ್ತಿಗೂ ಭಕ್ತಿ ಪಂಥಕ್ಕೂ ಸರಿಹೋಗುವ ವಿಚಾರಗಳು ಕಂಡುಬರತೊಡಗಿದವು.

ಷಟ್ಪದಿಯೇ ಈ ಶತಮಾನದ ಪ್ರಧಾನ ಕಾವ್ಯರೂಪವಾಯಿತು. ಅದರ ಲ್ಲಿಯೂ ಭಾಮಿನಿ ತರುವಾಯು ವಾರ್ಧಕ ಇವು ಹೆಚ್ಚು ಲೋಕಪ್ರಿಯವಾದವು, ಕುಮಾರವ್ಯಾಸ ಭಾರತ, ಚಾಮರಸನ ಪ್ರಭುಲಿಂಗಲೀಲೆಗಳಲ್ಲಿ ಷಟ್ಪದಿಯ ಸತ್ವವನ್ನು ಕಂಡುಕೊಳ್ಳಬಹುದು. ಆಗೀಗ ಷಟ್ಪದಿಗೆ ಮಾರ್ಗದೀಕ್ಷೆಯನು ಕೊಟ್ಟು ಪ್ರೌಢಗೊಳಿಸುವ ಪ್ರಯತ್ನಗಳೂ ಆಗದೇ ಇಲ್ಲ.

ದೇಶ್ಯ ಛಂದಸ್ಸಿನ ಇತರ ರೂಪಗಳಲ್ಲಿ ಸಾಂಗತ್ಯವೂ ಸಾಹಿತ್ಯ ಮಂದಿರ ವನ್ನು ಪ್ರವೇಶಿಸಿತು. ನೇರವಾಗಿ ಚಾರಿತ್ರಿಕ ಗ್ರಂಥಗಳು ಮೈತಾಳಿದವು. ಪದ್ಯ ಸಾಹಿತ್ಯ ವಿಪುಲವಾಗಿ ಬೆಳೆಯಿತು. ಜನಜೀವನದಿಂದ ಗಾದೆಗಳನ್ನು ಅವರಾ ಡುವ ಭಾಷೆಯಿಂದ ಎತ್ತಿಕೊಂಡುಬಳಸುವದು ಪ್ರಾರಂಭವಾಯಿತು. ಜಾನಪದದ

ಸತ್ವ ಹಾಗೂ ಶಕ್ತಿ ಸಾಹಿತ್ಯದಲ್ಲಿ ಬಂದಿತು. ಬೆಳ್ಗನ್ನಡ ನುಡಿಗಳೊಡನೆ ಅನ್ಯ ಭಾಷೆಯ ಪದಗಳ ಬಳಕೆಯನ್ನು ನಾವಿಲ್ಲಿ ಕಂಡುಕೊಳ್ಳಬಹುದು. ವ್ಯಾಕರಣದ ದೃಷ್ಟಿಯಿಂದಲೂ ನಡುಗನ್ನಡವು ಹೊಸಗನ್ನಡದತ್ತ ತಿರುಗುತ್ತಿರುವದನ್ನು ಕಾಣಬಹುದು ಒಟ್ಟನಲ್ಲಿ ಸಾಹಿತ್ಯವು ಜನಜೀವನದ ಸಮೀಪವರ್ತಿಯಾಯಿತು.

ಪ್ರಶ್ನೆ ೧೯— ಟಿಪ್ಪಣಿ ಬರೆಯಿರಿ— ಅ) ಕುಮಾರವ್ಯಾಸ, ಲಕ್ಕಣ ದಂಡೇಶ, ಇ) ಚಾಮರಸ, ಈ) ಭಾಸ್ಕರ ಉ) ಕುಮಾರ ವಾಲ್ಮೀಕಿ, ಊ) ನಿಜಗುಣ ಶಿವಯೋಗಿ, ಋ) ತೋಂಟದ ಸಿದ್ಧೇಶ್ವರ.

ಉತ್ತರ— (ಅ) ಕುಮಾರವ್ಯಾಸ— ಕುಮಾರವ್ಯಾಸನು 'ನಮ್ಮ ಕವಿಗಳಲ್ಲಿ ಹಿರಿಯ ತಲೆ; ಹಿರಿಯರಲ್ಲಿ ಹಿರಿಯ-ನಮ್ಮ ಸಾಹಿತ್ಯದ ಉತ್ತಮ ರತ್ನಗಳಲ್ಲಿ ನಾಯಕ ರತ್ನ' ಎಂದು ಮುಕ್ತ ಕಂಠದಿಂದ ಬಂದ ಶ್ರೀ ಅವರ ಹೊಗಳಿಕೆಗೆ ಪಾತ್ರನಾದ ಕವಿಯ ಹೆಸರು ನಾರಾಣಪ್ಪ. ಹುಟ್ಟಿದ ಊರು ಹುಬ್ಬಳ್ಳಿ ತಾಲೂಕಿನ ಕೋಳಿವಾಡ. ಅವನ ಕಾರ್ಯರಂಗ ಗದಗು, ಅದರಲ್ಲಿಯೂ ನಾರಾಯಣ ಸ್ವಾಮಿಯ ಅಡಿದಾವರೆ. ಅವನ ಜನನವೂ ಕತೆಯೊಂದರಿಂದ ತಿಳಿದು ಬರುವಂತೆ ವೀರ ನಾರಾಯಣಸ್ವಾಮಿಯ ಅನು ಗ್ರಹದಿಂದಲೇ ಆಯಿತು.

ಇವನು ಬ್ರಾಹ್ಮಣ ಕವಿ, ಸ್ಮಾರ್ತನೆಂದೂ ವೈಷ್ಣವನೆಂದೂ ಹೇಳುವ ದುಂಟು. ಆದರೆ ಅವನು ಭಾಗವತ ಸಾಂಪ್ರದಾಯದ ಕವಿ ಎಂಬುದೇ ಸತ್ಯ. ಹರಿಹರರಲ್ಲಿ ಅವನಿಗೆ ಭೇದವಿಲ್ಲ. ಒಟ್ಟನಲ್ಲಿ ಕುಮಾರವ್ಯಾಸನು ಅದ್ವೈತಿ ಯಾದ ಸ್ಮಾರ್ತ ಬ್ರಾಹ್ಮಣನೆಂದೂ ಹರಿಭಕ್ತಿ ನಿರತನಾದರೂ ಹರಿಹರರಲ್ಲಿ ಭೇದವನ್ನೆಣಿಸದ ಸಂಪ್ರದಾಯಿಯೆಂದು ತಿಳಿಯಬೇಕು. ಇಲ್ಲಿ ಬರುವ ಭಗವದ್ಗೀತೆಯ ಅದ್ವೈತಪರ ನಿರೂಪಣೆಯೂ ಇದಕ್ಕೆ ಸಾಕ್ಷಿಯಲ್ಲದೆ ಶಂಕರಸಯ್ಯ ಎಂದು ಅವನ ಅಣ್ಣ ತಮ್ಮಂದಿರ ಹೆಸರೂ ಇವೆ. ಕುಲಪರಂಪರೆ ಯಂತೆ ವಿಜಯನಗರದ ಅರಸರಲ್ಲಿ ಇವನು ಗಣಪತಿಯಾಗಿಯೂ ಇರಬಹು ದಾಗಿದೆ. ಇದಕ್ಕೂ ಮುಖ್ಯವಾದದ್ದೆಂದರೆ ಅವನೊಬ್ಬ 'ಯೋಗೀಂದ್ರ'.

ಇವನ ಕಾಲ ೧೪೩೦ ಎಂದು ಕವಿ ಚರಿತೆಕಾರರು ಹೇಳಿದ್ದಾರೆ. ಶ್ರೀ ರಾಜಪುರೋಹಿತರು ೧೫೩೦ ಎಂದೂ ಶ್ರೀ ಗೋವಿಂದ ಪೈಗಳು ೧೫ನೆಯ

ಶತಮಾನದ ಪೂರ್ವಾರ್ಧವೆಂದೂ ಹೇಳಿದ್ದಾರೆ. ಇದಕ್ಕೆ ದೊರೆಯುವ ಆಧಾರಗಳೆಂದರೆ ಕೃಷ್ಣದೇವರಾಯನು ಇದ್ದುಳಿದ ಭಾಗವನ್ನು ತಿಮ್ಮಣ್ಣ ಕವಿಯಿಂದ ಹೇಳಿಸಿದ ಸಂಗತಿ, ಚಾಮರಸನ ಹಾಗೂ ಕುಮಾರವ್ಯಾಸನಲ್ಲಿ ನಡೆದ ಕಾವ್ಯ ಸ್ಪರ್ಧೆ ಹಾಗೂ ಬಾಂಧವ್ಯ, ರಾಘವಾಂಕನು ಇವನನ್ನು ವ್ಯಾಕ್ಯ ಸ್ಪರ್ಧೆಯಲ್ಲಿ ಸೋಲಿಸಿದನೆನ್ನುವದು. ಕನಕದಾಸರು ಪರ್ಯಾಯವಾಗಿ ಇವರನ್ನು ಭಾಸ್ಕರ ಹಾಗೂ ಕುಮಾರ ವಾಲ್ಮೀಕಿ ಕವಿಗಳು ಕುಮಾರವ್ಯಾಸನನ್ನು ನೆನೆದುದು, ಇವನು ಬಳಸಿದ ಮರಾಠಿ ಶಬ್ದಗಳು, ಸೇವುಣ ಹೊಯ್ಸಳ ಅರಸರ ಉಲ್ಲೇಖ, ಕೊನೆಯದಾಗಿ ತಿಳಿಯ ಹೇಳುವೆ ಕೃಷ್ಣ ಕಥೆಯನು.... ಕೃಷ್ಣ ಮೆಚ್ಚಲಿಕೆ' ಎಂಬ ಉಕ್ತಿ.

ಇವನ ಗ್ರಂಥ 'ಕನ್ನಡ ಭಾರತ' ಇದಕ್ಕೆ 'ಗದುಗಿನ ಭಾರತ', 'ಕುಮಾರವ್ಯಾಸ ಭಾರತ', 'ಕರ್ನಾಟಕ ಮಹಾಭಾರತ ಕಥಾಮಂಜರಿ' ಎಂದೂ ಕರೆಯುವದುಂಟು. ಇದಲ್ಲದೆ 'ಐರಾವತವು' ಇವನ ಇನ್ನೊಂದು ಗ್ರಂಥ. ಕನ್ನಡ ಭಾರತವು ಹತ್ತುಪರ್ವಗಳ ಮೇರು ಕೃತಿ.

ತಿಣುಕಿದನು ಫಣಿರಾಯ ರಾಮಾ | ಯಣದ ಕವಿಗಳ ಭಾರದಲಿ ತಿಂ |
ತಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ ||

ಈ ಕಾರಣದಿಂದಲೇ ತಾನು ರಾಮಾಯಣವನ್ನು ಬರೆಯದೆ ಭಾರತವನ್ನು ಬರೆದೆನೆನ್ನುತ್ತಾನೆ. 'ವೀರನಾರಾಯಣನೇ ಕವಿ ಲಿಪಿಕಾರ ಕುಮಾರ ವ್ಯಾಸ'ನೆಂದಲ್ಲಿ ಕವಿಯ ಭಕ್ತಿ ಮನೋಧರ್ಮ ವ್ಯಕ್ತವಾಗುತ್ತದೆ. 'ಅರಸು ಗಳಿಗಿದು ವೀರ...' ಎಂಬಲ್ಲಿ ತನ್ನ ಕಾವ್ಯದ ಯೋಗ್ಯತೆ ಹಾಗೂ ಸತ್ವವನ್ನು ಅವನು ಚೆನ್ನಾಗಿ ಅರಿತಿದ್ದನೆಂದೂ, 'ಹಲಗೆ ಬಳಪವಪಿಡಿಯದೊಂದಗ್ಗಳಿಕೆ.... ಎಂಬ ಪದ್ಯದಲ್ಲಿ ತನ್ನ ಕವಿತಾಸಾಮರ್ಥ್ಯದಮೇಲೆ ಸಂಪೂರ್ಣವಿಶ್ವಾಸವಿರುವನೆಂದೂ ಅನಿಸುವದು- ಆದರೂ ಇದು 'ಕೃಷ್ಣ ಕಥೆ' 'ಕೃಷ್ಣ ಮೆಚ್ಚಲಿಕೆ' ಇದನ್ನು ಬರೆದದ್ದು. ಇದು ಅಪೂರ್ಣ ಗ್ರಂಥವಲ್ಲವೆನ್ನುವದು ಮುಕ್ತಾಯದಲ್ಲಿದ್ದ ಗ್ರಂಥಸ್ತುತಿ, ಫಲಶೃತಿಗಳೇ ಹೇಳುತ್ತವೆ. 'ಐರಾವತವು' ಕುಮಾರ ವ್ಯಾಸನ ಹೆಸರಿನಿಂದ ಇನ್ನೊಬ್ಬರು ಬರೆದಿರಬೇಕು ಯಾಕಂದರೆ ಇಲ್ಲಿಯ ಭಾವ, ಭಾಷೆಗಳಲ್ಲಿ ಅವನ ಉತ್ಪ್ರೇಕ್ಷೆ ಸಹಜತೆಗಳು ಇಲ್ಲ.

ವ್ಯಾಸ ಭಾರತವೇ ಮುಖ್ಯ ಆಧಾರವಾದರೂ ಪಂಪ ಭಾರತದ ಛಾಯೆ ಬೀಳದಿಲ್ಲ. ಈ ಮಹಾಕೃತಿಗೆ ನಾಯಕ ಗದುಗಿನ ವೀರನಾರಾಯಣನು. ಸಂಸ್ಕೃತ ಹಾಗೂ ಕನ್ನಡ ಕಾವ್ಯ ಮತ್ತು ಭಗವದ್ಭಕ್ತರ ಕಥನ ಪರಂಪರೆಗಳಿಂದಲೂ ಕೆಲ ಅಂಶಗಳನ್ನು ಎತ್ತಿಕೊಂಡಿರಬೇಕು. ವ್ಯಾಸಭಾರತವನ್ನು ಕನ್ನಡಿಸುವಲ್ಲಿ ಸಂಕೋಚ ವಿಸ್ತಾರಗಳಾಗಿವೆ. ಮೂಲತ್ಯಾಗ ವ್ಯತ್ಯಾಸಗಳೂ ಆಗಿವೆ. ಒಟ್ಟಿನಲ್ಲಿ ಸ್ವತಂತ್ರ ಕಾವ್ಯವಾಗಿದೆ. ಕುಮಾರ ವ್ಯಾಸನು ಉಜ್ವಲ ಪ್ರತಿಭೆಯಿಂದ, ತಾನು ಮಾಡಿಕೊಂಡ ಬದಲಾವಣೆಗಳಿಂದ, ತನ್ನ ವಿಶಿಷ್ಟ ನಿರೂಪಣೆಯ ಫಲವಾಗಿ ವ್ಯಾಸಭಾರತಕ್ಕಿಂತಲೂ ಮುಂದೆ ಹೋಗಿ ಭಾಗವತ ಪ್ರಜ್ಞೆಯ ಮತ್ತು ಕಲಾ ಪ್ರಜ್ಞೆಯ ಸಾರ್ಥಕ್ಯವನ್ನು ಸಾಧಿಸಿದ್ದಾನೆ.

ಕಥಾ ರಚನೆಗಿಂತಲೂ ಮಿಗಿಲಾಗಿ ಪಾತ್ರನಿರೂಪಣೆಯಲ್ಲಿ ಕುಮಾರ ವ್ಯಾಸನು ಘನತೆಯನ್ನು ಮೆರೆದಿದ್ದಾನೆ. ಆಯಾ ವ್ಯಕ್ತಿಗಳು ಒಂದೊಂದು ಮಾತಿನಲ್ಲಿ ಮೂರ್ತಿಗೊಂಡು ಇದಿರು ನಿಲ್ಲುತ್ತವೆ. ಮಹಾಭಾರತದಲ್ಲಿಯ ವ್ಯಕ್ತಿಗಳೆಲ್ಲ ಕುಮಾರವ್ಯಾಸನ ಕೃತಿರಂಗದಲ್ಲಿ ಕಾಲಿಟ್ಟು ಜೀವಂತ ವ್ಯಕ್ತಿಗಳಾಗಿ ಸಾಮಾನ್ಯರಿಗೂ ಗುರುತಿನವರಾಗಿ ಬಿಡುತ್ತಾರೆ. ಕೃಷ್ಣನೇ ಇಲ್ಲಿ ಪ್ರೇರಕ ಶಕ್ತಿ, ಚಾಲಕ ಶಕ್ತಿ. ಭೀಮ, ದ್ರೌಪದಿ, ಉತ್ತರಕುಮಾರರು ಕುಮಾರವ್ಯಾಸನ ವೀರಪ್ರತಿಭೆಯು ಗಂಭೀರ ಮತ್ತು ಹಾಸ್ಯಪರ ಶ್ರೇಷ್ಠ ನಿರ್ಮಿತಿಗಳಾಗಿದ್ದಾರೆ. ಭೀಮನ ಪಾತ್ರ ಅವನ ಮಹಾ ಕವಿತ್ವಕ್ಕೆ ನಿದರ್ಶನ, ದ್ರೌಪದಿಯು ಸದ್ಗುಣ ಭರಿತಳಾದ ಸರ್ವಾದರಣೀಯಳಾದ ಅದ್ಭುತ ವ್ಯಕ್ತಿ, ಉತ್ತರ ಕುಮಾರನಂತೂ ವಿಶ್ವ ಸಾಹಿತ್ಯದಲ್ಲಿಯೇ ಅದ್ವಿತೀಯ. 'ಭೀಮನು ವೀರರ ಪುರುಷ ರೂಪ, ದ್ರೌಪದಿ ಅದರ ಸ್ತ್ರೀ ರೂಪ- ರೌದ್ರ. ಭೀಭತ್ಸ. ಅದ್ಭುತಗಳು ಅವರ ಪ್ರಕೃತಿಗೆ ಹತ್ತಿರವಾಗಿವೆ. ಉತ್ತರ ಕುಮಾರನು 'ವಾಚಿ ವೀರ್ಯದ ಪ್ರತೀಕ. ಇನ್ನಿತರ ಪಾತ್ರಗಳಲ್ಲಿ ಖಲಚತುಷ್ಟಯವೆಂದು ಹೆಸರುಗೊಂಡ ದುರ್ಯೋಧನ, ದುಶ್ಯಾಸನ, ಶಕುನಿ, ಹಾಗೂ ಕರ್ಣರಿದ್ದಾರೆ ಧೃತರಾಷ್ಟ್ರ, ಗಾಂಧಾರಿಯರಲ್ಲಿ ಒಂದು ಮೋಹದ ಕುರುಡು. ಇನ್ನೊಂದು ಸತ್ಯದ ಕಡೆಗೆ ನೋಡಿಯೂ ನೋಡದ ಕುರುಡು. ಕರ್ಣನ ಪಾತ್ರದಲ್ಲಿ ಶೌರ್ಯ, ತ್ಯಾಗ, ನಿಷ್ಠೆ, ದುರ್ವಿಧಿ ವಿಲಾಸ, ದೈವಭಕ್ತಿ ಇವೆಲ್ಲವನ್ನೂ ಕುಮಾರವ್ಯಾಸನು ಚಿತ್ತದಲ್ಲಿ ಅಚ್ಚೊತ್ತಿದಂತೆ ಪ್ರಭಾವಿಯಾಗಿ ಚಿತ್ರಿಸಿರುವನು.

ಕುಮಾರ ವ್ಯಾಸನ ವರ್ಣನೆಗಳಲ್ಲಿ ಒಂದು ಅಪೂರ್ವತೆಯಿದೆ: ವರ್ಣನೆಗಳೆಲ್ಲ ಹೃದ್ಯವಾಗಿವೆ. ಅಲಂಕಾರ ಜಾಲ, ಶಬ್ದಚ್ಛಲಗಳಲ್ಲಿ ಕಲೆ, ಪಾಶಗಳು ಎಚ್ಚರ ತಪ್ಪುವದಿಲ್ಲ ಸಾಮಾನ್ಯವಾಗಿ ಪಾತ್ರಗಳ ಮನಶ್ಚತ್ರ, ಭಾವರಿಸ ನಿರೂಪಣೆ ಹಾಗೂ ಮನೋಲೋಕದ ವರ್ಣನೆಗಳಲ್ಲಿ ಅವನ ಪ್ರತಿಭೆ ಕಾವುಗೊಳ್ಳುತ್ತದೆ. ಕುಮಾರ ವ್ಯಾಸನ ಕಲ್ಪನಾಶಕ್ತಿ ಅವನದೆ ಆಗಿದೆ. 'ನಾರಾಣಪ್ಪನು ರೂಪಕ ಸಾಮ್ರಾಜ್ಯದ ಚಕ್ರವರ್ತಿ' ಈ ದಿಶೆಯಲ್ಲಿ ಕನ್ನಡ ಕವಿಗಳಲ್ಲಿ ನೂತನತೆ ಅವನಿಗೆ ಮೊದಲು ನೈವೇದ್ಯ. ಅವನ ಮಾಗಿದ ಪ್ರಜ್ಞೆಯಿಂದ; ಋಷಿತುಲ್ಯವಾದ ಜೀವನ ಸಿದ್ಧಿಯಿಂಡ ಸಂತುಷ್ಟಳಾದ ಸರಸ್ವತಿ ಅವನಿಗೆ ಇಲ್ಲಿ ಒಲಿದಿದ್ದಾಳೆ.

ವೀರನಾರಾಯಣನ ಕರುಣೆಯಿಂದ ಕುಮಾರವ್ಯಾಸನಿಗೆ ಕನ್ನಡ ದೇಶಿಯ ಅಕ್ಷಯ ಸಂಪತ್ತಿ ದೊರೆತಿದೆ. ಕನ್ನಡ ದೇಸಿಯನ್ನು ಸಹಜವಾಗಿ ಬಳಸಿದ್ದಾನೆ. ಜಾನಪದ ಸಾಹಿತ್ಯ ಇವನಲ್ಲಿ ಸಿದ್ಧಿಪಡೆದಿದೆಯಾದರೂ ಸಂಸ್ಕೃತ ಮಾರ್ಗದ ಸಂಸ್ಕಾರಗಳಿವೆ. ಅನ್ಯ ಭಾಷೆಯ ಶಬ್ದಗಳ, ಅದರಲ್ಲಿ ಮರಾಠಿ ಪದಗಳ ಪ್ರಾಬಲ್ಯವಿದೆ. ಒಟ್ಟನಲ್ಲಿ ಕುಮಾರವ್ಯಾಸನು ತನ್ನ ಜೀವಸಾಧನೆ, ವಾಙ್ಮಯ ತಪಶ್ಚರ್ಯ ಇವುಗಳಿಂದ ತನ್ನ ಮನಸ್ಸನ್ನು ತಿಳಿಯಾದ ಕನ್ನಡಿಯಂತಾಗಿಸಿ ಅದರಲ್ಲಿ ವ್ಯಾಸಭಾರತವನ್ನು ಬೆಳಗಿದ್ದಾನೆ, ಸಚೇತನಗೊಳಿಸಿದ್ದಾನೆ. ತಾನೇ ಅಮರ ಮುಕುರವಾಗಿದ್ದಾನೆ.

**ಆ) ಲಕ್ಕಣ್ಣ ದಂಡೇಶ-** ಅದ್ಭುತ ವೇಗ ಮತ್ತು ಕಾಂತಿಯಿಂದ ಬೆಳಗಿದ ಶರಣ ಸಾಹಿತ್ಯವು ಸಾಮಾಜಿಕ ಕ್ರಾಂತಿಯ ಪ್ರಯೋಗದಲ್ಲಿ ಸ್ಫೋಟವನ್ನು, ಅನುಭವಿಸಿ, ಕೆಲಮಟ್ಟಿಗೆ ಚದುರಿ ಮುಂದೆ ತಲೆ ಎತ್ತಲು ಅದಕ್ಕೆ ಕಾಲ ಬೇಕಾಯಿತು ವಿಜಯನಗರ ಸಾಮ್ರಾಜ್ಯ ಸ್ಥಿರವಾಗುವವರೆಗೆ ವೀರಶೈವ ಸಾಹಿತ್ಯ ಪುನರುಜ್ಜೀವನವು ತಡೆಯಬೇಕಾಯಿತು. ತಡೆದರೂ ತಡೆದು ಬಂದ ಮಳೆಯಂತೆ ಅದು ಸುತ್ತಲೂ ಸುರಿಯಿತು, ಸಮೃದ್ಧಿಯನ್ನು ಮತ್ತೆ ತಂದಿತು.

ಇದಕ್ಕೆ ಬಹುಮಟ್ಟಿಗೆ ಕಾರಣನೆಂದರೆ ಜಕ್ಕಣಾರ್ಯ. ಇವನು ಪ್ರೌಢ ದೇವರಾಯನಲ್ಲಿ ದಂಡಾಧೀಶನಾಗಿದ್ದನು. ಇವನಿಗೆ 'ಭಕ್ತಿ ಭಂಡಾರಿ ಎಂಬ

ಬಿರುದು ಇದ್ದಿತು. ಇವನ ಗುರುಗಳು 'ಏಕೋತ್ತರ ಶತಸ್ಥಲ' ವೆಂಬ ವಚನ ಸಂಕಲನವನ್ನು ರಚಿಸಿದ ಮಹಾಲಿಂಗದೇವ. ನೂರೊಂದು ವಿರಕ್ತರಲ್ಲಿ ಒಬ್ಬ ಈ ಸಂಕಲ ತನ್ನ ಶಿಷ್ಯನಿಗಾಗಿ ಮಾಡಿದ್ದು.

ಜಕ್ಕಣಾರ್ಯನು 'ಏಕೋತ್ತರ ಸ್ಥಲ'ವನ್ನು ಬರೆದಿದ್ದಾನೆ. ಮಹಾಲಿಂಗ ದೇವನ ಶಿಷ್ಯನಾದ ಕುಮಾರ ಬಂಕನಾಥನ ಕರಜಾತನೆಂದು ಇವನ ವರ್ಣನೆ ಯಿದೆ. ತನ್ನ ಶಕ್ತಿಯನ್ನೂ ಸಂಪತ್ತಿಯನ್ನೂ ವೀರಶೈವ ಗ್ರಂಥಗಳ ರಚನೆ ಗಾಗಿ ಇವನು ಸೂರೆ ಮಾಡಿರಬೇಕು. 'ಭೈರವೇಶ್ವರ ಕಾವ್ಯದ ಕಥಾ ಸೂತ್ರ ರತ್ನಾಕರ'ದಿಂದ ಪ್ರಭುದೇವರ ವಚನಗಳಿಗೂ ಸೂತ್ರ ಸ್ಥಲವಿಟ್ಟು ವ್ಯಾಖ್ಯಾನ ಮಾಡಿರುವದಾಗಿ ತಿಳಿದಿದೆ. ವಚನಗಳ ಶಾಸ್ತ್ರಬದ್ಧವಾದ ಸಂಕಲನಕ್ಕೆ ತಾನು ಮುಂದಾದದ್ದಲ್ಲದೆ ಪ್ರೋತ್ಸಾಹವನ್ನೂ ಜಕ್ಕಣಾರ್ಯನು ಕೊಟ್ಟು ವಚನ ಶಾಸ್ತ್ರದ ಪುನರುಜ್ಜೀವನ ಹಾಗೂ ಶಾಸ್ತ್ರೀಯವಾದ ಅಭ್ಯಾಸಕ್ಕೆ ಪ್ರೇರಕವಾಗಿದ್ದನು.

ಇ) ಚಾಮರಸ— ಇವನ ಕಾಲ ೧೪೩೦ ಎಂದು ಗ್ರಹಿಸಲಾಗಿದೆ. ವಿಜಯ ನಗರದ ಪ್ರೌಢ ದೇವರಾಯನ ಕಾಲದಲ್ಲಿ ಇದ್ದ ನೂರೊಂದು ವಿರಕ್ತ ರಲ್ಲಿ ಇವನ ಗಣನೆಯೂ ಇದೆ. ಇವನು ಗದುಗಿನವನೆಂದು ಗುರುರಾಜ ಚಾರಿತ್ರ. ಚೋರಬಸವ ಚರಿತ್ರೆ ಮುಂತಾದವುಗಳಿಂದ ತಿಳಿಯುತ್ತದೆ. ನಾಗಣಪುರದವನೆಂದು ಪ್ರಭುದೇವರ ಸಾಂಗತ್ಯದಿಂದ ತಿಳಿಯುತ್ತದೆ. ಕುಮಾರವ್ಯಾಸನ ಬಾಂಧವ್ಯ ಹಾಗೂ ಅವನೊಂದಿಗಿನ ಕಾವ್ಯ ಸ್ಪರ್ಧೆಯ ಕತೆಗಳಿಂದ ಇವನು ಕುಮಾರವ್ಯಾಸನ ಸಮಕಾಲೀನನೆಂದೂ ಹೇಳಬಹುದು. ಚಾಮರಸನೆಂದರೆ ಹೆಸರಿಗೆ ತಕ್ಕ ಅರಸನಾಗಿದ್ದನೋ ಹೆಸರಿಗೆ ಮಾತ್ರ ಅರಸನಾಗಿದ್ದನೋ ತಿಳಿಯದು.

ಇವನ ಗ್ರಂಥ 'ಪ್ರಭುಲಿಂಗಲೀಲೆ' ಈ ಶತಮಾನದ ಅಮರ ಚರಿತ್ರ ಗ್ರಂಥ, ಭಾಮಿನಿ ಷಟ್ಪದಿಯ ಸತ್ವವನ್ನು ವ್ಯಕ್ತ ಪಡಿಸಿದ ಗ್ರಂಥ ಈ ಶ್ರೇಷ್ಠ ಕತೆಗೆ ಕಥಾನಾಯಕನ ಮತ್ತು ಚರಿತ್ರಕಾರನ ಚರಿತ್ರಾತ್ಮಕ ವೇಳವಿಕೆಯೇ ಮುಖ್ಯ. ಚಾಮರಸನ ಪ್ರತಿಭೆಗೆ ವ್ಯಕ್ತಿತ್ವದ ಜೋಡಿರುವದರಿಂದಲೇ ಅವನ ಕೃತಿ ಸಫಲವಾಯಿತು.

'ದೇಗುಲವೇ ಮಾತಾಡುವಂದದೊಳು........', 'ವಿವರಿಸುವೊಡೆ ಲೀಲೆಯನು ಹೇಳುವನು ದಿಟ ನಾನಲ್ಲ.... ಶಿವನ ನಟನಾಟಕದ ಮಹಿಮೆಯನ್ನು ಶಿವನೇ ಬಲ್ಲನು', ಕಾಳಗದ ಕಥೆಯಲ್ಲ, ಸತ್ತವರ ಕಥೆಯಲ್ಲ, ಮುಂದಾದ ಮಾತ ಗಳಲ್ಲಿ ಕವಿಯ ಉದ್ದೇಶ, ವಿನಯಶೀಲತೆ, ದೃಷ್ಟಿ ವಿಶೇಷಗಳನ್ನು ಕಾಣಬಹುದು. 'ಕುರಿಗಳೋಪಾದಿಯಲ್ಲಿ ಕಬ್ಬಿನ........' ಎಂಬ ಪದ್ಯದಲ್ಲಿ ಇದನ್ನು ಕೇಳುವ ರೀತಿಯಲ್ಲಿ ಹೇಳಿದ್ದಾನೆ. ಚಾಮರಸನು ಅಲ್ಲಮ ಪ್ರಭು ಸಂಪ್ರದಾಯದ ಸಲ್ಲಲಿತ ಸನ್ಮಾರ್ಗದಲ್ಲಿ ಹೇಳಿದ್ದಾನೆ. 'ಪ್ರಭುದೇವರ ರಗಳೆಯೇ ಇದಕ್ಕೆ ಆಧಾರವು.

ಅಲ್ಲಮ ಪ್ರಭುವಿನ ವ್ಯಕ್ತಿ ಚಿತ್ರಣದಲ್ಲಿಯೇ ತನ್ನೆಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ಎಲ್ಲ ಸನ್ನಿವೇಶಗಳನ್ನು ಮೂಲ ಉದ್ದೇಶ ಸಿದ್ಧಿಗೆ ಅನುಗೊಳಿಸಿ ಇತರ ವಿಲೋಭನಗಳ ಮಾಯೆಗೆ ಬಲಿಬೀಳದೆ ವ್ಯಕ್ತಿ ಕೇಂದ್ರಿತ ಚರಿತ್ರೆಯನ್ನು ಸಮರ್ಪಕವಾಗಿ ಸಹಜವಾಗಿ ಬರೆದಿರುವದರಲ್ಲಿ ಚಾಮರಸನ ಹಿರಿಮೆಯಿದೆ. ಅಲ್ಲಮನ ಮೂರ್ತಿ ಸ್ವರೂಪವನ್ನು ಚಾಮರಸನು ಸಂಪೂರ್ಣವಾಗಿ ಸಹಜೋಜ್ವಲವಾಗಿ ಚಿತ್ರಿಸಿದ್ದಾನೆ. ಅವನ ಚಿತ್ರಣದಲ್ಲಿ ಆದರ್ಶೀಕರಣವಿದೆ, ಧಾರ್ಮಿಕ ಅಭಿನಿವೇಶನವಿದೆ.

ಕಥಾ ರಚನೆಯಲ್ಲಿ ಆಧ್ಯಾತ್ಮಿಕವಾದ ಸಾಂಕೇತಿಕ ಧ್ವನಿಯ ಏಕತೆ ಕಾಣುತ್ತದೆ. ಮಹಾತ್ಮರ ಜೀವನ ಚರಿತೆಯನ್ನು ಕಾವ್ಯ ರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗ ಲೀಲೆ ಉತ್ತಮ ನಿದರ್ಶನವಾಗಿದೆ. ಉಜ್ವಲ ವ್ಯಕ್ತಿಗಳ ಚರಿತ್ರೆಯನ್ನು ಅವರ ವ್ಯಕ್ತಿತ್ವಕ್ಕೆ ಕುಂದು ಬಾರದ ರೀತಿಯಲ್ಲಿ ಬರೆಯಬೇಕೆನ್ನುವವರಿಗೆ ಚಾಮರಸನ ಮಾರ್ಗವು ಆದರ್ಶವಾಗಿದೆ.

ಕಾವ್ಯದೃಷ್ಟಿಯಿಂದ ಚಾಮರಸನ ಕೃತಿಯು ಅವನ ಕಲ್ಪನಾ ಸಂಪತ್ತಿಯು ಹಾಗೂ ಶಬ್ದ ಶಕ್ತಿಯ ಸಹಜ ವಿಲಾಸವನ್ನೂ ಹೆಜ್ಜೆ ಹೆಜ್ಜೆಗೆ ವ್ಯಕ್ತ ಪಡಿಸಿದೆ. ಚಾಮರಸನು ಅಲ್ಲಮನಲ್ಲಿ ಹೊಂದಿದ ತಾದಾತ್ಮ್ಯ, ಪಡೆದ ಸೂಕ್ಷ್ಮಜ್ಞಾನ ಇವು ಪ್ರಭುಲಿಂಗಲೀಲೆಯ ಬರವಣಿಗೆಗೆ ಪ್ರಾಸಾದಿಕ ಪ್ರವಾಹವನ್ನು ಕಲ್ಪನಾ ವಿಲಾಸವನ್ನೂ ಒದಗಿಸಿರಬೇಕು.

ಚಾಮರಸನ ಅಚ್ಚ ಗನ್ನಡ ದೇಸಿ ಅಪ್ರಯತ್ನ ಸಮೃದ್ಧಿಯಾಗಿ ಬಂದು ಕಲ್ಪನೆಯ ಸ್ಪಷ್ಟತೆಯನ್ನು ಇನ್ನಿಷ್ಟು ನಿಚ್ಚಳವಾಗಿಸುತ್ತದೆ, ಸರಳವಾದ

ಉತ್ಕಟತೆಯ ಪರಿಣಾಮವನ್ನುಂಟು ಮಾಡುತ್ತದೆ. ಅವನ ತಿಳಿಗನ್ನಡದ ಚಿಕ್ಕ ಹಾಗೂ ಚೊಕ್ಕನುಡಿಗಳು ವೈಹಾಳಿಗೆ ದೊರೆತ ಮರಿಗುದುರೆಗಳಂತೆ ಮೆರೆಯುತ್ತವೆ. ಚಾಮರಸನ ಶೈಲಿಯಲ್ಲಿ ಆಡಂಬರವಿಲ್ಲ. ಅತಿ ಅಲಂಕಾರವಿಲ್ಲ, ಸಂಸ್ಕೃತದ ಅತಿರೇಕವಿಲ್ಲ; ಸಮಾನವಾದ ಸಲೀಲವಾದ ಗತಿಯಿದೆ. ಭಾಮಿನಿ ಷಟ್ಪದಿಯ ನಿರರ್ಗಳವಾದ ಬಳಸುವಿಕೆಯಲ್ಲಿಯೂ ರೂಪಕ ಸಂಪತ್ತಿಯಲ್ಲಿಯೂ ಕುಮಾರ ವ್ಯಾಸನಿಗೆ ಸರಿತೂಗುವ ಯೋಗ್ಯತೆ ಚಾಮರಸನಲ್ಲಿದೆ.

ಈ) ಭಾಸ್ಕರ— ಇವನು ಜೈನ ಕವಿಯು ೧೪೨೩-೨೪ ರಲ್ಲಿ 'ಜೀವಂಧರ ಚರಿತೆ'ಯನ್ನು ರಚಿಸಿವೆನೆಂದು ಹೇಳಿಕೊಂಡಿದ್ದಾನೆ. ಜೀವಂಧರ ಚರಿತೆ'ಯು ಭಾಮಿನಿ ಷಟ್ಪದಿಯಲ್ಲಿದೆ ಇದೊಂದು ನೀತಿಬೋಧಕವಾದ ಕಥೆ. ಕುಮಾರವ್ಯಾಸನ ಕಾಲವನ್ನು ಕುರಿತು ವಿಚಾರಿಸುವಾಗ ಪೋಷಕಾಂಶಗಳು ಇವನಿಂದ ದೊರೆಯಬಹುದಾಗಿದೆ.

ಭಾಸ್ಕರನು ತಾನು 'ಭೂಸರೋತ್ತಮ ಒಸವಣಾಂಕ ಸುತ'ನೆಂದು ಹೇಳಿಕೊಂಡದ್ದರಿಂದ ಇವನ ತಂದೆ ಮೊದಲು ಬ್ರಾಹ್ಮಣನಾಗಿದ್ದು ನಂತರ ಜೈನ ಧರ್ಮವನ್ನು ಸ್ವೀಕರಿಸಿರಬೇಕು.

ಇವನು ಕುಮಾರವ್ಯಾಸ ಮಹಾಭಾರತವನ್ನು ಓದಿರಬೇಕು. ಯಾಕಂದರೆ ಅವನ ಕಾವ್ಯ ಭಾಗಗಳನ್ನು ಒಂದೆರಡು ಕಡೆಗಳಲ್ಲಿಯಾದರೂ ಎರವಲಾಗಿ ತೆಗೆದುಕೊಂಡಿದ್ದಾನೆ. ಕುಮಾರವ್ಯಾಸನಿಗೆ ವಿಶಿಷ್ಟವಾದ ಪದ ಪ್ರಯೋಗಗಳನ್ನು ಅಲ್ಲಲ್ಲಿ ಕಾಣುತ್ತೇವೆ. ಅಲ್ಲದೆ ಭಾಸ್ಕರನು ಅನುಕರಣಪ್ರಿಯ ಸಾಧಾರಣ ಕವಿಯೂ ಆಗಿದ್ದಾನೆ.

ವಾರಿಮುದಗಜಸಿಂಹಸೂರಿಗಳಾದಿಯಲಿ ನವ ಸಂಸ್ಕೃತದೆ ಸಂ।
ಪಾದಿಸಿದ ಭೂವಿನುತ ಜೀವಂಧರ ಚರಿತವನು ॥

ಹೇಳುವೆನೆಂದು ಭಾಸ್ಕರನು ಹೇಳಿದ್ದಾನೆ. ೧೨ ನೆಯ ಶತಮಾನದ ಒಡೆಯದೇವ ಇಲ್ಲವೇ ವಾದೀಭಸಿಂಹ ಎಂಬ ಕವಿಯು ಗದ್ಯಚಿಂತಾಮಣಿ' ಮತ್ತು 'ಕ್ಷತ್ರಿಯ ಚೂಡಾಮಣಿ'ಗಳಲ್ಲಿ ಜೀವಂಧರ ಚರಿತೆಯನ್ನೇ ಬರೆದಿದ್ದಾನೆ. ಮೊದಲನೆಯದು ಗುಣಭದ್ರನ ಉತ್ತರ ಪುರಾಣದಿಂದ ಆಧರಿಸಿದ್ದು' ಎರಡನೆಯದು 'ಜೀವಕ ಚಿಂತಾಮಣಿ' ಎಂಬ ತಮಿಳು ಕಾವ್ಯವನ್ನು ಬಹು

ಗದಲ್ಲಿ ಅನುವಾದಿಸಿದ್ದು. ಭಾಸ್ಕರನು ಇವೆರಡನ್ನು ಓದಿರಬೇಕಲ್ಲದೆ ಹರಿಶ್ಚಂದ್ರನ 'ಜೀವಂಧರ ಚಂಪು' ವಿನಿಂದಲೂ ಉಪಕೃತನಾಗಿರಬೇಕೆಂದು ಅಂತಸ್ಥ ಪ್ರಮಾಣಗಳಿಂದ ತಿಳಿಯುತ್ತದೆ. ಕಾಳಿದಾಸ, ನಾಗಚಂದ್ರ, ರಾಘವಾಂಕರ ಪ್ರಭಾವವೂ ಅವನ ಮೇಲೆ ಆಗಿರಬೇಕು.

ಆದರೆ ಕೆಲ ವಿವರಗಳನ್ನು ಸ್ವಂತ ಪೂರೈಸಿದ್ದಾನೆ. ಮೂಲದಲ್ಲಿಯೂ ಕಾಣದ ಇಲ್ಲವೆ ಕಾಣಲು ಅಶಕ್ಯವಾದ ಒಂದು ಮಹತ್ವದ ವ್ಯತ್ಯಾಸವೆಂದರೆ ಜಿನಸ್ತುತಿಯ ಪದ್ಯಗಳು ಬಂದು ಉಪನಿಷತ್ತಿಗೂ ಭಕ್ತಿಪಂಥಕ್ಕೂ ಸರಿಹೋಗುವ ವಿಚಾರಗಳನ್ನೂ ವಿಶೇಷಣಗಳನ್ನೂ ಭಾಸ್ಕರನು ಉಪಯೋಗಿಸಿದ್ದಾನೆ. ಜನ ಜೀವನದಲ್ಲಿ ಪ್ರಚಾರವಾಗಿದ್ದ ಜೈನ ಮತದಲ್ಲಿ ಭಕ್ತಿ ಪಂಥಗಳ ವರ್ಚಸ್ಸಿನಿಂದ ಜಿನಭಕ್ತಿ ಹರಿಭಕ್ತಿಯಂತೆಯೇ ಭಾವನಾ ಪ್ರಚುರವಾಗಿರಬೇಕು.

ಇಲ್ಲಿ ಕಥನ ರೀತಿ ಸಾಮಾನ್ಯವಾದರೂ ಭಾಸ್ಕರನ ಕಲ್ಪನಾಶಕ್ತಿ ಮೇಲ್ಮಟ್ಟದ್ದೆಂಬುದನ್ನು ಅರಿಯಬೇಕು. ಇತರರ ಪ್ರಭಾವ ಸಾಕಷ್ಟು ಕಾಣುತ್ತಿದ್ದರೂ ಭಾಸ್ಕರನ 'ಜೀವಂಧರ ಚರಿತೆ' ಕಲ್ಪನೆಯ ಸೌಷ್ಟವದಿಂದಲೂ ಶೈಲಿಯ ಲಾಲಿತ್ಯದಿಂದಲೂ ಸ್ವಾಗತಾರ್ಹವಾಗಿದೆ. ತೆರಕಣಾಂಬಿಬೊಮ್ಮರಸನ 'ಜೀವಂಧರ ಸಾಂಗತ್ಯ'ಕ್ಕೆ ಭಾಸ್ಕರನು ಸ್ಫೂರ್ತಿಯಾಗಿದ್ದಾನೆ.

ಉ) ಕುಮಾರ ವಾಲ್ಮೀಕಿ— ಇವನ ಹೆಸರು ನರಹರಿ. ಇವನ ಊರು ಬಿಜಾಪೂರದ ಬಳಿಯಲ್ಲಿರುವ ತೊರವೆ. ಅಲ್ಲಿಯ 'ನರಸಿಂಹಸ್ವಾಮಿ' ಇವನ ಆರಾಧ್ಯ ದೈವವು. ತೊರವೆಯಲ್ಲಿಯೇ ಇನ್ನೂ ಇವನ ವಂಶಜರಿರುವರು. ಗದುಗಿನ ಭಾರತ ಬರೆದ ನಾರಾಣಪ್ಪನಾದುದು ಕವಿ ಕುಮಾರವ್ಯಾಸ, ತೊರವೆಯ ರಾಮಾಯಣ ಕರ್ತೃವಾದ ನರಹರಿಯಾದುದು ಕುಮಾರ ವಾಲ್ಮೀಕಿ. ಅಂದರೆ ಕುಮಾರವ್ಯಾಸನ ಪ್ರೇರಣೆಯಿಂದಲೇ ಕುಮಾರ ವಾಲ್ಮೀಕಿ ತಲೆದೋರಿದನು.

ನಳಚರಿತ್ರೆ ಬರೆಯುವಲ್ಲಿ ಕುಮಾರವ್ಯಾಸ, ಕುಮಾರ ವಾಲ್ಮೀಕಿಯ ಇಂದ ಪ್ರಭಾವಿತನಾದ ಕನಕದಾಸರು ಇವರನ್ನು ಪರ್ಯಾಯವಾಗಿ ಹೆಸರಿಸಿದ್ದಾರೆ, 'ರಘುವರ ಕಥಾವಿಮಲೋದಧೀಂದು ಮಹಾಮುನಿ ಪ್ರಾಚೇತಸಂ ವಂದೆ ಎಂದು ವಾಲ್ಮೀಕಿಯನ್ನು ವಂದಿಸಿದ್ದಾನೆ. ಅಲ್ಲದೆ

ಸರಸವರ್ಣಕ ಕವಿಗಳೊಳು ಭಾ-| ಸುರ ಕುಮಾರವ್ಯಾಸನೊಬ್ಬನು|
ಪರಿಪೊಡೆ ತಾನೊಬ್ಬ ಮಗರಡಳೆನೆಯ ವರ್ಣಕಗೆ ||
ವರಕುಮಾರ ವ್ಯಾಸನೊಬ್ಬನು | ಯೆರಡನೆಯ ತಾನೊಬ್ಬ ಮಿಕ್ಕಿನ|
ಬರಡು ಕವಿಗಳ ಲೆಕ್ಕಿಸುವನೆ ಕುಮಾರ ವಾಲ್ಮೀಕಿ || . ||

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. 'ಪರರ ಬಗೆ ಪರರುಕ್ತಿ.... ತಿರುಗಿ ನೋಡದ ಬಿರುದು ಬೇರೆ ಕುಮಾರ ವಾಲ್ಮೀಕಿಯ ವಚೋಲಹರಿ' ಎಂಬ ಪದ್ಯ ಕುಮಾರವ್ಯಾಸ ಹಾಗೂ ಕಾಳಿದಾಸನ ಪ್ರಭಾವ. ಕಲ್ಪನೆ ಹಾಗೂ ಶೈಲಿಗಳಲ್ಲಿ ಅಚ್ಚೊತ್ತಿದಂತಿರುವದೇ ಅಸತ್ಯವನ್ನು ಸಾರಿದೆ.

ವಾಲ್ಮೀಕಿ ರಾಮಾಯಣವನ್ನು ಕನ್ನಡಿಸುವಲ್ಲಿ ಕುಮಾರ ವಾಲ್ಮೀಕಿ ಭಕ್ತಿಯನ್ನೂ ನಿಷ್ಠೆಯನ್ನೂ ತೋರಿದಷ್ಟು ಕವಿತಾಶಕ್ತಿಯನ್ನೂ ತೋರಿಲ್ಲ. ಕಥನ ಶೈಲಿಯಲ್ಲಿ ಓಟವಿದೆ, ಮಾಟವಿದೆ. ಆದರೆ ಬರೆವಣಿಗೆ ಉಜ್ವಲವಾಗಿ ಏರೇರುತ್ತ ಹೋಗಿಲ್ಲ. ಒಟ್ಟನಲ್ಲಿ ಕುಮಾರ ವಾಲ್ಮೀಕಿಯ ಯೋಗ್ಯತೆ ಮಧ್ಯಮ ಪ್ರತಿಯದಾದ ಕಾರಣ ಅವನ ಕಥನ ಕಲೆಯಲ್ಲಿ ಮಧ್ಯಮ ಗುಣ ತೋರಿದೆ. ಸಾಧಾರಣ ಪ್ರತಿಭೆಯ ಮೂಲಕ ಕುಮಾರ ವಾಲ್ಮೀಕಿಯು ಮಹಾ ಕೃತಿಯನ್ನು ಕೊಡದಾದನು.

ಊ) ನಿಜಗುಣ ಶಿವಯೋಗಿ— ಇವನ ಕಾಲ ಸುಮಾರು ೧೫೦೦ ನೆಯ ಇಸವಿ. ಷಡಕ್ಷರಿಯು ಇವನ ಉಲ್ಲೇಖ ಮಾಡಿದ್ದಾನೆ. ಪ್ರಾಚೀನ ತಾಳೆವೋಲೆಗಳಲ್ಲಿ ಆವಲಾನಂದನ ಉಲ್ಲೇಖವಿಲ್ಲೆಂದೂ ಆ ಮೇಲೆ ಅದನ್ನು ಸೇರಿಸಿರಬೇಕೆಂದೂ ಸಂಶೋಧನೆಯಿಂದ ತಿಳಿದುಬರುತ್ತದೆ. 'ವಿದ್ಯಾರಣ್ಯರ ಪಂಚದಶಿ ಮತ್ತು ಜೀವನ್ಮುಕ್ತಿ ವಿವೇಕ ಗ್ರಂಥಗಳನ್ನು' ಇವರು ನೋಡಿರಬೇಕು.

ನಿಜಗುಣ ಶಿವಯೋಗಿಯು ಕನ್ನಡ ನಾಡಿನ ಅದ್ಭುತ ವ್ಯಕ್ತಿಗಳಲ್ಲಿ ಒಬ್ಬನು ಅಗಾಧ ವಿದ್ವತ್ತೆಯಿಂದಲೂ ದೀರ್ಘ ತಪಶ್ಚರ್ಯದಿಂದಲೂ ಜ್ಞಾನದ ತುತ್ತತುದಿಯನ್ನೇರಿ ಕೆಳಗಿಳಿದು ಬಂದು ತರತರದ ಗದ್ಯ ಪದ್ಯದಲ್ಲಿ ಕನ್ನಡ ಜನಕ್ಕೆ ತನ್ನರಿವನ್ನು ಹಂಚಿಕೊಟ್ಟವನು.

ಇವನು ಮೊವಲು ಅರಸನ ಗಿದ್ದು ಆ ಮೇಲೆ ವಿರಕ್ತನಾದನೆಂದು ಹೇಳುತ್ತಾರೆ. ಇವನ ಗುರುಗಳು ಚೆನ್ನಸದಾಶಿವಯೋಗಿ ಇರಬೇಕೆಂಬ ತಿಳವಳಿಕೆಯಿದೆ. 'ನಿರಾಭಾರಿದೇಶಿಕೊತ್ತಮು' ಪದ ಪ್ರಯೋಗ್ಯ, ವೀರಶೈವ ಲಕ್ಷಣದಲ್ಲಿ

ೀರಶೈವನ ಸರ್ವೋತ್ತಮತ್ವದ ಪ್ರತಿಪಾದನೆ, ಶಿವಯೋಗ ಪಕ್ಷಪಾತ, ಶಿವಾ ಧಿಕ್ಯದ ವರ್ಣನೆಗಳಿಂದ ಇವನು ವೀರಶೈವನೆಂದು ಸುಸ್ಥಾಪಿತವಾಗುತ್ತದೆ. ಆದರೂ ನಿಜಗುಣರು ಉದಾರರಾದ, ತತ್ವಜ್ಞಾನರಾದ, ವಿವೇಕಿಗಳಾದ ಶೈವ ರೆಂಬುದು ಅವರ ಪ್ರತಿಯೊಂದು ಗ್ರಂಥದಲ್ಲಿ ಕಂಡುಬರುವದು. ಒಟ್ಟಿನಲ್ಲಿ ಇವನು ವೀರಶೈವನೇನೋ ನಿಜ ಆದರೆ ವೇದೋಪನಿಷತ್ತುಗಳಿಗೆ ಸಮ್ಮತವೆಂದು ಅವನಿಗೆ ತೋರಿದ ಅದ್ವೈತವನ್ನೂ ಆಗಮ ಸಮ್ಮತವಾದ ಷಟ್‍ಸ್ಥಲ ಸಿದ್ಧಾಂತ ವನ್ನೂ ಸಮನ್ವಯಗೊಳಿಸಿದ ವೀರಶೈವಯತಿ ಮತ್ತು ಜ್ಞಾನಿಯಾಗಿದ್ದಾನೆ.

ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ, ಪರಮಾರ್ಥ ಗೀತೆ, ಅನು ಭವ ಸಾರ, ಅರುವತ್ತು ಮೂವರ ತ್ರಿಪದಿ, ಪರಮಾರ್ಥ ಪ್ರಕಾಶಿಕೆ ಹಾಗೂ ವಿವೇಕ ಚಿಂತಾಮಣಿ ಇವು ಏಳು ಗ್ರಂಥಗಳು. ಅವರವು ಮೊದಲಿನ ಐದು ಅನುಕ್ರಮವಾಗಿ ಹಾಡು, ಸಾಂಗತ್ಯ, ರಗಳೆ, ತ್ರಿಪದಿಯಲ್ಲಿ ಎರಡು ಇವು ಗಳಲ್ಲಿದ್ದು, ಕೊನೆಯವೆರಡು ಶಾಸ್ತ್ರ ಗದ್ಯದಲ್ಲಿವೆ. ಇವನು ತನ್ನ ಅನೇಕ ಗ್ರಂಥ ಗಳಲ್ಲಿ ಷಟ್‍ಸ್ಥಲ ಸಿದ್ಧಾಂತದ ಸಾಂಪ್ರದಾಯಕ ನಿರೂಪಣೆಗಿಂತ ಅದ್ವೈತ ಸಿದ್ಧಾಂತದ ವಿಶಾಲ ಭೂಮಿಯನ್ನು ವಿವರಿಸಿದ್ದಾನೆ.

'ಕೈವಲ್ಯ ಪದ್ಧತಿ'ಯನ್ನು ಸಕಲ ವೇದವೇದಾಂತಾಗಮಸ್ಮೃತಿ ಪುರಾ ಣೇತಿಹಾಸ ಸೂತ್ರದಿ ಶಾಸ್ತ್ರ ಸಮ್ಮತದಿಂ ಪುರಾತನ ಗೀತಾನುಗುಣ್ಯವೆನಿಸಿ ಬರೆದುದಾಗಿ ಅವನೇ ಹೇಳಿದ್ದಾನೆ. ಇಲ್ಲಿ ತತ್ವೋಪದೇಶಪರವಾದ ಮತ್ತು ಶಿವಸ್ತುತಿಯುಳ್ಳ ಹಾಡುಗಳಿವೆ. ಅವುಗಳಲ್ಲಿ ಕಲ್ಪನಾ ವಿಲಾಸವಿಲ್ಲ. ಗುರು ಭಕ್ತಿ ತುಂಬಿ ತುಳುಕುತ್ತಿದೆ ಮೊದಲಿನಿಂದ ಕೊನೆಯವರೆಗೆ.

'ಪರಮಾನುಭವ ಬೋಧೆ ಇದು. 'ಅದ್ವೈತ ತತ್ವವನಿಲ್ಲಿ ಪ್ರಕಟಿಸುವೆನು ಬೋಧಗತಿಯಿಂದ' ಎಂದು ಯಾಜ್ಞವಲ್ಕ್ಯ-ಮೈತ್ರೇಯಿಯರ ಸಂವಾದ ರೂಪ ವಾಗಿದೆ. 'ಇದು ವೇದವೇದಾಂತದೊಳು ಗೋಪ್ಯವಾದರ್ಥ' ಎಂದು ಮುಂತಾಗಿ ಸಮನ್ವಯವು ಸಾಧಿಸಲಾಗಿದೆ. ಇದು ವಿಶಿಷ್ಟವಾದ ಹಾಡಿನ ರೂಪದಲ್ಲಿದೆ. ಛಂದಸ್ಸು ಮಾತ್ರಾಬದ್ಧವಾಗಿರದೇ ಲಯಬದ್ಧವಾಗಿದೆ.

'ಅನುಭವ ಸಾರ'ವು ತ್ರಿಪದಿಯಲ್ಲಿ 'ಸಕಲ ವೇದಾಂತ ಸಾರವನ್ನು ತಿಳಿ ಯುವಂತೆ' ಸಾಧಕರಿಗಾಗಿ ಬರೆದ ಗ್ರಂಥ. ಇದು ಗುರು ಶಿಷ್ಯರ ಸಂವಾದ ರೂಪ

ದಲ್ಲಿ ಇದೆ. ಇಲ್ಲಿ ಉಚಿತ ದೃಷ್ಟಾಂತಗಳಿಂದ ಆತ್ಮ ಸ್ವರೂಪವನ್ನು ಅದ್ವೈತ ಸಿದ್ಧಿಯನ್ನೂ ವಿವರಿಸಲಾಗಿದೆ.

'ಪರಮಾರ್ಥ ಗೀತೆ'ಯು ಅನುಭವ ಸಾರದಂತೆ ಗುರು ಶಿಷ್ಯ ಸಂವಾದ ರೂಪದಲ್ಲಿದೆ. ಲಲಿತ ರಗಳೆ ಮತ್ತು ಕಂದ ಪದ್ಯಗಳಲ್ಲಿ ಮೋಕ್ಷ ಶಾಸ್ತ್ರವನ್ನು ತಿಳಿಸುತ್ತದೆ. ಇದರಲ್ಲಿ ಯೋಗ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳೂ ಬಂದಿವೆ.

'ಅರವತ್ತು ಮೂವರ ತ್ರಿವಿಧಿ'ಯು ತ್ರಿಪದಿಯಲ್ಲಿ ೬೩ ಪುರಾತನರ ಸ್ತುತಿರೂಪವಾಗಿದೆ.

'ಪರಮಾರ್ಥ ಪ್ರಕಾಶಿಕೆಯು' ಚೆನ್ನಸದಾಶಿವಯೋಗಿಯು 'ಶಿವಯೋಗ ಪ್ರದೀಪಿಕೆಯ ಕನ್ನಡ ವ್ಯಾಖ್ಯಾನವಾಗಿದೆ. 'ಸಮ್ಯಗ್ ಜ್ಞಾನ ಸಂಪನ್ನ ನಿಜ ಗುಣ ಶಿವಯೋಗಿಯು.... ಮೋಕ್ಷಮಾತ್ರಾಪೇಕ್ಷಿತರಾದ ಸಾಧು ಜನಂಗಳಾ ಯಾಸವಿನಿತಿಲ್ಲದೋದಿ ಕೇಳಿ ತಿಳಿದು ಕೃತಾರ್ಥರಾಗಲೆಂದು' ಇದರಲ್ಲಿ ಶಿವ ಯೋಗ ಶಾಸ್ತ್ರ ಗ್ರಂಥಕ್ಕೆ ಗದ್ಯದಲ್ಲಿ ವ್ಯಾಖ್ಯಾನ ಬರೆದಿದ್ದಾನೆ. ಯೋಗಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಇಲ್ಲಿ ನಿರೂಪಿತವಾಗಿವೆ,

'ವಿವೇಕ ಚಿಂತಾಮಣಿ'ಯು ಹತ್ತು ಪ್ರಕರಣಗಳು ಹಾಗೂ ೭೬೫ ವಿಷಯಗಳಿಂದ ಕೂಡಿದ ಹೆಬ್ಬೊತ್ತಿಗೆ, ಕನ್ನಡ ಕುಲಕ್ಕೆ ನಿಜಗುಣರು ನೀಡಿದ ಜ್ಞಾನ ಭಾಂಡಾರ. ಇಲ್ಲಿ ಆ ಕಾಲದ ತಾತ್ವಿಕ, ಭೌಗೋಲಿಕ, ಸಾಹಿತ್ಯಕ ವಿಷಯಗಳ ಜ್ಞಾನವು ಸಂಗ್ರಹವಾಗಿ ಕೆನೆಗಟ್ಟಿ ನಿಂತಿವೆ. 'ವೇದ ಪುರಾಣ ಶಾಸ್ತ್ರದೋಳ್ ನೇಮಿಸಿತೋರ್ಪ ವಿಶ್ವ ವಿಷಯಂಗಳ ಸಂಸ್ಕೃತಿಯಂ ವಿವೇಕ ಚಿಂತಾಮಣಿಯೆಂದು ಸಲ್ವ ಹೆಸರಿಟ್ಟು ಮಹಾಕವಿತಾಪ್ರಬಂಧಮಂ ಪ್ರಮುದಿ ಪೇಳ್ವೆ, ಎಂಬುದರಿಂದ ಇದು ಮಹಾಜ್ಞಾನನಿಧಿ ಎಂಬುದು ಖಂಡಿತವಾಗಿದೆ. ಮತಾತೀತವಾದ ಸಕಲ ಜ್ಞಾನಕೋಶವೆಂಬ ಸ್ವರೂಪದಲ್ಲಿ ಇದು ಕನ್ನಡ ವಾಙ್ಮಯದಲ್ಲಿ ಅದ್ವಿತೀಯವಾದ ಜ್ಞಾನಗ್ರಂಥವಾಗಿದೆ.

ನಿಜಗುಣ ಶಿವಯೋಗಿಯ ಅಭ್ಯಾಸ, ಅವಲೋಕನ, ಸಂಗ್ರಹಚಾತುರ್ಯ ಮೊದಲಾದವುಗಳ ಅನುಭವವೂ.... ತತ್ವಜ್ಞಾನಿಯ ನಿಃ ಪಕ್ಷಪಾತವೃತ್ತಿಯೂ ಮತಮಾರ್ಗದೊಡನೆ ಹೊಂದಿಸಿಕೊಂಡು ಹೋಗುವ ಜಾಣ್ಮೆಯೂ ಕಂಡು ಬರುವವು ತತ್ವಪ್ರತಿಪಾದಕರಲ್ಲಿ ನಿಜಗುಣಿಗಳ ಸ್ಥಾನವು ಮಹತ್ವದ್ದಾಗಿದೆ.

ಋ) ತೋಂಟದ ಸಿದ್ಧೇಶ್ವರ — ಇವನ ಕಾಲ ಸುಮಾರು ೧೪೭೦. ಕ್ಷ ಶತಮಾನದ ವಚನಕಾರರಲ್ಲಿ ಅನುಭಾವಿಕ ಸಿದ್ಧಿ ಉನ್ನತವಿರುವದಾದರೂ ಇದನ್ನು ಸಾಹಿತ್ಯದಲ್ಲಿ ಇಳಿಸಿ ಹೇಳಬಲ್ಲ ಅಸಾಧಾರಣವಲ್ಲವಾದರೂ ಸ್ವತಂತ್ರ ವೆನ್ನಬಹುದಾದ ಉನ್ನತ ತೇಜಸ್ಸು ಕಡಿಮೆ ತನ್ನ ಕಾಲದ ವಚನಕಾರರಿಗೆಲ್ಲ ಹಿರಿಯನೂ ಗುರುಸ್ವರೂಪನೂ ಆದವನೆಂದರೆ ತೋಂಟದ ಸಿದ್ಧೇಶ್ವರನು, ತೋಂಟದ ಸಿದ್ಧಲಿಂಗಯತಿ ಎಂದು ಅವನಿಗೆ ಹೆಸರಿತ್ತು. ನಾಗಣೀ ನದಿಯ ತೀರದ ತೋಟದಲ್ಲಿ ಶಿವಯೋಗದಲ್ಲಿದ್ದುದರಿಂದ ಅವನಿಗೆ ಹಾಗೆ ಹೆಸರಾಯಿತು. ಇವನು ಎಡೆಯೂರಲ್ಲಿ ಸಮಾಧಿ ಹೊಂದಿದನು.

ಅಂದಿನ ವೀರಶೈವ ಕೇಂದ್ರಗಳಲ್ಲಿ ಹಂಪೆಯೊಂದು. ಎಡೆಯೂರು ಇನ್ನೊಂದು ಎನ್ನುವಷ್ಟು ಅವನ ಸುತ್ತು ಶಿಷ್ಯ ಪರಿವಾರವು ನೆರೆಯಿತು. ವೀರ ಶೈವ ಸಿದ್ಧಾಂತವನು ಜೀವನದಲ್ಲಿ ಇಳಿಸಿ, ವಚನ ರೂಪದಲ್ಲಿ ಅವನ್ನು ಹೊರ ಹೊಮ್ಮಿಸುವ ಹೊಸ ಅನುಭವ ಮಂಟಪವೊಂದು ಉದಯವಾಯಿತು. ಇವನನ್ನು ಕುರಿತು ಅನೇಕ ಚರಿತ್ರ ಗ್ರಂಥಗಳು ಹುಟ್ಟಿವೆ. ದಿವ್ಯ ಶಿವಯೋಗಿ, ಅಗಣಿತ ಮಹಾಪುರುಷ ಎಂದು ಇವನನ್ನು ಹೊಗಳಲಾಗಿದೆ.

'ಷಟ್ಸ್ಥಲಜ್ಞಾನ ಸಾರಾಮೃತ' ಎಂಬುದು ವಚನ ರೂಪವಾದ ಇವನ ಗ್ರಂಥ. ಇದರಲ್ಲಿ ೭೦೧ ವಚನಗಳೂ ೭ ವೃತ್ತಗಳೂ ಇವೆ. 'ಮಹಾಲಿಂಗ ಗುರುಸಿದ್ಧೇಶ್ವರ ಪ್ರಭು' ಇದು ಇವನ ಅಂಕಿತ. ವಚನಕಾರರ ಪರಂಪರೆಗನು ಸರಿಸಿ ಷಟ್ಸ್ಥಲ ನಿರೂಪಣೆ ಸ್ವಾನುಭಾವದಿಂದ ಪ್ರತೀತವಾಗಿ ಇಲ್ಲಿ ಅಭಿವ್ಯಕ್ತ ವಾಗಿದೆ. ಇವನ ವಚನಗಳು ನೀರಸವಾಗಿಲ್ಲವಾದರೂ ಕಲ್ಪನಾ ಸಂಪತ್ತಿ ಹಾಗೂ ಭಾವನಾ ಸಂಪತ್ತಿ ಇವಕ್ಕೆ ಸಾಕಷ್ಟಿಲ್ಲ ಎನ್ನಬಹುದು.

ಪ್ರಶ್ನೆ ೨೦ ಟಿಪ್ಪಣಿ ಬರೆಯಿರಿ—(ಅ) ಕನ್ನಡ ಭಾರತ (ಆ) ಪ್ರಭು ಲಿಂಗಲೀಲೆ (ಇ) ಶತಕತ್ರಯ (ಈ) ಕೈವಲ್ಯ ಪದ್ಧತಿ (ಉ) ವಿವೇಕ ಚಿಂತಾ ಮಣಿ (ಊ) ತೊರವೆ ರಾಮಾಯಣ (ಋ) ಘನಲಿಂಗನ ವಚನಗಳು.

ಉತ್ತರ (ಅ) ಕನ್ನಡ ಭಾರತ— ಕಥಾನಕ ದೃಷ್ಟಿಯಿಂದ ಆದಿ ಪಂಪನ ತರುವಾಯ ಸಮಗ್ರ ಭಾರತವನ್ನು ನಿರೂಪಿಸಿದವನೆಂದರೆ ಕುಮಾರ ವ್ಯಾಸನೇ. ಷಟ್ಪದಿಯ ಪದ್ಯದಲ್ಲಿ 'ಕೃತಿಯು ಸತ್ಕರ್ಣಾಟಕದ ಭಾರತಕ್ಕೆ

ಮಂಜುಳ ಮಂಜರಿಯು, ಮಹಾಕೃತಿಗೆ ನಾಯಕನಾದ ಗದುಗಿನ ವೀರ ನಾರಾಯಣ', 'ತಿಳಿಯ ಹೇಳುವೆ. ಕೃಷ್ಣ ಕಥೆಯನು....ಕೃಷ್ಣ ಮೆಚ್ಚಲಿಕೆ' ಎಂಬಲ್ಲಿ ಕವಿಯ ಮನೋಧರ್ಮ ಹಾಗೂ ಗುರಿ ತಿಳಿಯಬಹುದಾಗಿದೆ. ವಿಶಾಲವಾದ ಭಾಗವತ ದೃಷ್ಟಿಯಿಲ್ಲಿದೆ. ಈ ಭಾರತ ನಾಟಕಕ್ಕೆ ಕೃಷ್ಣನೇ ಸೂತ್ರಧಾರ, ಅವನೇ ನಾಯಕ ಕೃಷ್ಣನೇ ಇಲ್ಲಿ ಪ್ರೇರಕ ಶಕ್ತಿ ಹಾಗೂ ಚಾಲಕಶಕ್ತಿ.

ವ್ಯಾಸ ಭಾರತ, ಪಂಪ ಭಾರತ, ಭಾಸನ ದ್ಯೂತವಾಕ್ಯ, ಭಗವದ್ಭಕ್ತರ ಕಥನ ಪರಂಪರೆಗಳಿಂದ ಕುಮಾರವ್ಯಾಸನು ವಿಷಯವನ್ನು ಆಯ್ದುಕೊಂಡಿದ್ದಾನೆ. ತನ್ನ ದೃಷ್ಟಿಯಲ್ಲಿ ಅವನ್ನು ಅಳವಡಿಸಿಕೊಂಡಿದ್ದಾನೆ. ತನ್ನ ಪ್ರತಿಭೆಯ ಕುಂಚದಿಂದ ಸ್ವತಂತ್ರ ಕೃತಿಯನ್ನು ನಿರ್ಮಿಸಿದ್ದಾನೆ.

ಪಾಂಡುರಾಜನ ಮರಣ ಪ್ರಸಂಗದಲ್ಲಿ 'ಪ್ರಜ್ಞಾಸಾರಂಗಳು ಮಧ್ಯಕಟಜಾನ್ವಂಘ್ರಿ ಮಿತವಾಯ್ತು' ಎಂದು ಅವನ ಕಾಮಬಾಧೆಯ ಕಾಲಕ್ಕೆ ವಿವೇಕ ತಪ್ಪಿದ್ದನ್ನೂ 'ಭಾಸುರವ ಸಂತನ್ಯವಾಲ ನಡೆದನು ಪಾಂಡುವಿನ ಮೇಲೆ' ಎಂಬುದನ್ನು ಕವನ ಕಾಮಬಾಧೆಯ ತೀವ್ರತೆಯನ್ನು ವ್ಯಕ್ತಪಡಿಸಲಿಕ್ಕೂ ಕೊನೆಗೆ ಮಾದ್ರಿಯು 'ವಿಷಕನ್ನಿಕೆಯನೆನ್ನನು ಮುಟ್ಟಿದೈ' ಎಂದು ಹೇಳಿದುದೂ ಔಚಿತ್ಯ ಪೂರ್ಣವಾಗಿದೆ. ತನ್ನನ್ನು ಎಳೆತರಲು ಬಂದ ದುಶ್ಶಾಸನಿಗೆ ದ್ರೌಪದಿಯು ತಾನು ಪುಷ್ಪವತಿಯೆಂದು ಹೇಳಿದ್ದಕ್ಕೆ 'ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರುರಾಜ ಭವನದಲಿ' ಎಂಬ ಮಾತು ಅಸಭ್ಯವಾದರೂ ಕಾಲೋಚಿತವಾಗಿದೆ. ದ್ರೌಪದಿಯ ಮಾನಭಂಗದ ಪ್ರಸಂಗದಲ್ಲಿ ಭೀಮನು 'ಮನದೊಳಗೆ ಕೌರವನ ಕರುಳನು ತನಿರಕುದಲಿ ಕು ದಿ ಸಿ ದ ನು' ಎಂಬುದು ಮೂಲಕ್ಕಿಂತಲೂ ಉತ್ಕಟವಾಗಿ ಬಂದಿದೆ. (ಕೀಚಕ ಪ್ರಸಂಗ, ಕೃಷ್ಣ ಸಂಧಾನ, ಕರ್ಣ ಬುದ್ಧಿಭೇದ ಇವು ಇನ್ನುಳಿದ ಸುಂದರವಾದ ವ್ಯತ್ಯಾಸಗಳು) ಹೀಗೆ ಅಸತ್ಯ ಅನ್ಯಾಯಗಳನ್ನು ಕಂಡು ಕೆರಳಿ ಸಿಡಿದೇಳುವ ವೀರವ್ಯಕ್ತಿತ್ವ. ಅದ್ಭುತವಾದ ಶಕ್ತಿಯುಕ್ತವಾದ ಕವಿತ್ವ ಕುಮಾರವ್ಯಾಸನ ಮೇಲ್ಮೆಗೆ ಕಾರಣವಾಗಿದೆ.

ಪಾತ್ರನಿರೂಪಣೆಯಲ್ಲಿ ಕುಮಾರವ್ಯಾಸನು ಘನತೆಯನ್ನು ಮೆರೆದಿದ್ದಾನೆ. ಕೃಷ್ಣನಿಗೆ ಇಲ್ಲಿ ಅಪೂರ್ವ ಸ್ಥಾನ ದೊರೆತಿದೆ ಎಲ್ಲ ಚೈತನ್ಯಕ್ಕೂ ಅವನೇ ಮೂಲ. ಎಲ್ಲರ ಪ್ರವೃತ್ತಿಗಳಿಗೂ ಕಾರಣ ಭೀಮ, ದ್ರೌಪದಿ ಉತ್ತರಕುಮಾರ

ವರು ಕುಮಾರ ವ್ಯಾಸನ ವೀರ ಪ್ರತಿಭೆಯ ಗಂಭೀರ ಮತ್ತು ಹಾಸ್ಯಪರ ಅಂಗದ ಶ್ರೇಷ್ಠ ನಿರ್ಮಿತಿಗಳಾಗಿದ್ದಾರೆ. ಭೀಮ ಪಾತ್ರ ನಿರೂಪಣೆ ಅಪೂರ್ವ ವಾಗಿದೆ. ದ್ರೌಪದಿಯು ಸದ್ಗುಣ ಭರಿತಳಾಗಿ ಸರ್ವಾದರಣೀಯಳು ಉತ್ತರ ಕುಮಾರನಂತೂ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವ ಇನ್ನು ಖಲಚತುಷ್ಟಯ ವಾಗಿ ದುರ್ಯೋಧನ ದುಶ್ಶಾಸನ, ಶಕುನಿ ಹಾಗೂ ಕರ್ಣರಿದ್ದಾರೆ. ಕವಿಯು ಈ ಪಾತ್ರಗಳ ನಿರ್ಮಾಣದಲ್ಲಿ ತನ್ನ ಪ್ರತಿಭೆಯ ಸಾರವನ್ನು ಎರಕ ಹೊಯ್ದಿದ್ದಾನೆ. ಧೃತರಾಷ್ಟ್ರ ಗಾಂಧಾರಿಯರು ದುರ್ಬಲ ತಂದೆ ತಾಯಿಗಳಿಗೆ ಮಾದರಿಯಾಗಿದ್ದಾರೆ. ಯುಧಿಷ್ಠಿರನ ಸತ್ವಗುಣ ಹಲವು ಸಲ ದೌರ್ಬಲ್ಯ ವಾಗಿಯೂ ನಿಷ್ಕ್ರಿಯೆಯಾಗಿಯೂ ಪರಿಣಮಿಸುತ್ತದೆ.

ಇಲ್ಲಿಯ ವರ್ಣನೆಗಳಲ್ಲಿ ಒಂದು ಅಪೂರ್ವತೆಯಿದೆ. ಕವಿ ಸಮಯದ ಕೃತಕ ಬಂಧನವಿಲ್ಲಿಲ್ಲ. ಅಷ್ಟಾದಶ ವರ್ಣನೆಗಳ ಕಟ್ಟಿನಲ್ಲಿ ಕಾವ್ಯ ಸಿಕ್ಕಿಲ್ಲ. ಮನೋಲೋಕದ ವರ್ಣನೆಗಳಲ್ಲಿ ಕುಮಾರವ್ಯಾಸನ ಪ್ರತಿಭೆ ಕಾವುಗೊಳ್ಳುತ್ತದೆ. 'ನಾರಣಪ್ಪನು ರೂಪಕ ಸಾಮ್ರಾಜ್ಯ ಚಕ್ರವರ್ತಿ.' ನಾಟ್ಯಮಯವಾದ ಸನ್ನಿವೇಶಗಳನ್ನು ನಿರ್ಮಾಣ ಮಾಡಿಕೊಂಡು ತನಗೆ ಪ್ರಿಯವಾದ ವೀರ, ರೌದ್ರ, ಭಕ್ತಿ, ಅದ್ಭುತ ರಸಗಳನ್ನು ನಿರೂಪಿಸುವಾಗ, ಸ್ಥಾಯಿ ಸಂಚಾರಿಗಳನ್ನು ತೆರೆದು ತೋರಿಸುವಾಗ, ಅವನ ರೂಪಕ ಶಕ್ತಿ ಅದೆಷ್ಟು ಸೂಕ್ಷ್ಮ, ಸಹಜ, ಉಚಿತವಾಗಿ ಬಾಣದ ಮೇಲೆ ಬಾಣ ಬಿಟ್ಟ ಹಾಗೆ ಹೊಮ್ಮುತ್ತದೆ! ಇಲ್ಲಿ ಅವನ ಮಾಗಿದ ಪ್ರಜ್ಞೆಯಿದೆ. ಋಷಿತುಲ್ಯವಾದ ಜೀವನ ಸಿದ್ಧಿಯಿಂದ ಸಂತುಷ್ಟಳಾದ ಸರಸ್ವತಿ ಅವನಿಗೆ ಒಲಿದಿದ್ದಾಳೆಂಬುದು ಇಲ್ಲಿ ಕಾಣಬಹುದು.

ನೆನೆದ ಮಂತ್ರವ ತನ್ನ ತಂದೆಯ|ಮದದ ಮುಚ್ಚದೊಳೊರೆದು ಕರ್ಣನ|
ನೆನಹಿದೊಳು ಪುಟವಿಟ್ಟು, ಶಕುನಿಯ ನೀತಿಯೊಳು ನಿಗುಚಿತಿ ||
ಅನುಜಮತದೊಳು ವಿಸ್ತರಿಸಿ. ವೈ | ದುನನ ಮತದೊಳು ಬಣ್ಣವಿಟ್ಟನು|
ಜನಪನಪಕೀರ್ತ್ಯಂಗನೆಗೆ ತುಡಿಸಿದನು ಭೂಷಣವ || . ||

ಕುಮಾರವ್ಯಾಸನ ಶೈಲಿಯಲ್ಲಿ ಘನತೆಯಿದೆ, ವೈಶಿಷ್ಟ್ಯವಿದೆ. ಕನ್ನಡ ದೇಸಿಯ ಅಕ್ಷಯ ಸಂಪತ್ತು ಅವನಿಗೆ ದೊರೆತಿದೆ ವೀರ ನಾರಾಯಣನ ವರ ಪ್ರಸಾದದಿಂದ. ಅದರ ಸಹಜ ಸಾಮರ್ಥ್ಯ, ಘನತೆಗಳು ಅಚ್ಚರಿಯಾಗುವಂತೆ ಮೆರೆದಿವೆ. ಉದಾಹರಣೆಗಾಗಿ,

ಗಂಡರೈವರು ಮೂರು ಲೋಕದ । ಗಂಡರೊಬ್ಬಳಲಾರಿರಿ ।
ಗಂಡರೋ ನೀವ್ ಷಂಡರೋ ಪೇಳೆಂದಳಿಂದುಮುಖಿ ॥

'ರೋಷದ ಘನತೆ ಹೆಚ್ಚಿತು ಹಿಂಡಿದನು ಹಗೆಗಳನು ಮನದೊಳಗೆ', 'ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ' ಕೃತಘ್ನರಿಗಿಲ್ಲ'ಗತಿ ಈ ಮೊದಲಾದ ಮಾತುಗಳಲ್ಲಿ ಕಾವ್ಯವು ಕಣ್ದೆರೆದು ನಿಲ್ಲುತ್ತದೆ. ಇಂಥಲ್ಲಿ ಜಾನಪದ ಸಿದ್ಧಿಯೂ ಇದೆ. ಕನ್ನಡ ದೇಸಿಯೊಡನೆ ಕನ್ನಡದಲ್ಲಿ ಬೆರೆತು ಬಂದ ಅನ್ಯದೇಸಿಯನ್ನೂ ಬಳಸುವದರ ಕಡೆಗೆ ಕುಮಾರ ವ್ಯಾಸನ ಒಲವಿದೆ. ಕೆಲವೆಡೆಗಳಲ್ಲಿ ದೇಸಿಯನ್ನೂ ಉಚಿತಮಾರದಿಂದ ಸಂಸ್ಕಾರವನ್ನು ಗೊಳಿಸಲಾಗಿದೆ.

ಪಾರಸಿ, ಅರಬಿ ಮತ್ತು ಮರಾಠಿಗಳಿಂದ ಅನ್ಯಭಾಷೆಯ ಶಬ್ದಗಳನ್ನೂ ಎತ್ತಿಕೊಳ್ಳಲಾಗಿದೆ. ಬಹುಶಃ ಇವೆಲ್ಲ ಆಕಾಲದ ಜನರಾಡುವ ಭಾಷೆಯಲ್ಲಿ ಪ್ರಚಲಿತವಾಗಿರಬೇಕು. ಮರಾಠಿ ಗ್ರಂಥಗಳನ್ನು ಅವನು ಓದಿ ಕೇಳಿರಬೇಕು ಇಲ್ಲವೆ ಆಯಾ ಭಾಷೆಯನ್ನಾಡುವ ಜನರೊಂದಿಗೆ ಗಾಢವಾದ ಸಂಪರ್ಕ ಬೆಳೆದಿರಬೇಕು.

ಇಲ್ಲಿ ಭಗವದ್ಗೀತೆಯ ಅದ್ವೈತಪರ ನಿರೂಪಣೆಯಿಂದ ಕುಮಾರ ವ್ಯಾಸನು ಹರಿಹರರಲ್ಲಿ ಭೇದವನ್ನೆಣಿಸಿದ ಭಾಗವತ ಸಾಂಪ್ರದಾಯಿಯೆಂದು ತೋರಿಸುವದು. ಆದರೂ ಅವನು ಒಬ್ಬ 'ಯೋಗೀಂದ್ರ'ನಾಗಿದ್ದಾನೆ. ಗದುಗಿನ ಭಾರತದ ಉನ್ನತಿಕೆಯಿಂದಲೂ ಅವನು ಆರ್ಷದೃಷ್ಟಿಯನ್ನು ಪಡೆದ ಯೋಗಿ, ವೀರನಾರಾಯಣನ ವೀರಭಕ್ತನಾದ ಕವಿ.

'ಗದುಗಿನ ಭಾರತವು' ಮಹಾಕವಿಯ ಮಹಾಕೃತಿ. ಇದನ್ನು ಕಂಡುಕೊಳ್ಳಬೇಕಾದರೆ ಈ ಕೃತಿ ಕೊಡುವ ಶ್ರೇಷ್ಠ ರಸಾನುಭವವನ್ನು ಪಡೆಯಬೇಕು. ಮೂಲಗಳನ್ನು ಗತಕಾಲದ ಗವಿಯಿಂದೆತ್ತಿ ತನ್ನ ಪ್ರಾತಿಭ ಚಕ್ಷುವಿನ ಮುಂದೆ ತಂದುಕೊಂಡು ಕವಿಶಕ್ತಿಯ ಶ್ರೇಷ್ಠ ಸಾಧನಗಳಿಂದ ಸಚೇತನಗೊಳಿಸಿದ್ದರಲ್ಲಿಯೇ ಈ ಕೃತಿಯ ಹೆಚ್ಚಳವಿದೆ. ಕುಮಾರವ್ಯಾಸ ಭಾರತವು ತನ್ನ ವಿಶಿಷ್ಟ ರೀತಿಯಲ್ಲಿ ಏಕಮೇವಾದ್ವಿತೀಯವಾದ ಮಹಾಕೃತಿಯಾಗಿದೆ, ಕೊನೆಯದಾಗಿ ಕಾವ್ಯಕ್ಕೆ ಗುರುವಾಗಿದೆ.

ಅ) ಪ್ರಭುಲಿಂಗಲೀಲೆ— ಇದು ಕವಿ ಚಾಮರಸನ ಅಮರಕೃತಿ. ಪ್ರಭುಲಿಂಗ ಲೀಲೆಯು ಪ್ರಭುವಿನ ರೂಪದಲ್ಲಿ ಲಿಂಗಲೀಲೆಯೇ ಆಗಿದೆ. ಬಸವಾದಿ ಪ್ರಮಥರಿಗೆ ಜ್ಞಾನೋಪದೇಶಕನಾದ, ಶೂನ್ಯ ಸಿಂಹಾಸನದ ಪ್ರಥಮಾಧಿಕಾರಿಯಾದ ಶ್ರೀ ಮದಲ್ಲಮನ ಚರಿತ್ರೆಯಾಗಿ. ಈ ಮೊದಲು ಅಲ್ಲಮನ ಚರಿತ್ರೆಯನ್ನು ನಿರೂಪಿಸಿದವರಲ್ಲಿ ಹರಿಹರನು, 'ಪ್ರಭುದೇವರ ರಗಳೆ'ಯಲ್ಲಿ ಮೊದಲಿಗನು. ನಂತರ ಲಕ್ಕಣ್ಣ ದಂಡೇಶ, ಚಾಮರಸ, ಅದೃಶ್ಯಕವಿ ಮೊದಲಾದವರು ಇದನ್ನು ಸಂಸ್ಕಾರಗೊಳಿಸುತ್ತ ನಡೆದರು.

ಕವಿಯು ಬೆಳೆದ ಮತ್ತು ಸಿದ್ಧನಾದ ಮಹಾವ್ಯಕ್ತಿಯನ್ನು ಚಿತ್ರಿಸಿದ್ದಾನೆ. ಭಕ್ತ ಜನ ಹಿತಾರ್ಥಕ್ಕಾಗಿ ಶಿವನ ನಿಜಸ್ವರೂಪನಾನ ಅಲ್ಲಮನು ಪ್ರಭುಲಿಂಗ ಲೀಲೆಯನ್ನು ನಟಿಸಿದ್ದಾನೆಂಬುದೇ ಚಾಮರಸನ ನಂಬುಗೆ. ಆದ್ದರಿಂದ ಅವನನ್ನು ನಿರ್ದೇಹಿ ಎಂದೂ ತನ್ನ 'ಕಟಾಕ್ಷ ಕಾಂತಿಯಲಿ ಹಿಂಗಿಸುವನೆಲ್ಲರ ಮನೋಮಯ ರಂಗದೊಳ ಹೊರಗಿಡದ ತಮದ ತರಂಗಗಳೆಂದೆನುತ' ಕಾರಣ ಶರೀರವನ್ನು ಮಾತ್ರ ಧರಿಸಿದನೆಂದೂ ಬಣ್ಣಿಸಲಾಗಿದೆ.

ಅಲ್ಲಮ ಪ್ರಭುವಿನ ವ್ಯಕ್ತಿ ಚಿತ್ರಣದಲ್ಲಿಯೇ ತನ್ನೆಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ಎಲ್ಲ ಸನ್ನಿವೇಶಗಳನ್ನೂ ಮೂಲ ಉದ್ದೇಶ ಸಿದ್ಧಿಗೆ ಅನುಗೊಳಿಸಿ ವ್ಯಕ್ತಿಕೇಂದ್ರಿತ ಚರಿತ್ರೆಯನ್ನು ಸಮರ್ಪಕವಾಗಿ ಸಹಜವಾಗಿ ಬರೆದಿರುವದರಲ್ಲಿ ಚಾಮರಸನ ಹಿರಿಮೆಯಿದೆ. ಉಜ್ವಲ ವ್ಯಕ್ತಿಗಳ ಚರಿತ್ರೆಯನ್ನು ಅವರ ವ್ಯಕ್ತಿತ್ವಕ್ಕೆ ಕುಂದುಬಾರದ ರೀತಿಯಲ್ಲಿ ಬರೆಯಬೇಕೆನ್ನುವವರಿಗೆ ಚಾಮರಸನ ಮಾರ್ಗವು ಆದರ್ಶವಾಗಿದೆ.

'ಸೊಲ್ಲಿನೊಳಗಣ ಸೊಂಪನಿಂಪನು ಬಲ್ಲವರು ಭಾವುಕರು ಭಕ್ತಿಯ ಬಲ್ಲಿದರು ಲಾಲಿಸುವದು' ಎಂಬಲ್ಲಿ ಕವಿಯ ಉದ್ದೇಶ ಸ್ಪಷ್ಟಪಡಿಸಲಾಗಿದೆ 'ಗುರುಗುಹೇಶ್ವರನಾಗಳೆನ್ನನು ನುಡಿಸಿದದೆ ನುಡಿದಾಗು ಮಾಡಿಯೆ ಪೇಳ್ದೆನಿ ಪ್ರಭುಲಿಂಗಲೀಲೆಯನು' ಎನ್ನುವಲ್ಲಿ ಕವಿಯ ನಿರಹಂಕಾರ ವ್ಯಕ್ತವಾಗಿದೆ. "ತಮ್ಮ ತನು ಮನ ಧನವನೆಲ್ಲವನು ಬೀಯ ಮಾಡಿಯೇ ಲಿಂಗದಲಿ ನಿಜ ಕಾಯ ನಿಲುವಡೆ ನಿತ್ಯರಪ್ಪಡೆದಾಯಿಗಳ ಲಾಲಿಸುವದು" ಎಂಬಲ್ಲಿ ಇದು ಯಾರಿಗಾಗಿ ಬರೆಯಲಾಗಿದೆ ಎಂಬ ಸೂಚನೆ ಇದೆ.

ಪ್ರಭುಚರಿತೆಗೆ ಮುಖ್ಯವಾದುದು ಆತನ ನೈಜ ವೈರಾಗ್ಯ, ಮಾಯಾ ತಿರಸ್ಕಾರ, ಬಸವಾದಿ ಪ್ರಮಥರ ಉದ್ಧಾರ, ಆಧ್ಯಾತ್ಮಿಕ ತತ್ವಗಳ ತಿಳಿಯಾದ ಸೂಕ್ಷ್ಮವಾದ ವಿಚಾರ. ಇವುಗಳನ್ನೆಲ್ಲ ಚಾಮರಸನು ರಸವತ್ತಾಗಿ ವಿವರಿಸಿದ್ದಾನೆ.

ಪುರಾಣದಂತೆ ಈಶ್ವರನ ಪಂಚವಿಂಶತಿ ಲೀಲೆಗಳನ್ನಾಗಲೀ ಬಸವೇಶ್ವರನ ಎಂಬತ್ತೆಂಟು ಪವಾಡಗಳನ್ನಾಗಲೀ ವಿವರಿಸಲು ಹೋಗದಿರುವದು ಆವನ ಔಚಿತ್ಯ ಜ್ಞಾನಕ್ಕೆ ಸಾಕ್ಷಿಯಾಗಿದೆ. ಅಷ್ಟಾವರ್ಣಗಳ ನಿರೂಪಣೆಯೂ ಇಲ್ಲಿಲ್ಲ. ಇಷ್ಟಲಿಂಗ ಪ್ರಾಣಲಿಂಗದ ವಿಚಾರವನ್ನು ಮಾತ್ರ ಸರಳವಾದ ಸಂಭಾಷಣಾ ಮಾರ್ಗದಿಂದ ತಿಳಿಸಲಾಗಿದೆ. ಈ ಕಾವ್ಯದಲ್ಲಿ ಧಾರ್ಮಿಕ ದೃಷ್ಟಿಯಿಂದ, ಅಂಗಸ್ಥಲ, ಲಿಂಗಸ್ಥಲಗಳ ಮರ್ಮಗಳು ಅಡಕವಾಗಿವೆಯೆಂದೂ ಷಟ್ಸ್ಥಲ, ಏಕೋತ್ತರ ಶತಸ್ಥಲಗಳು ಪ್ರತಿಪಾದಿತವಾಗಿವೆಯೆಂದೂ ಹೇಳಬಹುದು.

ಚಾಮರಸನು ಆಯಾ ಪಾತ್ರಗಳ ಗುಣಶೀಲಗಳನ್ನು ಚನ್ನಾಗಿ ಗ್ರಹಿಸಿ ಸಮರ್ಪಕವಾಗಿ ಚಿತ್ರಿಸಿದ್ದಾನೆ. ಪರಮಜ್ಞಾನಿಯೂ ವೈರಾಗ್ಯ ಮೂರ್ತಿಯೂ ಶಾಂತಿಯುತನೂ ಆದ ಅಲ್ಲಮನು ಮೂಲಾಹಂಕಾರದಲ್ಲಿ ನಿಂತು ಬೇಕಾದಾಗ ಬಹಿರ್ಮುಖನಾಗಿ ಪ್ರಪಂಚದ ಕಡೆಗೆ ದಯಾದೃಷ್ಟಿಯನ್ನು ಬೀರುತ್ತ ಮನುಷ್ಯರ ಲೋಪದೋಷಗಳನ್ನು ಸಾಧಕರ ಸಂಕಷ್ಟಗಳನ್ನೂ ತಿಳಿದು ಅವರನ್ನು ಯೋಗ್ಯವಾದ ಮಾರ್ಗದಲ್ಲಿ ತಿದ್ದಲು ಮುಂದುವರೆಯುತ್ತಾನೆ.

ಮಾಯೆಯ ಸನ್ನಿವೇಶದಿಂದ ಮೊದಲುಗೊಂಡು ಅಲ್ಲಮನು ತನ್ನನ್ನು ಇದಿರಸಿದ ಸನ್ನಿವೇಶಗಳಲ್ಲಿ ಸಂಪೂರ್ಣ ವೈರಾಗ್ಯ, ನಿರ್ಲಿಪ್ತತತೆ, ಸಮಯಾತೀತತೆ, ಆದರ್ಶಗುರುವಿನ ಮಾರ್ಗದರ್ಶನ, ನಿಷ್ಠುರತೆಯೊಡನೆ ಬೆರೆತ ಪ್ರೇಮಳತೆ ಈ ಮೊದಲಾದ ವ್ಯಕ್ತಿತ್ವದ ಅಂಗಗಳನ್ನು ತೋರ್ಪಡಿಸಿದ್ದಾನೆ.

ಮುಕ್ತಾಯಕ್ಕನ ಆಪತ್ಕಾಲದಲ್ಲಿ ಒದಗಿಬಂದು, ಅವಳ ಸಂದೇಹವನ್ನು ನಿವಾರಿಸಿ, ಧರ್ಮದಲ್ಲಿ ಅವಳ ನಂಬುಗೆಯನ್ನು ಧೃಡಪಡಿಸಿ ಸಾಧನೆಯ ಮಾರ್ಗವನ್ನು ಪುನಃ ಹತ್ತಿಸಿದನು. ಬಸವಣ್ಣನ ದಾಸೋಹಂಭಾವದ ಮರೆಯಲ್ಲಿದ್ದ ಅಹಂಭಾವವನ್ನು ಬೈಲಿಗೆಳೆದು ಆತ್ಮಾರ್ಪಣೆಯೇ ನಿಜವಾದ ಮಾರ್ಗವೆಂದು ತೋರಿಸಿಕೊಟ್ಟರು. ಯೋಗಿವರ್ಯನಾದ ಸಿದ್ಧರಾಮನ ಕರ್ಮವನ್ನು ನೋಡಿ, ಮರುಗಿ ಆತನಲ್ಲಿ ಹುದುಗಿದ್ದ, ಯೋಗಿಗಳಿಗನುಚಿತವಾದ

ನೊಸಲಕಣ್ಣದರ್ಪವನ್ನು ಕಿಡಿಸಿ ನಿಜವಿರಕ್ತಿಯನು ಬೋಧಿಸಿದನು, ವಜ್ರ ಶರೀರಿಯಾಗಿ ಗರ್ವದಿಂದ ಮೆರೆವ ಗೋರಕ್ಷಕನಿಗೆ ಮುಕ್ತಿಮಾರ್ಗವನ್ನು ಬೋಧಿಸಿಕೊಟ್ಟನು. ಮಹದೇವಿ ಅಕ್ಕನನ್ನು ಕಟುತರವಾದ ಪ್ರಶ್ನೆಗಳಿಂದ ಪರೀಕ್ಷಿಸಿ ಕೊನೆಯ ಮಾರ್ಗವನ್ನು ಕರುಣಿಸಿದನು. ಮಾಯೆಯ ಸಹಜ ಮೋಹಕತ್ವವನ್ನು ಪ್ರಕಟಿಸಿ ಅಂತಹ ಮಾಯೆಯ ತಿರಸ್ಕಾರ ಮಾಡಿದ ಪ್ರಭು ವಿನ ಘನತೆಯನ್ನು ತೋರಿಸಲಾಗಿದೆ.

ಪ್ರಭುಲಿಂಗಲೀಲೆಯಲ್ಲಿ ಬರುವ ಕಥಾಗರ್ಭದಲ್ಲಿ ಸಂಕೀರ್ಣ ಸನ್ನಿವೇಶ ಗಳಿಲ್ಲ; ಮಾನವ ಹೃದಯದಲ್ಲಿ ಅಧಿಪತ್ಯಮಾಡುವ ಕೋಪ, ವೀರ, ವೈರ ಮುಂತಾದ ಕ್ಷಾತ್ರರಸಗಳ ಪ್ರದರ್ಶನವಿಲ್ಲ, ವೀರಾಲಾಪಗಳಿಗೆ ಎಡೆಗೊಡುವ ಯುದ್ಧ ಪ್ರಸಕ್ತಿಗಳಿಲ್ಲ. ಇಲ್ಲಿ ಬರುವದು ವೈರಾಗ್ಯಮೂರ್ತಿಯ, ಶಾಂತ ಜೀವನದ ಚಿತ್ರ; ಧ್ಯೇಯವು ಶಿವತತ್ವ ಸಾಧನೆ; ಆಲಾಪಗಳೆಲ್ಲ ಶಿವಾನುಭವ ಮಂಟಪದಲ್ಲಿ ನಡೆಯುವ ಲಿಂಗಾಂಗ ಸಾಮರಸ್ಯದ ಸಾಲ್ಲಾಪ.

ಚಾಮರಸನ ಶೈಲಿಯ ಶಾಂತರಸ ಪ್ರಧಾನವಾಗಿ ಪ್ರಭುಚರಿತೆಗೆ ಅನುರೂಪವಾಗುವಂತೆ ಮೃದು ಮಧುರವಾಗಿಯೂ ಸರಸ ಗಂಭೀರವಾಗಿಯೂ ತುಂಬಿ ಸೂಸಿ ಹರಿಯುವ ಗಂಗಾ ಪ್ರವಾಹದಂತೆ ಪ್ರಶಾಂತವಾಗಿ ಪ್ರವಹಿಸು ತ್ತದೆ. ಆಧ್ಯಾತ್ಮಿಕ ವಿಷಯಗಳು ವಿವೇಚನೆಯನ್ನು ಬಹುಸುಲಲಿತವಾಗಿಯೂ ಸರಳವಾಗಿಯೂ ಮಾಡಿರುವದು ಚಾಮರಸನ ವೈಶಿಷ್ಟ್ಯವೆಂದೇ ಹೇಳ ಬಹುದು. ಇಲ್ಲಿಯ ಶೈಲಿಯ ಮುಖ್ಯ ಗುಣವೆಂದರೆ ಸರಳತೆ ಮತ್ತು ಶ್ರಾವ್ಯತೆ; ಸಮಯೋಚಿತವಾಗಿ ಅರ್ಥ ವ್ಯಕ್ತಿಗೆ ಅನುಕೂಲವಾಗುವಂತಹ ಉಪಮೆ. ರೂಪಕ ಮತ್ತು ದೃಷ್ಟಾಂತ ಮೊದಲಾದ ಸುಲಭ ಅಲಂಕಾರಗಳನ್ನು ಹಿತಮಿತ ವಾಗುವಂತೆ ಬಳಸಲಾಗಿದೆ. ಇಲ್ಲಿಯ ಭಾಷೆಯು ನಡುಗನ್ನಡ ಭಾಷೆಯಾಗಿದೆ. ವ್ಯಾಕರಣದ ಕಟ್ಟುಗಳೂ ಸಡಿಲಾಗಿವೆ, ಹೊಸ ಶಬ್ದಗಳನ್ನೂ ರೂಪಿಸಲಾಗಿದೆ, ಒಟ್ಟಿನಲ್ಲಿ ಚಾಮರಸನ ಶಬ್ದಶಕ್ತಿಯ ಸಹಜ ವಿಲಾಸವು ಹೆಜ್ಜೆ ಹೆಜ್ಜೆಗೆ ಗೋಚರವಾಗುತ್ತದೆ, ಅಚ್ಚಗನ್ನಡ ದೇಸಿ ಅಪ್ರಯತ್ನ ಸಮೃದ್ಧಿಯಾಗಿದೆ. ಅಲ್ಲಮಪ್ರಭುವಿನ ಚರಿತೆಯನ್ನು ರಸೈಕ ದೃಷ್ಟಿಯಿಂದ ಮನಂಬುಗುವ ರೀತಿ ಯಲ್ಲಿ ರಚಿಸಲಾಗಿದೆ.

ಇ) ಶತಕತ್ರಯ— 'ಶಿವಾಧವಶತಕ', 'ಸಿವಾವಲ್ಲಭಶತಕ' ಐಪುರೀಶ್ವರಶತಕ' ಇವುಗಳ ಕರ್ತೃ ಮಗ್ಗೆಯ ಮಾಯಿದೇವನು. ಇವುಗಳ ಕಾಲ ಸುಮಾರು ೧೪೩೦ ಎಂದು ತಿಳಿದುಬರುತ್ತದೆ. ಶತಕಗಳಲ್ಲಿ ಸಾಮಾನ್ಯವಾಗಿ ವೀರಶೈವ ತತ್ವಕ್ಕನುಸರಿಸಿ ಭಕ್ತಿಜ್ಞಾನ ವೈರಾಗ್ಯಗಳ ಬೋಧನೆಯಿದ್ದೆ, ಷಟ್ಸ್ಥಲ ಸಿದ್ಧಾಂತದ ವಿವರಣೆಯಿದೆ. ಅಕ್ಷರ ವೃತ್ತಗಳಲ್ಲಿ ಒರೆದ ತಾತ್ವಿಕ ಮತ್ತು ನೀತಿಪ್ರಧಾನ ಕಾವ್ಯದ ಮಾದರಿಯೆಂದು ಇವನ್ನು ಕರೆಯಬಹುದು ಯಾವ ಶತಕಗಳಲ್ಲಿಯೂ ಶೃಂಗಾರಕ್ಕೆ ಎಡೆಯಿಲ್ಲ. ಅಲ್ಲಲ್ಲಿ ಭಾವಗೀತೆಯ ಅಂತಸ್ಸತ್ವವು ಕಂಡುಬರುತ್ತದೆ.

ಮಗ್ಗೆಯ ಮಾಯಿದೇವನ 'ಶತಕತ್ರಯ'ಕ್ಕೆ ಎಲ್ಲ ದೃಷ್ಟಿಯಿಂದಲೂ ಅಗ್ರಮಾನ ಸಲ್ಲುತ್ತದೆ. 'ಶಿವಾವಧತ ಶತಕ' ದಲ್ಲಿ ಜ್ಞಾನವನ್ನೂ 'ಶಿವಾ ವಲ್ಲಭ ಶತಕ'ದಲ್ಲಿ ಭಕ್ತಿಯನ್ನೂ 'ಐಪುರೀಶ್ವರ ಶತಕ'ದಲ್ಲಿ ವೈರಾಗ್ಯವನ್ನೂ ಮುಖ್ಯವಾಗಿ ನಿರೂಪಿಸಲಾಗಿದೆ. ಭರ್ತೃಹರಿಯ ಸಂಸ್ಕೃತ ಶತಕ ತ್ರಯದಲ್ಲಿ ಶೃಂಗಾರ, ವೈರಾಗ್ಯ, ನೀತಿಗಳಿದ್ದರೆ ಇಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪ್ರತಿಪಾದಿಸಲಾಗಿದೆ. ಸುಂದರ ಸಾದೃಶ್ಯಗಳಿಂದ ತತ್ವವನ್ನು ತಿಳಿಸಲಾಗಿದೆ. ಶೈಲಿಯ ಮೇಲೆ ಸಂಸ್ಕೃತದ ಪ್ರಭಾವ ಹೆಚ್ಚಿದೆ. 'ಐಪುರೀಶ್ವರ' ಶತಕದಲ್ಲಿ ಮಾಯಿದೇವನ ಮಗ್ಗೆಯ ಭಕ್ತಿ ಹಾಗೂ ಅನುಭವ ಪರಿಪಾಕ ಪ್ರಕಟವಾಗಿದೆ. ಒಟ್ಟಿನಲ್ಲಿ ಈ ಶತಕಗಳಲ್ಲಿ ಮಾಯಿದೇವನ ವಿದ್ವತ್ತೆ ಮತ್ತು ಕಳಕಳಿಗಳು ಮೆಚ್ಚುವಂತಿವೆ.

ಈ) ಕೈವಲ್ಯ ಪದ್ಧತಿ— ಇದನ್ನು ರಚಿಸಿದರು ನಿಜಗುಣ ಶಿವ ಯೋಗಿಗಳು. ಭಕ್ತಿಜ್ಞಾನ ವೈರಾಗ್ಯಗಳ ಪ್ರತೀಕನಾದ ತಪೋನಿಧಿಯ ಮೊದಲ ಗ್ರಂಥವಿದು. ಇದನ್ನು 'ಸಕಲ ವೇದ ವೇದಾಂತಾಗಮಸ್ಮೃತಿ ಪುರಾಣೇತಿಹಾಸ ಸೂತ್ರಾದಿ ಶಾಸ್ತ್ರಸಮ್ಮತದಿಂ ಪುರಾತನ ಗೀತಾನುಗುಣ್ಯ ವೆನಿಸಿ' ಬರೆದುದಾಗಿ ಅವನೇ ಹೇಳಿದ್ದಾನೆ ಇದರಲ್ಲಿ ತತ್ವೋಪದೇಶ ಪರವಾದ ಮತ್ತು ಶಿವಸ್ತುತಿಯುಳ್ಳ ಹಾಡುಗಳಿವೆ. ಅವುಗಳಲ್ಲಿ ಕಲ್ಪನಾ ವಿಲಾಸವಿಲ್ಲ. ಆದರೆ ತಿಳಿಗನ್ನಡದಲ್ಲಿ ಸ್ಫೂರ್ತಿದಾಯಕವಾದ ಬೋಧನೆಯಿದೆ.

ಇದರ ಮೊದಲದೆಯ ಹಾಡಿನಲ್ಲಿ 'ಬಳಸದಿರದ್ವೈತವನು ಬಾಹ್ಯದಲ್ಲಿ, ನಿನ್ನೊಳೇಕೊಭಾವನೆಯೊಡಗೂಡು, ತಿಳಿದು ಸಮಯ ನಿಷ್ಠೆಯಲಿ 'ವೇದ

ವಿಧಿ ಭಕ್ತಿಗಳನಗಲದಿರು' ಎಂದು ಹೇಳಲಾಗಿದೆ. 'ಕೋಗಿಲೆ ಚೆಲ್ವ ಕೋಗಿಲೆ ಮುದ್ದು ಕೋಗಿಲೆ' ಮೊದಲಾದ ಹಾಡುಗಳಲ್ಲಿ ಭಾವಗೀತೆಯ ಕಾವು ಏರುತ್ತದೆ, ಗುರುಭಕ್ತಿ ತುಂಬಿ ಸೂಸುತ್ತದೆ. 'ಶ್ರೀ ಗುರು ವಚನೋಪದೇಶ ವನಾಲಿಸಿದಾಗಳಹುದು ನರರಿಗೆ ಮುಕುತಿ', 'ಗುರುವೆ ನಿಮ್ಮಯ ಕರುಣದೊ ಳೆನ್ನ ತತ್ವದಿರವನರಿದು ನಿತ್ಯ ಸುಖಿಯಾದೆ', 'ಅರಿವೆ ನೀನೆಂದು ಸದ್ಗುರ ಪೇಳಿ ತಿಳಿದನು ಜಾಣ' ಮೊದಲಾದ ಪದಗಳಲ್ಲಿ ಜ್ಞಾನ ಮಾರ್ಗದ ಸಿದ್ಧಿಗೆ ಗುರು ಕೃಪೆಯೇ ಮುಖ್ಯವೆಂದು ಹೇಳಲಾಗಿದೆ.

ಉ) **ವಿವೇಕ ಚಿಂತಾಮಣಿ**— ಇದು ನಿಜಗುಣ ಶಿವಯೋಗಿಗಳು ಕನ್ನಡಕ್ಕೆ ಜನಕ್ಕೆ ನೀಡಿದ ಜ್ಞಾನ ಭಾಂಡಾರ 'ವಿಶ್ವಕೋಶ' ಇದೊಂದು ಅಪೂರ್ವವಾದ ಗದ್ಯ ಗ್ರಂಥ ಅಂದಿನ ಕಾಲದ ಯಾವತ್ತೂ ತಾತ್ವಿಕ, ಭೌಗೋಲಿಕ, ಸಾಹಿತ್ಯಿಕ ವಿಷಯಗಳ ಜ್ಞಾನವು ಸಂಗ್ರಹವಾಗಿ ಕೆನೆಗಟ್ಟಿ ಹತ್ತು ಪ್ರಕರಣಗಳಲ್ಲಿ ೭೬೫ ವಿಷಯಗಳು ಒಳಗೊಂಡಿವೆ.

'ವೇದ ಪುರಾಣ ಶಾಸ್ತ್ರದೊಳ್ ನೇಮಿಸಿ ತೋರ್ಪ ವಿಶ್ವವಿಷಯಂಗಳ ಸಂಸ್ಥಿತಿಯಂ ವಿವೇಕ ಚಿಂತಾಮಣಿಯೆಂದು ಸಲ್ವ ವೆಸರಿಟ್ಟು ಮಹಾ ಕವಿತಾ ಪ್ರಭಂಧಮಂ ಪ್ರೇಮದಿ ಪೇಳ್ವೆ' ಎಂದು ಪೇಳಲ್ಪಟ್ಟಿದ್ದರೂ ಇದು ಮಹಾಜ್ಞಾನ ನಿಧಿಯಾಗಿದೆ 'ಆಗಮನಾಮ್ನಾಯ ಸಮ್ಮತದಿಂ........ಬೆಳುಗನ್ನಡದ ಮಾದ ವಚನ ರಚನೆಗಳಿಂದ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದಂ' ಎಂಬ ಇದರ ಪೀಠಿಕೆಯಲ್ಲಿ ಇದರ ಉದ್ದೇಶವನ್ನು ಸ್ಫುಟವಾಗಿ ಹೇಳಲಾಗಿದೆ.

ಇಲ್ಲಿ ಸಂಸ್ಕೃತದ ಆಧಿಕ್ಯವಿದೆ. ಪಾರಿಭಾಷಿಕ ಪದಗಳ ಪಟ್ಟಿ ಅನಿವಾರ್ಯ ವಾಗಿದೆ. ಆದರೂ ಸಂಗ್ರಹವಾಗಿ ಸರ್ವರಿಗೂ ವೇನ್ಯವಾಗುವ ಉದ್ದೇಶ ಈಡೇರಿವೆ. ಒಂದು ಮತ ಇಲ್ಲವೆ ತತ್ವಕ್ಕೆ ಸಂಬಂಧಿಸಿದ ಮತಾತೀತವಾದ ಸಕಲ ಜ್ಞಾನಕೋಶವೆಂಬ ಸ್ವರೂಪದಲ್ಲಿ ಇದು ಕನ್ನಡ ವಾಙ್ಮಯದಲ್ಲಿ ಅದ್ವಿತೀಯವಾದ ಗ್ರಂಥ.

ವೇದಾಂತಿ, ಸಿದ್ಧಾಂತಿ, ಯೋಗಿಗಳಿಗೆ ಇದೊಂದು ಜ್ಞಾನಕೋಶ ದಂತಿದೆ. ಇದರ ಅಭ್ಯಾಸ, ಅವಲೋಕನಗಳಿಂದ ಸಂಗ್ರಹ ಚಾತುರ್ಯ ಮೊದ ಲಾದವುಗಳ ಅನುಭವವೂ ಬರುವದು.... ತತ್ವಜ್ಞಾನಿಯ ನಿಃಪಕ್ಷಪಾತ

ವೃತ್ತಿಯೂ ಮತಮಾರ್ಗದೊಡನೆ ಹೊಂದಿಕೊಂಡು ಹೋಗುವ ಜಾಣ್ಮೆಯೂ ಇಲ್ಲಿ ಕಂಡುಬರುವದು.

ಊ) ತೊರವೆ ರಾಮಾಯಣ— ಇದರ ಕರ್ತೃ ನರಹರಿಯು. ಕುಮಾರವ್ಯಾಸನನ್ನು ಅನುಸರಿಸಿ ಕುಮಾರ ವಾಲ್ಮೀಕಿ ಎಂದು ಕರೆದ-ಕೊಂಡ ವನು. ಇದು ಸುಮಾರು ೧೫೦೦ ರಲ್ಲಿ ಬರೆಯಲಾದ ವಾಲ್ಮೀಕಿ ರಾಮಾಯಣದ ಮೊದಲನೆಯ ಸಮಗ್ರ ಅನುವಾದ ಕಾವ್ಯ. ಭಾಮಿನಿ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಇವನಿಗೆ ಕುಮಾರವ್ಯಾಸನಿಂದ ಪ್ರೇರಣೆ ದೊರೆತಿದೆ.

'ರಘುವರ ಕಥಾ ವಿಮಲೋದಧಿಯಿಂದು ಮಹಾಮುನಿ ಪ್ರಾಚೇತಸಂ ವಂದೇ' ಎಂದು ಪ್ರಾರಂಭದಲ್ಲಿ ವಾಲ್ಮೀಕಿಯನ್ನು ವಂದಿಸಲಾಗಿದೆ. ಅದ್ಭುತ ರಾಮಾಯಣದ ವರ್ಚಸ್ಸು ಇಲ್ಲಿದೆ ಎಂದು ಕೆಲವರ ಅಭಿಮತವಾಗಿದೆ. ಇಲ್ಲಿ ಭಾಗವತ ದೃಷ್ಟಿಯಿದೆ. ಶಿವನು ಪಾರ್ವತಿಗೆ ಈ ಕಥೆ ಹೇಳಿದಂತೆ ಪೀಠಿಕೆಯಲ್ಲಿ ಸೂಚಿಸಲಾಗಿದೆ.

ಸಂಕ್ಷೇಪದಲ್ಲಿ ಕವಿಯ ಆಸಕ್ತಿಯಿದ್ದರೂ ಯುದ್ಧಕಾಂಡ ಬೆಳೆದಿದೆ. ವ್ಯತ್ಯಾಸಗಳು ಕೆಲವಿವೆ ಇಲ್ಲಿ ಮಂಥರೆ ದಾಸಿಯಾಗಿರದೆ ಮಾಯೆಯ ಅವತಾರವಾಗಿದ್ದಾಳೆ. ರಾಜ್ಯಾಭಿಷೇಕದಿಂದ ರಾಮನ ಮುನಿವಸಿಷ್ಠರಿಗೆ 'ಕಂಡೆನಿದೊಂದು ಕನಸನು ಕಾನನದೊಳರವಿಂದಮುಖಿಸಹಿತೆಮಗೆ ಸಂಭವಿಸಿತರ ಪರಿಭ್ರಮಣ'ವೆನ್ನುತ್ತಾನೆ ಮುನಿವೇಷದ ರಾವಣನಿಗೆ ಸೀತೆಯು 'ನಮ್ಮಯ ಜನಕ ಬಂದಪೊಲಾಯಿತೆಂದಳು ಮುಗಿದು ಕರಯುವ' ಯುದ್ಧಕ್ಕೆ ಹೊರಟ ರಾವಣ ಸಿರಿಸಂಪತ್ತನ್ನು ದಾನಮಾಡಿ, ಕೈದಿಗಳನ್ನು ಬಿಡುಗಡೆ ಮಾಡಿದ್ದಾನೆ. ರಣದಲ್ಲಿ ಸೋತ ರಾವಣನ ಮನಸ್ಸು ಪಶ್ಚಾತಾಪದಿಂದ,

ಮಾಣದಾದೆನು ಮಾವನಾಡಿದ । ವಾಣಿಯಲಿ ಕಾಮುಕ ವಿಕಾರದಿ।
ಕಾಣದಾದೆನು ಕಲಿವಿಭೀಷಣನುಚಿತ ಭಾಷಣವ ॥

ಎಂದು ಹೊಯ್ದಾಡುತ್ತಿದೆ. ಪಾತ್ರ ದೃಷ್ಟಿಯಿಂದ ರಾವಣನಲ್ಲಿ ಒಳ್ಳೆಯತನದ ಅಂಶಗಳನ್ನು ತೋರಿಸುವ ಪ್ರಯತ್ನ ಕಾಣುತ್ತದೆ. ಇಲ್ಲಿ ನಾಗಚಂದ್ರನ ರಾವಣನ ಪ್ರಭಾವವು ಬಿದ್ದಿರಬೇಕು.

ಕಥನ ಶೈಲಿಯಲ್ಲಿ ಓಟವಿದೆ. ಇದು ಕೆಲ ಸಲ ರಸಭಂಗಕ್ಕೆ ಕಾರಣವೂ ಗಿದೆ. ಕೈಕೆಯಿಯು ತನ್ನೆರಡು ವರಗಳನ್ನು ಕೇಳಿದುದು 'ವನಿತೆಯುತ್ತರ ಗು ನಾಟಿತು. ಜನಪನುರವನು' ಎಂದೂ 'ಪೊಂದಳಿಗೆಯ ನಿವಾಳಿಯು ಸಿದಳೊ' ಶಚಿ ಎಂದು ರಾಮನು ರಾವಣನ ವಧೆಗೆ ಹೋಗುವದನ್ನೂ ಕದಗ್ಧನಾದ ದಶರಥನ ಬಳಿ ರಾಮ ಬರಲು 'ರಾಮನೆ ಬಂದಾತ ಗದಭಿರಾಮನೇ ನುಡಿವಾದ ಮಂಗಳ ನಾಮನೇ' ಎಂಬ ಉದಾಹರಣೆ ಗಳನ್ನು ನೋಡಬೇಕು.

ಇಲ್ಲಿ ಭಾಷೆ ಹಾಗೂ ಷಟ್ಪದಿಯ ನಡೆಯಲ್ಲಿ ಕಥನಕ್ಕಿಂತ ಅಧಿಕ ಶಕ್ತಿ ದೆ, ಆಕರ್ಷಣೆಯಿದೆ. ಕುಮಾರವ್ಯಾಸನ ಪ್ರಭಾವ ಇಲ್ಲಿ ನಿಚ್ಚಳವಾಗಿದೆ. ವನ ದೇಶ್ಯ ಹಾಗೂ ಅನ್ಯದೇಶ್ಯ ಶಬ್ದಸಂಪತ್ತನ್ನು ಎತ್ತಿಕೊಂಡಿದ್ದಾನೆ. ಇದಕ್ಕೆ 'ಪರರ ಬಗೆ ಪರರುಕ್ತಿ.... ತಿರುಗಿ ನೋಡದ ಬಿರುದು ಬೇರೆ ಕುಮಾರ ವಾಲ್ಮೀಕಿ ಮಚೋಲಹರಿ' ಎಂಬ ಭಾಗವನ್ನು ಉದಾಹರಿಸಬಹುದು. ಇದಲ್ಲದೆ ಕಲ್ಪನೆ ಹಾಗೂ ಶೈಲಿಗಳಲ್ಲಿ ಕಾಳಿದಾಸನ ಪ್ರಭಾವವೂ ಕಾಣುತ್ತದೆ.

ಕುಮಾರ ವಾಲ್ಮೀಕಿಯ ಯೋಗ್ಯತೆ ಮಧ್ಯಮ ಪ್ರತಿಯದಾದ ಕಾರಣ ಇವನ ಕಥನ ಕಲೆಯಲ್ಲಿಯೂ ಮಧ್ಯಮ ಗುಣ ತೋರಿದೆ. ಆದರೂ ರಾಮ ನಾಮದ ಮಹಿಮೆಯ ಹಾಗೂ ಭಾಗವತ ದೃಷ್ಟಿಯಿಂದ ಓದಬೇಕಾದ ಕಾವ್ಯವಿದು. ಆದರೆ,

> ಸರಸ ವರ್ಣಕ ಕವಿಗಳೊಳು ಭಾ-|ಸುರ ಕುಮಾರವ್ಯಾಸನೊಬ್ಬನು|
> ಪರಕಿಪೊಡೆ ತಾನೊಬ್ಬ ಮಗುಳೆರಡನೆಯ ವರ್ಣಕಗೆ ||
> ವರಕುಮಾರವ್ಯಾಸನೊಬ್ಬನು|ಯೆರಡನೆಯ ತಾನೊಬ್ಬ ಮಿಕ್ಕಿನ|
> ಬರಡು ಕವಿಗಳ ಲೆಕ್ಕಿಸುವನೆ ಕುಮಾರ ವಾಲ್ಮೀಕಿ ||.||

ಎಂಬ ಸ್ವಾಭಿಮಾನದ ಮಾತು ಮಾತ್ರ ಹುಸಿ ಹೆಮ್ಮೆಯ ನುಡಿ ಯಾಗಿದೆಯಲ್ಲದೆ ಒರೆಗಲ್ಲಿಗೆ ತಡೆದು ನಿಲ್ಲಲಾರದು.

**ಘನ ಘನಲಿಂಗನ ವಚನಗಳು**— ಘನಲಿಂಗನು ವಚನ ಸಾಹಿತ್ಯ ವನ್ನು ಸಮೃದ್ಧಗೊಳಿಸಿದವರಲ್ಲಿ ಒಬ್ಬನು ಇವನ ವಚನಗಳಲ್ಲಿ ಘನವಾದ ಭಾವಶಕ್ತಿಯಿದೆ. ಮೇಲಾದ ಕಲ್ಪನಾ ಶಕ್ತಿಯಿದೆ ಭಾವಗೀತೆಯ ಮನೋ ಧರ್ಮವು ಪಾಂಡಿತ್ಯದಿಂದಲೂ ಗೂಢತೆಯಿಂದಲೂ ಹದಗೊಂಡಿದ್ದರಿಂದ

ಶುದ್ಧ ವಚನ ಪರಂಪರೆಯು ಕೆಲಮಟ್ಟಿಗೆ ವಿರಲವಾಗಿದೆ ಎನ್ನಲಡ್ಡಿಯಿಲ್ಲ. ಘನಲಿಂಗನ ವ್ಯಕ್ತಿತ್ವದಲ್ಲಿ ಶುದ್ಧ ಭಾವನೆಗಳ, ಪ್ರತಿಭೆ ಪಾಂಡಿತ್ಯಗಳ ಸಮರಸವು ಪರಿಪೂರ್ಣವಾಗಿರಲಿಲ್ಲವೆಂಬುದನ್ನು ಅವನ ವಚನಗಳು ಸೂಚಿಸುತ್ತಿದ್ದರೂ ವಚನ ಸಾಹಿತ್ಯದಲ್ಲಿ ಅವನಿಗೊಂದು ವಿಶಿಷ್ಟ ಸ್ಥಾನವಿದೆ ಎಂಬುದನ್ನು ಮಾತ್ರ ಗಮನಿಸಬೇಕು. ಆದರೂ ಇವನಲ್ಲಿ ಉತ್ಕಟವಾದ ಅರ್ಹತೆಯಿದೆ, ಪ್ರಭಾವಿಯಾದ ವಾಣಿಯಿದೆ.

ಘನಲಿಂಗನು ತೋಂಟದ ಸಿದ್ಧಲಿಂಗ ಯತಿಯ ಶಿಷ್ಯರಲ್ಲಿ ಒಬ್ಬನು, ತನ್ನ ಕಾಲದಲ್ಲಿ ಉದ್ದಾಮ ಪಂಡಿತನೆಂದು ಕೀರ್ತಿ ಪಡೆದವನು. 'ಮತ್ತೂರು ಸಿಂಹಾಸನದ... ಶರಣು ನೆಣ್ಣಯ್ಯ ನಾನು' ಎಂದು ಹೇಳಿ ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣು ಮಾಡಿದರು' ಎಂದು ಗುರುಭಕ್ತಿಯನ್ನು ತೋರಿದ್ದಾನೆ.

'ಎನ್ನಾತ್ಮನದೊಂದು ಅರಸುತನದ ಅನ್ಯಾಯವ ಕೇಳಯ್ಯ ಗುರುವೇ' ಎಂದು ಸ್ವಾತ್ಮಾನು ಶೋಧನೆಯಿಂದ ವಚನಗಳ ಪ್ರಾರಂಭವಾಗಿದೆ. 'ಕುನ್ನಿಗೆ ರನ್ನದ ಹಲ್ಲಣ ಹಾಕಿದಂತೆ, ಹಂದಿಯ ತಂದು ಅಂದಣವನೇರಿಸಿದಂತೆ ಎನಗೊಲಿದು ಶಿವಲಾಂಛನವ ಕೊಟ್ಟ ಕಾರಣವೇನಯ್ಯ ಗುರುವೆ?' ಎಂದು ಕೇಳುವಾಗ ಅವನ ಹೃದಯದ ತಳಮಳ ವ್ಯಕ್ತವಾಗಿ. 'ನಿನ್ನ ನೆನೆನೆನೆದು ಎನ್ನ ಮನಬೀಗಿ ಬೆಳೆದು ತಳಿರಾಗಿ ಹೂಮಿಡಿಗೊಂಬುದಯ್ಯ ನಿನ್ನ ಹಾಡಿ ಹಾಡಿಜಿಹ್ವೆ ಅಮೃತಸಾಗರ ನೊಳೋಲಾಡುತಿಪ್ಪುದಯ್ಯ' ಎಂಬಲ್ಲಿ ಶಿವನಾಮ ಕೀರ್ತನೆಯ ಸತ್ಫಲವನ್ನು ವಿವರಿಸಲಾಗಿದೆ.

ಸಾಮಾನ್ಯವಾಗಿ ಇವನ ವಚನಗಳು ದೀರ್ಘವಾಗಿವೆ. ಆದರೆ ಇವುಗಳಲ್ಲಿ ಒಂದು ರೂಪಕವು ವಿಸ್ತಾರವಾಗಿ ದಾಂಗುಡಿ ಬಿಟ್ಟಿರಬಹುದು. ಸಿದ್ಧಾಂತ ಇಲ್ಲವೆ ಅನುಭಾವವು ಬಿಡಿಬಿಡಿಯಾಗಿ ಬಂದಿರಬಹುದು. ಏನೇ ಇದ್ದರೂ ಘನಲಿಂಗನು ಈ ಶತಮಾನದ ವಚನಕಾರರಲ್ಲಿ ಸಮರ್ಥನೆಂದು ನಿರ್ವಿವಾದವಾಗಿ ಹೇಳಬಹುದು.

ಪ್ರಶ್ನೆ ೨೧— ಟಿಪ್ಪಣಿ ಬರೆಯಿರಿ— (ಅ) ಪುರಂದರದಾಸರು, (ಆ) ಲಕ್ಷ್ಮೀಶ (ಇ) ರತ್ನಾಕರವರ್ಣಿ (ಈ( ವೀರಶೈವಾಮೃತ ಪುರಾಣ,

(ಇ) ಮೋಹನ ತರಂಗಣಿ (ಉ) ರಸರತ್ನಾಕರ (ಋ) ಭರತೇಶ ವೈಭವ
ಚನ್ನಬಸವ ಪುರಾಣ.

**ಉತ್ತರ—(ಅ) ಪುರಂದರದಾಸರು—** ವ್ಯಾಸರಾಯರಿಂದ ಮಂತ್ರೋಪದೇಶ ಪಡೆದು ದಾಸ ಶ್ರೇಷ್ಠರಾದ ಪುರಂದರದಾಸರು ಹಿರಿಯಭಕ್ತರು, ಹಿರಿಯ ಹಾಡುಗಾರರು. ಸಿರಿಯನ್ನು ತ್ಯಾಗ ಮಾಡಿ ಸ್ವೇಚ್ಛೆಯಿಂದ ತಿರುಕನಾಗಿದ್ದು ಲೋಕ ನಿರೀಕ್ಷಣೆ ಹಾಗೂ ಜನ ಸಂಪರ್ಕದಿಂದ ಸ್ಫೂರ್ತಿಯನ್ನು ಪಡೆದು ಹಾಡುಗಳನ್ನು ಹಾಡಿರಬೇಕು. ವಿಡಂಬಕ ಹಾಸ್ಯದಲ್ಲಿ ಅವನದು ಮೇಲುಗೈ. ಅವನು ಬರೆದ ನಾಲ್ಕುಲಕ್ಷ ಎಪ್ಪತ್ತೈದು ಸಾವಿರ ಕೀರ್ತನೆಗಳಲ್ಲಿ ಸಾವಿರಾರು ಮಾತ್ರ ಲಭ್ಯವಿದೆ. ಇವರ ಹಾಡುಗಳಲ್ಲಿ ಭಕ್ತಿ ತನ್ಮಯವಾದ ಜೀವನವು ತನ್ನ ವ್ಯಕ್ತಿತ್ವವನ್ನು ಹೇಗೆ ಪಡಿಮೂಡಿಸಿದೆ, ಅದರಲ್ಲಿದ್ದ ಅನುಭವದ ಆಳ ಎಷ್ಟು, ಅದರಿಂದ ದೊರೆತ ಸಾಹಿತ್ಯದಲ್ಲಿ ಸೌಂದರ್ಯವೆಷ್ಟಿದೆ ಎಂಬುದನ್ನು ತಿಳಿದುಕೊಳ್ಳಬೇಕು.

ವಿಷಯಾನುಗುಣವಾಗಿ ಪುರಂದರದಾಸರ ಕೀರ್ತನೆಗಳನ್ನು ನಾಮ ಮಹಿಮೆ, ಹರಿಗುರುಗಳ ಸ್ಮರಣೆ ಸುತ್ತಿ, ಅಂತರಂಗ ನಿವೇದನೆ, ಕೃಷ್ಣಲೀಲೆ ಸಮಾಜ ವಿಮರ್ಶೆ, ಸಮಾಜ ಬೋಧನೆಗಳಲ್ಲಿ ವಿಭಾಗಿಸಬಹುದು. ಇವುಗಳಲ್ಲಿ ವಿಷಯ ರೀತಿಗಳ ಸಂಗಮವು ಕೆಲಸಲಮಾತ್ರ ಸೊಗಸಾಗಿ ಅದ್ಭುತವಾಗಿ ಒದಗಿಬರುತ್ತದೆ.

'ನಾರಾಯಣ ನಿಮ್ಮ ನಾಮದ ಸ್ಮರಣೆಯು ಸಾರಾಮೃತವೆನ್ನ ನಾಲಿಗ್ಗೆ ಬರಲಿ' ಎಂಬ ನೈಜವಾದ ಅಂತರಗದ ಬಯಕೆ ಸರಳ ಉತ್ಕಟತೆಯಲ್ಲಿ ವ್ಯಕ್ತವಾಗಿದೆ. 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಎಂಬಲ್ಲಿ ಸಲಿಗೆಯ ಆತ್ಮವಿಶ್ವಾಸವಿದೆ. ಇವು ಜನಪ್ರಿಯ ಹಾಡುಗಳಾದರೂ ಸಾಹಿತ್ಯದೃಷ್ಟಿಯಿಂದ ಯಶಸ್ವಿಯಾಗಿಲ್ಲ. 'ಯಾದವ ನೀ ಬಾ ಯದುಕುಲನಂದನ', 'ಹುವ್ವ ತರುವರ ಮನೆಗೆ ಹುಲ್ಲು ತರುವ' ಮೊದಲಾದವುಗಳಲ್ಲಿ ನಾದ ಮಾಧುರ್ಯವಿದೆ, 'ಗೆಜ್ಜೆಗಾಲ್ಗಳ ಧ್ವನಿಯು ತೋರುತ ಹೆಜ್ಜೆಯ ಮೇಲೆ ಹೆಜ್ಜೆಯ ನಿಕ್ಕುತ ಸಜ್ಜನ ಸಾಧು ಪೂಜೆಯ ವೇಳೆಗೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ' ಇಂಥ ಪದಗಳಲ್ಲಿ ಸಹಜವಾದ, ಸೊಗಸಾದ ಚಿತ್ರಗಳಿವೆ, ಸಾಹಿತ್ಯ ಸತ್ವವೂ ವ್ಯಕ್ತವಾಗಿದೆ.

'ಕಂಡು ಕಂಡು ನೀ ಎನ್ನ ಕೈ ಬಿಡುವರೆ', 'ಬದುಕಿದೆನು ಬದುಕಿದೆನು ಭವ ಹಿಂಗಿತು', 'ಬಿನ್ನಹಕೆ ಬಾಯಿಲ್ಲವಯ್ಯಾ'ಗಳಲ್ಲಿ ಆರ್ತಭಕ್ತನ ಕೋರಿಕೆ ಕಳವಳಗಳಿವೆ. ಸಿದ್ಧಭಕ್ತನ ಸಮರ್ಪಣೆಯಿದೆ, ನಿರ್ಭೀತಿ ನಿಶ್ಚಿಂತತೆಗಳಿವೆ. 'ಕಿಚ್ಚಿಗೆ ಇರುವೆ ಮುತ್ತುವವೆ, ಗಾಳಿಗೆ ಗಿರಿ ನಡುಗವದೆ' ಇಂಥ ಸಾದೃಶ್ಯಗಳು ಸಂದರ್ಭೋಚಿತವಾಗಿವೆ.

ಕೃಷ್ಣಲೀಲೆಯ ಕೀರ್ತನೆಗಳಲ್ಲಿ ಭಾಗವತ ಪುರಾಣದ ಹಲವಾರು ಸನ್ನಿವೇಶಗಳೂ ವ್ಯಕ್ತಿಗಳೂ ತಲೆದೋರಿವೆ ಶೃಂಗಾರ, ವಾತ್ಸಲ್ಯ, ಹಾಸ್ಯ ರಸಗಳು ಹೊರಹೊಮ್ಮಿವೆ. ಅವರ ಸಮಾಜ ಜೀವನವನ್ನು ಕುರಿತು ಕೀರ್ತನೆಗಳು ಹಲವಿವೆ. ಅವುಗಳಲ್ಲಿ ಸಂಸಾರದ ನಿಸ್ಸಾರತೆ, ವೈರಾಗ್ಯ ಬೋಧನೆಯಿದ್ದಂತೆ ಜೀವನ ನಿಷ್ಠೆಯಿದೆ ಅನೀತಿ, ಡಾಂಭಿಕತೆಗಳ ಕಟು ವಿಮರ್ಶೆಯೊಡನೆ ನಿರಂತನ ಮೌಲ್ಯಗಳ ಮತ್ತು ಭಕ್ತಿ ಮಹಿಮೆಯ ಉಪದೇಶವಿದೆ. ಇವುಗಳಲ್ಲಿ 'ನಗೆಯು ಬರುತಿದೆ', 'ಬೇವು ಬೆಲ್ಲದೊಳಿಡಲೇನು ಫಲ', 'ಉದರ ವೈರಾಗ್ಯವಿದು' ಮೊದಲಾದವುಗಳನ್ನು ನೋಡಬೇಕು.

ಸಮಾಜ ಬೋಧನೆಯ ಕೀರ್ತನೆಗಳು ಹೆಚ್ಚಾಗಿವೆ. ಇಲ್ಲಿ ಬೋಧಕನ ಆವೇಶ ವಿಲಕ್ಷಣವಾಗಿದೆ. ಜನರಲ್ಲಿ ದೈವಭಕ್ತಿ, ಸತ್ಯ ಧರ್ಮ, ನೈಜನೀತಿ, ಜೀವನ ನಿಷ್ಠೆಗಳು ಬೆಳೆಯಬೇಕೆಂಬುದೇ ದಾಸರ ಬೋಧನೆಯ ತಿರುಳು. 'ಇದು ಭಾಗ್ಯವಿದು ಭಾಗ್ಯ'. 'ಸಕಲವೆಲ್ಲವೂ ಹರಿಸೇವೆಯೆನ್ನಿ', 'ಇರಬೇಕು ಇರದಿರಬೇಕು'ಗಳಲ್ಲಿ ಬೋಧನೆ ಹಾಗೂ ಭಾವಗೀತೆಯ ಗುಣಗಳಿವೆ. 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ, ಬಿಲ್ಲಾಗಿ ಇರಬೇಕು, ಬಲ್ಲಿವರೊಳಗೆ' ಎಂಬ ಗಾದೆ ಮಾತುಗಳು ಜನಜೀವನದಲ್ಲಿ ಬೆರೆತಿವೆ.

ಪುರಂದರ ದಾಸನು ವ್ಯಾಸರಾಯರ ಪಟ್ಟ ಶಿಷ್ಯನೂ 'ಮಧ್ವ ಮತಾನುಯಾಯಿಯೂ ಆಗಿದ್ದಾನೆ 'ಮಧ್ವ ಮತದಲಿ ಮೀನಾಗಿರಲೂ ಬೇಕು'. ಮಧ್ವಮತ ಸಿದ್ಧಾಂತದ ಪದ್ಧತಿ ಬಿಡಬೇಡ' ಎಂಬುದರಿಂದ ಇದನ್ನು ಅರಿತುಕೊಳ್ಳಬಹುದು. ಮಧ್ವಮತ ಸಿದ್ಧಾಂತವು ಅವರ ಬಾಳಿನಲ್ಲಿ ಬೆರೆತು ಜೀವನ ದರ್ಶನವಾಗಿತ್ತು, ಶ್ರದ್ಧೆಯಾಗಿತ್ತು. ಹೀಗಿದ್ದರೂ ಇತರ ಮತೀಯರ ಕೂಡ ಅವರು ಸಮನ್ವಯ ಸಾಧಿಸಿದ್ದಾರೆಂಬುದನ್ನು 'ಕುಲದ ಮೇಲೆ ಹೋಗ

ಟ್ಟಡ, ಕುಲವಿಲ್ಲ ಜ್ಞಾನಿಗಳಿಗೆ' ಮೊದಲಾದ ಕೀರ್ತನೆಗಳಿಂದ ವ್ಯಕ್ತ ವಾಗುತ್ತದೆ.

ಕೀರ್ತನೆಗಳಲ್ಲದೆ ಸುಳಾದಿಗಳನ್ನೂ ಉಗಾ ಭೋಗಗಳನ್ನೂ ಅವರು ಬರೆದಿದ್ದಾರೆ. ಅವುಗಳಲ್ಲಿ ಅವರ ಭಕ್ತಿಯೂ ಬೋಧನೆಯೂ ಸ್ವಚ್ಛಂದವಾಗಿ ಹರಿದಿದೆ ತನ್ನ ಗುರುವಿನಿಂದಲೇ 'ದಾಸರೆಂದರೆ ಪುರಂದರ ದಾಸರಯ್ಯ' ಎಂದು ಹೊಗಳಿಸಿಕೊಂಡರು, 'ನೀತಿಯಲ್ಲವನರಿತು ನಿಗದು ವೇದ್ಯನ ನಿತ್ಯ ಮಾತು ಮಾತಿಗೆ ಬಿಡದೆ ವರ್ಣಿಸುತಲಿ, ಗೀತ ನರ್ತನದಿ ಶ್ರೀ ಕೃಷ್ಣನ್ನ ಪೂಜಿಸುವ ಪುತಾತ್ಮ ಪುರಂದರ ದಾಸಯ್ಯ' ಎಂಬ ವ್ಯಾಸಸ್ತುತಿ ಸಾರ್ಥಕವಾಗಿದೆ.

ಕೀರ್ತನ ಪದ್ಧತಿಯ ಉದ್ಧಾರ, ಮತ ವೈರಗಳ ಪರಿಹಾರ, ಪಂಚಮ ರಲ್ಲಿ ಸಹಾನುಭೂತಿ ಪ್ರದರ್ಶನ, ಕರ್ನಾಟಕ ಭಾಷೋಜ್ಜೀವನ. ಸಂಗೀತ ಶಾಸ್ತ್ರದ ಉದ್ಧಾರ ಇವನ್ನು ಪುರಂದರ ದಾಸನು ಮಾಡಿದನೆಂದು ಬೇಲೂರು ಕೇಶವದಾಸರು ಹೇಳಿದ್ದಾರೆ ಕರ್ನಾಟಕ ಸಂಗೀತ ಶಾಸ್ತ್ರಕ್ಕೆ ಪುರಂದರ ದಾಸರು ಮಾಡಿದ ಉಪಕಾರವನ್ನು ಶಾಸ್ತ್ರಜ್ಞರು ಕೊಂಡಾಡಿದ್ದಾರೆ. ಪುರಂದರ ದಾಸರು ಹೇರಳವಾದ ಭಕ್ತಿಗೀತೆಗಳನ್ನು ರಚಿಸಿ ಜನಸಾಮಾನ್ಯಕ್ಕೂ, ಕನ್ನಡ ಸಾಹಿತ್ಯಕ್ಕೂ ಚಿರವಾದ ಬೆಸುಗೆಯನ್ನುಂಟು ಮಾಡಿದ ಹಿರಿಯ ವ್ಯಕ್ತಿಗಳಲ್ಲಿ ಒಬ್ಬರು.

ಅ) ಲಕ್ಷ್ಮೀಶ— ಕರ್ನಾಟಕ ಕವಿಚೂತವನ ಚೈತ್ರ' ಎಂಬ ಬಿರುದು ಪಡೆದ ಲಕ್ಷ್ಮೀಶನು ಜೀವಿಸಿದ್ದುದು ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ. ಇವನ ಊರು ದೇವನೂರು ಮಹಾಭಾರತದ ಅಶ್ವಮೇಧ ಪರ್ವವೇ ಇದರ ವಸ್ತುವಾಗಿದೆ. ಇವನ ಗ್ರಂಥ 'ಜೈಮಿನಿ ಭಾರತ'. ೬೮ ಅಧ್ಯಾಯದ ಸಂಸ್ಕೃತ ಜೈಮಿನಿ ಭಾರತವನ್ನು ೩೪ ಸಂಧಿಗಳಲ್ಲಿ ಸಂಕ್ಷೇಪಗೊಳಿಸಲಾಗಿದೆ ಇಲ್ಲಿ ತೋರಿದ ಭಕ್ತಿ ಹಾಗೂ ಮನೋಭಾವನೆಗಳನ್ನು ನೋಡಿದರೆ ಕವಿಯು ಭಾಗವತ ಸಾಂಪ್ರದಾಯದವನೆಂದು ತೋರದೆ ಇರದು.

ಮೂಲದಿಂದ ಮಾಡಿಕೊಂಡ ಬದಲಾವಣೆಗಳಲ್ಲಿ ಶೃಂಗಾರ. ವೀರ ಹಾಗೂ ಭಕ್ತಿ ರಸಗಳಿಗೆ ಹೆಚ್ಚಿನ ಅವಕಾಶವನ್ನು ತಂದುಕೊಂಡಿದ್ದಾನೆ. ಅಶ್ವ ಮೇಧಕ್ಕಾಗಿ ಧರ್ಮರಾಜನು ಧನವನ್ನು ತಂದದ್ದು, ಬಭ್ರುವಾಹನನು ಅರ್ಜು ನನ ಭೆಟ್ಟಿಗೆ ಹೋದುದು, ಕುಶಲವರ ಕಾಳಗದ ಸನ್ನಿವೇಶಗಳಲ್ಲಿ ಬದಲಾವಣೆ

ಇದೆ. ಯೌವನಾಶ್ವ, ಸುಧನ್ವ ಮಯೂರ ಧ್ವಜ, ವೀರವರ್ಮ ಚಂದ್ರಹಾಸ ಇವರೆಲ್ಲ ಪರಮ ವೈಷ್ಣವರಾಗಿ ಇಲ್ಲಿ ಬರುತ್ತಾರೆ. ಕಥನ ಕಲೆಯ ಬಗ್ಗೆ ಹೇಳುವದಾದರೆ ಮೂಲದಲ್ಲಿಯ ಪುರಾಣ ಪ್ರಧಾನ ಕಥನವನ್ನು ಕಾವ್ಯ ಪ್ರಧಾನ ಕಥನವನ್ನಾಗಿಸಿ ಅದನ್ನು ರಸವತ್ತಾಗಿ ಮಾಡಿದ ಕೈವಾಡವೆಲ್ಲ ಲಕ್ಷ್ಮೀಶನದೇ ಆಗಿದೆ. ಕಥೆಯಲ್ಲಿ ತಾದಾತ್ಮ್ಯ ಹೊಂದಿ ಹೇಳುವ ಕಥನ ಕಲೆ ಅವನಿಗೆ ಕರಗತವಾಗಿದೆ.

ಲಕ್ಷ್ಮೀಶನು ಬಿಡಿಸಿದ ಸೊಗಸಾದ ಚಿತ್ರಗಳಲ್ಲಿ ಉತ್ಪ್ರೇಕ್ಷೆಗಳ ಮಾಲೆಯಿದೆ ಷಟ್ಪದಿಗಳ ಝೇಂಕಾರವಿದೆ, ಕುಣಿತದ ಗೆಜ್ಜೆಗಳಂತೆ ಮಧುರವಾದ ವಿವಿಧ ಲಯದಿಂದ ಉಲಿಯುವ ನುಡಿಗಣವಿದೆ. ಅದರಲ್ಲಿಯೂ ಕಥೆಯ ಏಕತೆಗಿಂತ ರಸದ ಏಕತೆ ಇಲ್ಲಿದೆ. ಭಾಗವತ ದೃಷ್ಟಿಯ ಏಕತೆ ಲಕ್ಷ್ಮೀಶನ ವಿಶೇಷ ಗುಣವಾಗಿದೆ. ಕಥನ ಕಲೆ 'ಚಂದ್ರಹಾಸನ' ಕಥೆಯಲ್ಲಿ ಗೌರೀಶಂಕರದೆತ್ತರಕ್ಕೆ ಹೋಗಿದೆ. ಇಲ್ಲಿ ಕರುಣ, ವೀರ, ಅದ್ಭುತಗಳಿಗೆ ಭಕ್ತಿಯ ರಸ ಬೆರಸಿ ಬಂದು ಸಂಪೂರ್ಣ ಕಥೆಯ ತೃಪ್ತಿಯನ್ನು ಉಂಟು ಮಾಡಿದ್ದಾನೆ ಲಕ್ಷ್ಮೀಶಕವಿ.

ಅವನು ಬರೆದುದು 'ಕೃಷ್ಣಚರಿತಾಮೃತ' ಯಜ್ಞನದ ಕುದುರೆಯ ಸಂಚಾರದಲ್ಲಿ ಅಡೆತಡೆ ಬಂದರೆ ಕೃಷ್ಣನೇ ಮುಂದುಬಂದು ಅವನ್ನು ಪರಿಹರಿಸಬೇಕು. ಕೃಷ್ಣನಿಲ್ಲದೆ ಕಥೆ ಮುನ್ನಡೆಯದು.

ಲಕ್ಷ್ಮೀಶನು ತನ್ನ ಪಾತ್ರಗಳ ಹೃದಯವನ್ನು ಸೂಕ್ಷ್ಮವಾಗಿ ಅರಿತಿದ್ದಾನೆ. ಪುರುಷ ಪಾತ್ರಗಳಲ್ಲಿ ವೀರ ಹಾಗೂ ಭಕ್ತಿ ರಸಗಳೇ ಸಾಮಾನ್ಯವಾಗಿ ಇದ್ದರೂ ಅವರವರ ಪ್ರಕೃತಿ ಮತ್ತು ಪ್ರತಿಕ್ರಿಯೆಗಳಲ್ಲಿ ವೈವಿಧ್ಯತೆಯಿದೆ. ಧರ್ಮ, ಭೀಮ, ಅರ್ಜುನ, ಯೌವನಾಶ್ವ, ಸುಧನ್ವ, ಮಯೂರಧ್ವಜರಲ್ಲಿ ವೀರಭಕ್ತಿಗಳ ಸಮನ್ವಯವಿದೆ. ಸ್ತ್ರೀ ಪಾತ್ರಗಳಲ್ಲಿ ಸೀತೆಯ ಆದರ್ಶ ರಾಮನಿಷ್ಠೆಯನ್ನೂ ಸಹನ ಶೀಲತೆಯನ್ನೂ ಚಿತ್ರಿಸುವದರ ಜೊತೆಗೆ ಅನ್ಯಾಯವಾದ ಪರಿತ್ಯಾಗದ ಬಗ್ಗೆ ಪ್ರತಿಭಟನೆಯನ್ನೂ ಕವಿ ಚಿತ್ರಿಸಿದ್ದಾನೆ. ಶೃಂಗಾರದೆರಸಿಯಾದ ಪ್ರಭಾವತಿ, ಚಲವಾದಿನಿಯಾದ ಜ್ವಾಲೆ, ವಿಪರೀತ ಪ್ರಕೃತಿಯ ಚಂಡಿ, ಪ್ರಣಯ ಚತುರೆಯಾದ ವಿಷಯೆ ಇವರ ವ್ಯಕ್ತಿತ್ವವನ್ನು ನಿಚ್ಚಳವಾಗಿ ಮೂಡಿಸಿದ್ದಾನೆ.

ಲಕ್ಷ್ಮೀಶನ ಛಂದಸ್ಸು ಶೈಲಿಗಳಲ್ಲಿ ಪ್ರೌಢ ಪಾಂಡಿತ್ಯದ ಲೇಪವುಳ್ಳ ಸಹಜ ಸ್ಕಾರವಿದೆ, ದೇಸಿ ಮಾರ್ಗಗಳ ಸಮ್ಮಿಲನವಿದೆ. 'ಸಕಲ ಜನರಿಂದ ಸುಶ್ರಾವ್ಯ ಪ್ಪಂತೆ ಎನ್ನವದನಾಬ್ಜದಲ್ಲಿ ನೀನೆ ವ್ಯಾಪಿಸಿರ್ದು ಅಮಲಸುಮತಿಯಂ ಯೆನಗೆ ತಾಯೆ ನಗೆ ಗೂಡಿ ನೋಡಿ' ಎಂದು ವಾಣಿಯನ್ನು ಬೇಡಿದ್ದಾನೆ. ತರದ ಪ್ರಾಸಾನುಪ್ರಾಸಯಮಕಗಳೂ, ಶ್ಲೇಷಗಳೂ ಔಚಿತ್ಯ ಮತ್ತು ಹಜತೆಯಿಂದ ಕೂಡಿಮೆರೆದಿವೆ. ಲಕ್ಷ್ಮೀಶನಮನಕೆ ಸೂಕ್ಷ್ಮನಾದ ಶಕ್ತಿ ಪ್ರಾಪ್ತವಾಗಿದೆ. ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ ವಾಣಿಯಿಂ ತೆಯಿಂ ಪೇಳಿಸಿದನು' ಎಂದು ಆರಾಧ್ಯದೇವನ ಬಗ್ಗೆ ಹೇಳಿಕೊಂಡಿದ್ದಾನೆ.

ಷಟ್ಪದಿಕಾರರಲ್ಲಿ ವರ್ಣಕ ಕಾವ್ಯಕ್ಕೆ ಸಹ ಲಕ್ಷಣ ಬೇಕೆಂದು ಪ್ರೌಢಿಮೆಯನ್ನು ಕವಿ ಲಕ್ಷ್ಮೀಶನು ತುಂಬಿದ್ದಾನೆ 'ಪಾರದೆ ಪರಾರ್ಥಯಂ.... ಮಾರ್ಗದೊಳ್ನಡೆದ ಸತ್ಪುರುಷನ ಗಂಭೀರವೆಸೆಯ ಪೋಲ್ವ ಕಾವ್ಯ ಪ್ರಬಂಧ' ಛಂದಸ್ಸು ಲಕ್ಷಣಮಲಂಕಾರ ಭಾವರಸವೊಂದಿ ಕಳೆವೆತ್ತ ಸತ್ಕೃತಿ ಮತ್ಕೃತಿಯುಕ್ತವೊಂದುಮಿಲ್ಲದ ಕಾವ್ಯಮಶ್ರಾವ್ಯಮಹುದು' ಎಂದು ಳಿದ್ದಲ್ಲದೆ 'ಸಕಲಜನಕ್ಕೆ ವ್ಯಾಪಿಸಿದಸುಪ್ರೌಢಿಮೆರೆಯ' ಎಂದು ಹೇಳಿದ್ದನ್ನು ಡಿದರೆ ಅವನು ಬರೆದ ಕಾವ್ಯದ ಯೋಗ್ಯತೆ ತಿಳಿಯದಿರದು.

ಲಕ್ಷ್ಮೀಶನ ಕಾವ್ಯವು ಉತ್ತಮ ಗುಣಗಳಿಂದ ಕೂಡಿದ್ದರೂ ಅದು ಷವಾಗಿ ಜನಪ್ರಿಯವಾಗಿದ್ದರೂ ಶುದ್ಧ ಕವಿತಾ ದೃಷ್ಟಿಯಿಂದ ಅದು ಪ, ರನ್ನ, ಕುಮಾರವ್ಯಾಸರ ಕಾವ್ಯಗಳ ಮಟ್ಟಕ್ಕೆ ಬರಲಾರದು. ಶನು ಪ್ರಥಮತಃ ಪಂಡಿತ, ಸಂಪ್ರದಾಯಶರಣ, ಉತ್ತಮ ಸಂಗ್ರಾಹಕ, ಲ್ಲಟ್ಟದ ಕತೆಗಾರ.

ಇ) ರತ್ನಾಕರ ವರ್ಣಿ— ಕನ್ನಡ ಸಾಹಿತ್ಯದ ಐಶ್ವರ್ಯವನ್ನು ಸಿದ ಕೆಲವೇ ಶ್ರೇಷ್ಠ ಕವಿಗಳಲ್ಲಿ ಇವನೊಬ್ಬನು. ಇವನ ಕಾಲ ೧೬ನೆಯ ಮಾನದ ಉತ್ತರಾರ್ಧ. ಹುಟ್ಟಿದುದು ಮೂಡುಬಿದಿರೆಯಲ್ಲಿ, ಕ್ಷತ್ರಿಯ ಶಜನಾದ ಜೈನ ಕವಿಯಿವನು. ತ್ರಿಲೋಕಶತಕ, ಅಪರಾಜಿತೇಶ್ವರ ಶತಕ' ಕರಾಧೀಶ್ವರ ಶತಕ (?), ಹಾಡುಗಳು ಮತ್ತು ಭರತೇಶ ವೈಭವ, ಇವು ನ ಕೃತಿಗಳು.

'ಕಾವ್ಯಾಲಂಕಾರ ಲಕ್ಷಣ ಶಾಸ್ತ್ರದೊಳತಿ ನಿಪುಣ' ನಾದನು ಅಲ್ಪ ಸಮಯದಲ್ಲಿ ಗುರುಗಳಾದ ಚಾರು ಕೀರ್ತಿ ಅವನಿಗೆ ಶ್ರೀ ಶುಚಿ ದೀಕ್ಷೆಯನ್ನು ಕೊಟ್ಟರು ಮೋಕ್ಷ ಗುರು ಹಂಸನಾಥನೆಂದು ಹೇಳಿಕೊಂಡಿದ್ದಾನೆ. 'ದೀಕ್ಷಾ ಗುರು ಚಾರು ಕೀರ್ತಿಯೋಗೀಶ್ವರ| ಮೋಕ್ಷಾ ಗುರು ಹಂಸನಾಥಾ,' 'ದೇಸಿಕಾಗ್ರಣಿ ಚಾರು ಕಿತ್ಯಾಚಾರ್ಯ | ಶ್ರೀ ಶುಚಿ ದೀಕ್ಷೆಯಿತ್ತಾಗ ಆಶಾತಿ ದೂರ ಶ್ರೀ ಗುರು ಹಂಸನಾಥ ಪ್ರಕಾಶದೊಳ್ನಿಲಸಿ ರಕ್ಷಿಸಿದಾ ||' ಎಂಬುದರಿಂದ ಇದು ತಿಳಿಯುವದು.

ರತ್ನಾಕರ ಸುಸಂಪ್ರದಾಯ ಬದ್ಧನಾದ ಜೈನನಲ್ಲವೆಂಬುದು ಗ್ರಂಥಸ್ಥ ಪ್ರಮಾಣ ಹಾಗೂ ಪ್ರಚಲಿತ ಕಥೆಗಳಿಂದ ವಿದಿತವಾಗುವದು. ದೇವ ಚಂದ್ರನ ಹೇಳಿಕೆಗೆ ಇಲ್ಲಿ ಮಹತ್ವವಿದೆ. ಕ್ಷತ್ರಿಯನು ಜೈನನಾಗಿ ವೀರಶೈವನಾಗಿ ಮತ್ತೆ ಜೈನನಾಗಿದ್ದಾನೆ. ಏನೇ ಆದರೂ ರತ್ನಾಕರನು ಶೃಂಗಾರ ಪ್ರೀಯನೂ ಸ್ವತಂತ್ರ ಪ್ರಜ್ಞೆಯುಳ್ಳವನೂ ಆಗಿದ್ದನೆಂದೂ ಅವನ ಜೀವನವು ವಿಚಿತ್ರ ಘಟನೆಗಳಿಂದ ಕೂಡಿ ಅದ್ಭುತ ರಮ್ಯವಾಗಿತ್ತೆಂದೂ ತಿಳಿಯಲು ಆಸ್ಪದವಿದೆ.

ಇವನ ಶತಕಗಳಲ್ಲಿ ಸಾಮಾನ್ಯವಾಗಿ ಶೃಂಗಾರ, ಭಕ್ತಿ, ಜ್ಞಾನ, ವೈರಾಗ್ಯ ಮತ್ತು ನೀತಿಗಳಿವೆ ತ್ರಿಲೋಕ ಶತಕದಲ್ಲಿ ಜೈನ ಮತಾನುಸಾರ ವಾದ ಪ್ರಪಂಚದ ಸೃಷ್ಟಿಶಾಸ್ತ್ರ ಹೇಳಲಾಗಿದೆ. ಅಪರಾಜಿತೇಶ್ವರ ಶತಕದಲ್ಲಿ ನೀತಿ, ವೈರಾಗ್ಯ, ಆತ್ಮ ವಿಚಾರಗಳು ಅಡಕವಾಗಿವೆ. 'ಅಣ್ಣನ ಪದಗಳು' ನೀತಿ ತತ್ವಬೋಧಕವಾಗಿವೆ. ಎಂಭತ್ತು ಸಂಧಿ ಹಾಗೂ ಸುಮಾರು ಹತ್ತು ಸಾವಿರ ಸಾಂಗತ್ಯ ಪದ್ಯಗಳುಳ್ಳ, ಒಂಭತ್ತು ತಿಂಗಳುಗಳಲ್ಲಿ ಬರೆದು ಮುಗಿಸಿದ ಭರತೇಶ ವೈಭವವು ಭರತೇಶನ ಆತ್ಮ ವೈಭವವಾಗುವಂತೆ ರತ್ನಾಕರನ ಕಾವ್ಯ ವೈಭವವಾಗಿದೆ, ಮಹಾಕವಿಯ ಮಹಾಕೃತಿಯಾಗಿದೆ.

ಪೂರ್ವ ಪುರಾಣ, ಆದಿ ಪುರಾಣ, ಚಾವುಂಡರಾಯ ಪುರಾಣಗಳಿಂದ ವಿಷಯವನ್ನು ತೆಗೆದುಕೊಂಡು ಭರತನನ್ನೇ ಕಥಾನಾಯಕನನ್ನಾಗಿ ಮಾಡಿ ಕೊಂಡು ಜೈನ ಮತಕ್ಕೆ ಬಹುಶಃ ಭಾಧೆ ತರದಂತೆ ಭರತೇಶನ ಭವ್ಯಮೂರ್ತಿ ಕಲ್ಪತೆ, ಆದರ್ಶ ಜೀವನದ ಸಂಪೂರ್ಣ ಸಮನ್ವಯ. ಸಾಧನೆಗಳನ್ನು ಕಾವ್ಯ ದಲ್ಲಿ ತಂದ ಕೀರ್ತಿ ರತ್ನಾಕರ ವರ್ಣಿಗೆ ಸೇರುತ್ತದೆ.

ಗಣನೆಯಿಲ್ಲದ ರಾಜ್ಯಸುಖದೊಳೋಲಾಡಿ ಧಾ । ರಿಣಿ ಮೆಚ್ಚಿ ಜಿನ ...ಗಿಯಾಗಿ ಕ್ಷಣಿಕ ಕರ್ಮವ ಸುಟ್ಟು ಜಿನನಾದ ಭೂಭುಜಾ । ಗ್ರಣಿಯ ...ನವಲಾಲಿಸಿರೊ ‖.‖ ಆಗಮವಧ್ಯಾತ್ಮವಳವಟ್ಟು ಶೃಂಗಾರ ತ್ಯಾಗ । ...ಗದ ಮೋಡಿ ಮೆರೆಯೆ ‖ ಭೋಗಿಯೋಗಿಗಳಿದಿ ಜುಮ್ಮು ಜುಮ್ಮನೆ ...ಮು । ದಾಗಿ ಸೊಲ್ಲಿಸುವೆ ನಾಲಿಸಿರೊ ‖ ಎಂಬಲ್ಲಿ ಭರತೇಶನ ಜೀವನ ...ಹೂ ಕವಿಯ ಆತ್ಮವಿಶ್ವಾಸ ವ್ಯಕ್ತವಾಗಿವೆ.

ಭರತೇಶನ ವ್ಯಕ್ತಿತ್ವಕ್ಕೆ ಬಾಧೆ ಬಾರದಂತೆ ಮೂಲವನ್ನು ಅಳವಡಿಸಿ ...ಡಿದ್ದಾನೆ. ತನಗೆ ದೊರೆತ ಸಾಮಗ್ರಿ ಹಾಗೂ ಭರತೇಶ ವೈಭವವನ್ನು ...ಡಿದರೆ ರತ್ನಾಕರನ ಕೈಯಲ್ಲಿ ಮಣ್ಣು ಹೊನ್ನಾಗಿದೆ. ಅದು ಬರೀ ರತ್ನಾ...ನ ಕೈವಾಡವಲ್ಲ, ಆಂತರಿಕ ಶ್ರದ್ಧೆಯ ಮತ್ತು ಸ್ವಾನುಭವದ ವಾಣಿಯಾಗಿ ...ಸೂಸಿದ ಅಪೂರ್ವ ಪ್ರತಿಭೆಯ ಪವಾಡ. ಭರತೇಶ ವೈಭವವು ರತ್ನಾಕರನ ...ನಗೀತೆಯಾಗಿದೆ, ಅವನ ದರ್ಶನ ಪ್ರತೀಕವಾಗಿದೆ.

ಜೈನ ತತ್ವದ ಕನ್ನಡಿಯಲ್ಲಿ ವಿಶ್ವದರ್ಶನದ ಚಿತ್ರವನ್ನು ಕಂಡು ಅದಕ್ಕೆ ...ಗುಣವಾಗಿ ಆದರ್ಶ ಮಾನವನ ಸಮನ್ವಯ ವ್ಯಕ್ತಿತ್ವವನ್ನು ಬಣ್ಣಿಸುವ ...ಲ್ಲಿ ರತ್ನಾಕರನ ಸ್ವಂತಿಕೆಯಿದೆ. ಇಲ್ಲಿ ಆವನ ಅಧ್ಯಾತ್ಮದರ್ಶನದ ...ಷಣೆಯಿದೆ.

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ । ರಚಿರುವರಾನಂತು ಪೇಳೆ‖ ...ಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ । ನಿಚಿತ ಪ್ರಯೋಜನವೆನಗೆ ‖.‖ ...ಬಲ್ಲಿ ಅವನ ವರ್ಣನೆಗಳ ಗುಟ್ಟು ವ್ಯಕ್ತವಾಗಿದೆ. ಅಲ್ಲದೆ ಆಗಮ ...ಧ್ಯಾತ್ಮವಳವಟ್ಟು ಶೃಂಗಾರ ತ್ಯಾಗ ಭೋಗದ ಮೋಡಿಮೆರೆಯೆ ಎಂಬಲ್ಲಿ ...ತ್ನಾಕರನ ಕಾವ್ಯೋದ್ದೇಶ ಉದಿತವಾಗಿದೆ. 'ಸಕಲ ಲಕ್ಷಣವು ವಸ್ತುಕಕೆ ...ರ್ಣಕಕಿಷ್ಟು । ವಿರಳವಾದ ದೋಷವಿಲ್ಲ ‖ ಸಕಲ ಲಕ್ಷಣವಾಗಿ ಬಿರುಸು ...ಮಾಡಿದರೆ ಪು । ಸ್ತಕದ ಬದನೆಕಾಯಹುದು ‖ . ‖ ಎಂಬಲ್ಲಿ ಅವನ ವರ್ಣ...ನ್ಯದ ದೃಷ್ಟಿ ಫಲಿಸಿದೆ. ಅವನ ದೃಷ್ಟಿಯೆಲ್ಲವೂ ಸುಂದರವಾದ, ಕೋಮಲ ...ವಾದ ಕಳಕಳಿಸುವ ಲಲಿತ ಕಡೆಯ ಕಡೆಗಿದೆ.

ಸಮನ್ವಯ ಶೀಲನಾದ ರತ್ನಾಕರನು ತನ್ನ ಕೃತಿಯಲ್ಲಿ ಅಂತರೀಕ ...ನುಭವದೊಡನೆ ತಾನು ಕಂಡ ಬಾಹ್ಯ ಜೀವನದ ವಿವಿಧಾಂಗಗಳನ್ನು

ವರ್ಣಿಸಿದ್ದಾನೆ. ಅವು ಹೆಚ್ಚಾಗಿ ರಾಜಜೀನವಕ್ಕೆ, ಸಂಗೀತ ನೃತ್ಯ ನಾಟಕ ಮುಂತಾದ ಸೌಖ್ಯ ಸಾಧನಗಳಿಗೆ ಸಂಬಂಧ ಪಟ್ಟವು. ಇಲ್ಲಿಯ ಜನ ಜೀವನದ ಚಿತ್ರವು ವಿಜಯನಗರದ ಕಾಲದ ವೈಭವವನ್ನೂ ಕವಿಯ ಪ್ರಾಂತದ ರಸಿಕತೆಯನ್ನೂ ತೋರುತ್ತದೆ.

ಈ) ವೀರಶೈವಾಮೃತ ಪುರಾಣ— ಇದರ ಕರ್ತೃ ಗುಬ್ಬಿಯ ಮಲ್ಲಣಾರ್ಯ ಇದರ ೧೩೬ ಸಂಧಿಗಳಲ್ಲಿ ಏಳು ಸಾವಿರಕ್ಕೆ ಮಿಕ್ಕ ವಾರ್ಧಕ ಷಟ್ಪದಿ ಪದ್ಯಗಳಿವೆ ಶಿವತತ್ವ ಚಿಂತಾಮಣಿಗಿಂತಲೂ ದೊಡ್ಡದಾದ ಇದರಲ್ಲಿ ಶಿವನ ೨೫ ಲೀಲೆಗಳು, ಪುರಾತನ ನೂತನ ಶರಣರ ಕಥೆಗಳು, ವೇದಾಗಮಾದಿ ವಾಕ್ಯಗಳು ಮುಂತಾಗಿ ಅನೇಕ ವಿಷಯಗಳಿವೆ ಇದು ವೀರಶೈವ ವಿಶ್ವಕೋಶವಾಗಿದೆ.

ಲಕ್ಕಣ್ಣ ದಂಡೇಶನ ಪ್ರಭಾವ ಇಲ್ಲಿದೆ ಇದು ಚರಿತ್ರಪ್ರಧಾನವಾಗಿರುವದರಿಂದ ಇದಕ್ಕೆ ಪುರಾಣವೆಂಬ ಹೆಸರು ಬಂದಿರಬೇಕು ಇಲ್ಲಿ ಬಹು ವಿಷಯ ಗರ್ಭಿತವಾದ ವೀರಶೈವ ಧರ್ಮಕೋಶವನ್ನು ರಚಿಸುವ ಉದ್ದೇಶವು ಪ್ರಧಾನವಾಗಿ ಕಂಡುಬರುತ್ತದೆ. ಇದರಲ್ಲಿಯ ಕವಿತಾಶಕ್ತಿ, ಪದ್ಯ ರಚನಾ ಶಕ್ತಿ, ಭಾಷಾ ಶೈಲಿಗಳು ಸತ್ಕವಿಗೆ ಶೋಭಿಸುವಷ್ಟು ಚೆನ್ನಾಗಿವೆ ಎಂದು ಹೇಳಬಹುದು

ಉ) ಮೋಹನ ತರಂಗಿಣಿ— ಇದು ಕನಕದಾಸರ ಶ್ರೇಷ್ಠ ಕೃತಿಯ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ರಚಿತವಾದುದು 'ಕೃಷ್ಣ ಚರಿತೆ' ಎಂದು ಇದನ್ನು ಕರೆದು ಕೃಷ್ಣದೇವರಾಯ ಚರಿತೆಯನ್ನೇ ಇಲ್ಲಿ ಹೇಳಿದಂತಿದೆ ಗಾತ್ರದಲ್ಲಿಯೂ ಗುಣದಲ್ಲಿಯೂ ಇದು ತುಂಬಾ ದೊಡ್ಡ ಗ್ರಂಥ.

ಭಾರತ ಭಾಗವತಗಳಲ್ಲಿ ಬಂದಿರುವ ಕಾಮದಹನ, ಉಷಾ ಅನಿರುದ್ಧ ಪ್ರಣಯ, ಹರಿಹರ ಸಮಾನತೆಯ ಸಂದೇಶದಲ್ಲಿ ಕೃಷ್ಣ ಬಾಣಾಸುರ ಯುದ್ಧದ ಪರ್ಯವಸಾನ ಈ ಕಥಾನಕವನ್ನು ಸಾಂಗತ್ಯ ರೂಪದಲ್ಲಿ ಇಲ್ಲಿ ಬಿತ್ತರಿಸಲಾಗಿದೆ ಕಾವ್ಯ ಮಾರ್ಗದ ೧೮ ವರ್ಣನೆಗಳನ್ನೂ ಹಲವು ರಸಗಳನ್ನೂ ತಂದು ಕನಕದಾಸನು ತನ್ನ ಕವಿತಾ ಶಕ್ತಿಯ ಅಂತಸ್ತನ್ನು ಮೆರೆದಿದ್ದಾನೆ

ಇಲ್ಲಿಯ ವರ್ಣನಾ ಭಾಗಗಳಲ್ಲಿ ವಿಜಯನಗರ ಕಾಲದ ವಿವಿಧ ಜೀವ ಪರ್ಯಾಯವಾಗಿ ಚಿತ್ರಿತವಾಗಿದೆ. ದೀರ್ಘ ವರ್ಣನೆಗಳಿಂದ ಕಥೆ ತಡೆ ಸಾಗುತ್ತದೆ, ವರ್ಣನೆಗಳಲ್ಲಿ ಸ್ವಭಾವೋಕ್ತಿಯಿದೆ. ಅಸಾಧ್ಯ ಅದ್ಭುತ ಶಗಳು ಹೆಚ್ಚಾಗಿವೆ, ಕರುಣ ಮತ್ತು ವೀರಸದ ಪ್ರಸಂಗಗಳು ಚಿತ್ರ ವಾಗಿವೆ.

ಮೋಹನ ತರಂಗಿಣಿಯ ಶೈಲಿ 'ಕೇಳ್ವಗಿರಿದು ತನಿಬೆಲ್ಲದಚ್ಚು,' 'ಜೇನ ದ ತೊರೆ'ಯಾಗಿದೆ. ನಾಣ್ಣುಡಿ, ಒಳ್ಪನುಡಿಗಳೂ ಅನ್ಯ ದೃಶ್ಯಗಳು, ಇದನ್ನು 'ಮೇಲ್ಗತಿ' ಎಂದು ಹೇಳಿಕೊಳ್ಳಲಾಗಿದೆ. ಪಾತ್ರಗಳಲ್ಲಿ ನತೆಯ ಗಾಢ ಸಂಪರ್ಕವಿಲ್ಲ. ಆದರೆ ಸಾಂಗತ್ಯ ರಚನೆ, ವರ್ಣನೆ, ಗಳಲ್ಲಿ ಮಾತ್ರ ಮೇಲ್ಮೆಯಿದೆ.

ಒಟ್ಟನಲ್ಲಿ ಪೌರಾಣಿಕ ಕಥೆಯ ಮೂಲಕ ತಾತ್ಕಾಲೀನ ಜನಜೀವನ ಚಿತ್ರಿಸಿ ಚಿರಂತನಾದ ಭಕ್ತಿ ಸಂದೇಶವನ್ನು ಬೀರಿ ಈ ಕೃತಿ ಸಫಲ ದೆ. ರಾಜಕೀಯ, ಧ್ವನಿ ಮತ್ತು ತಾತ್ಕಾಲೀನ ಚಿತ್ರವುಳ್ಳ ಪೌರಾಣಿಕ ಗಳಲ್ಲಿ ಇದಕ್ಕೊಂದು ಮೇಲಾದ ಸ್ಥಾನವಿದೆ.

ಊ) ರಸರತ್ನಾಕರ— ಇದನ್ನು ರಚಿಸಿದವನು ಸಾಳ್ವನೆಂಬ ಪಂಡಿತ ಇವನ ಕಾಲ ೧೬ನೇ ಶತಮಾನದ ಮಧ್ಯಭಾಗ. ಇವನು ಜೈನ ನುಯಾಯಿಯು. ರಸ ನಿರೂಪಣೆಯಲ್ಲಿ ಮುನ್ನಿನ ಕವಿಗಳಿಗಿಂತಲೂ ಹೆಜ್ಜೆ ಮುಂದೆ ಇಡಲಾಗಿದೆ, ಇಲ್ಲಿ. ಕಾವ್ಯಕ್ಕೆ ರಸವೇ ಆತ್ಮವಲ್ಲವೇ? ರಿಂದಲೇ 'ರಸವಿಲ್ಲದ ಕಾವ್ಯಂ ನೀರಸಮದರಿಂ ಕೃತಿಗೆ ರಸಮೆ ಸಾರಂ' ಬುದಾಗಿ ರಸಪಂಥೀಯನಾದ ಸಾಳ್ವನು ರಸಶಾಸ್ತ್ರವನ್ನು ವಿವರಿಸಿದ್ದಾನೆ.

'ರಸ ರತ್ನಾಕರ' ದಲ್ಲಿ ಸಂಸ್ಕೃತ ಅಲಂಕಾರದಿಂದ ಅಮೃತಾನಂದಿ, ಭಟ್ಟ, ವಿದ್ಯಾನಾಥ, ಹೇಮಚಂದ್ರರ ಮಾರ್ಗವಲ್ಲದೆ 'ನಾಗವರ್ಮ ಕವಿ ಮಾದಿಗಳ ಮಾರ್ಗದಿಂದ ರಸಭಾವದಿಗಳನೆಲ್ಲಂ' ಕನ್ನಡಿಸಲಾಗಿದೆ. ಕವಿ ಮನ 'ಶೃಂಗಾರ ರತ್ನಾಕರ'ವು ಶೃಂಗಾರರಸಕ್ಕೆ ಪ್ರಾಮುಖ್ಯ ಕೊಟ್ಟಿತು. ದಲ್ಲಿ ನವರಸಗಳೂ ನಿರೂಪಿತವಾಗಿವೆ. ಪ್ರಸಿದ್ಧ ಕನ್ನಡ ಕವಿಗಳಿಂದ ದಾಹರಣೆಗಳೂ ಇವಕ್ಕೆಲ್ಲ ಕೊಡಲ್ಪಟ್ಟಿವೆ.

ಋ) ಭರತೇಶ ವೈಭವ— ಇದು ರತ್ನಾಕರ ವರ್ಣಿಯು ಸಿದ್ಧಹಸ್ತ ದಿಂದ ನಿರ್ಮಿತವಾದ ಶ್ರೇಷ್ಠ ಕೃತಿಯಾಗಿದೆ. ಇದು ೮೦ ಸಂಧಿಗಳ ಹಾಗೂ ಸುಮಾರು ೧೦,೦೦೦ ಸಾಂಗತ್ಯ ಗದ್ಯಗಳನ್ನೊಳಗೊಂಡ 'ಮಹಾಕಾವ್ಯ' ವಾಗಿದೆ. ಪೂರ್ವ ಪುರಾಣ, ಆದಿಪುರಾಣ, ಚಾವುಂಡರಾಯ ಪುರಾಣಗಳಿಂದ ವಿಷಯವನ್ನೆತ್ತಿಕೊಂಡಿದ್ದರೂ ಇಲ್ಲಿ ಭರತನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು ಅದನ್ನು ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ಅವುಗಳನ್ನೆಲ್ಲ ಮೀರಿದ ಅದ್ಭುತ ಪ್ರದರ್ಶನದಿಂದ ಚಿತ್ರ ಸಂಪತ್ತಿಯಿಂದ ಈ ಕೃತಿ ಅನನ್ಯ ವಾಗಿದೆ.

ಈ ಕಾವ್ಯದಲ್ಲಿ ವರ್ಣಿತವಾದ ಭರತೇಶ್ವರನ ವೈಭವವು ಜನಯೋಗಿ ಯಾದ ಚಕ್ರವರ್ತಿಯ ಸಮ್ಯಕ್ ಜೀವನದ ತ್ಯಾಗ ಭೋಗಗಳ ಸಮನ್ವಯ ವೈಭವವೆಂಬುದು ಸ್ಪಷ್ಟವಾಗಿದೆ. ಇಲ್ಲಿ ಭೋಗ ವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿ ವಿಜಯ, ಮೋಕ್ಷ ವಿಜಯ ಎಂಬ ಐದು ಭಾಗಗಳಿವೆ. ಇವೇ ರತ್ನಾಕರನ 'ಪಂಚಕಲ್ಯಾಣಗಳಾಗಿವೆ.

ಭೋಗ ವಿಜಯದಲ್ಲಿ ಭರತ ಚಕ್ರವರ್ತಿಯ ಪೂರ್ವ ಜೀವನವನ್ನು, ಭೋಗ ಜೀವನವನ್ನು ಬಿಡಿಬಿಡಿಯಾಗಿ ಚಿತ್ರಿಸಲಾಗಿದೆ. ಈ ಭಾಗವು ರತ್ನಾಕರ ವರ್ಣಿಯ ಮಹಾ ಕವಿತ್ವಕ್ಕೆ ನಿದರ್ಶನವಾದ, ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನೂತನವಾದ ರಸಸೃಷ್ಟಿ ಭರತೇಶನ ಉನ್ನತ ವ್ಯಕ್ತಿತ್ವಕ್ಕೆ ಬಾಧೆಯುಂಟು ಮಾಡುವ ಸನ್ನಿವೇಶ ಮೂಲದಲ್ಲಿ ಬಂದರೆ ಅದನ್ನಿಲ್ಲಿ ಬದಲಿಸಿಕೊಳ್ಳಲಾಗಿದೆ.

ಭರತೇಶ್ವರನೇ ಈ ಕಾವ್ಯದ ನಾಯಕ, ರತ್ನಾಕರನು ಕಂಡ ಆದರ್ಶ ಮಾನವನ ಸ್ವಪ್ನರೂಪಕ. ಅದೇ ಜೈನ ತತ್ವದ ಕನ್ನಡಿಯಲ್ಲಿ ವಿಶ್ವದರ್ಶನದ ಚಿತ್ರವನ್ನು ಕಂಡು ಅದಕ್ಕೆ ಅನುಗುಣವಾಗಿ ಆದರ್ಶ ಮಾನವನ ಸಮನ್ವಯ ಸಮ್ಯಕ್ತ್ವವನ್ನು ಬಣ್ಣಿಸಲಾಗಿದೆ. ಇಲ್ಲಿ ಭರತೇಶನು ರಾಜಯೋಗಿ ಜಿನ ಯೋಗಿ, ತ್ಯಾಗಿ, ಭೋಗಿ, ರಸಿಕ, ವಿರಕ್ತ ಇವೆಲ್ಲ ವಿವರಗಳಲ್ಲಿ ಚಿತ್ರಿತವಾಗಿವೆ. ಎಲ್ಲ ಕಡೆಗೂ ಭರತೇಶನ ಅಲೌಕಿಕ ವ್ಯಕ್ತಿತ್ವವೇ ಬೆಳಗುತ್ತದೆ.

ಭರತೇಶನ ಸೌಂದರ್ಯ ಮತ್ತು ಕ್ಷಾತ್ರ ತೇಜವನ್ನು ವರ್ಣಿಸಿದ ಮೇಲೆ ಅವನ ಗಾಂಭೀರ್ಯವನ್ನು ನೋಡುವ ಕಿವಿ ಹತ್ತೆಂಟಕ್ಕೊಮ್ಮೊಮ್ಮೆ ಮಾತಾ. ಡುವ ನುಡಿವ ವಿಡಾಯು', 'ಏಕೆ ನುಡಿಯನೋ ಇನ್ನೊಮ್ಮೆ ಯೆಂಬಂತೆಂದು

ಕದೊಳೆಸೆದನಾರಾಯಾ', ಹೀಗೆ ವಿವರಿಸಿ 'ಭೋಗದೊಳಿದ್ದು ಯೋಗವ ಮಾಡಿ ಭವಮುಕ್ತರಾಗುವರಾರು ನಿನ್ನಂತೆ' ಎಂದು ಅವನ ವ್ಯಕ್ತಿತ್ವದ ವಾಳವನ್ನು ಸೂಚಿಸಲಾಗಿದೆ.

ಆರೋಗಣೆ ಸಂಧಿಯಿಂದ ಹಲವಾರು ಸಂಧಿಗಳಲ್ಲಿ ರಾಣಿವಾಸದೊಡನೆ ಅವನ ಊಟ, ಬೇಟೆ, ಸಂಗೀತ, ನೃತ್ಯ, ಸರಸ ಎಲ್ಲವೂ ಉಜ್ವಲವಾದ ವರ್ಣನೆಯ ವಿಷಯವಾಗಿ ಅಲೌಕಿಕ ರಸಿಕತೆಯನ್ನು ಇದಿರು ನಿಲ್ಲಿಸುತ್ತದೆ. ಕಂಗಳಿಂದನ್ನವ ನೋಡಿ ಜ್ಞಾನದೊಳಂತರಂಗದೊಳಾತ್ಮನ ನೋಡಿ ತುಂಗ ಭಾವದೊಳನ್ನ ಪಾನವ ಹಂಸನಾಥಂಗೆ ಸಮರ್ಪಣೆಗೈದಾ' ಎಂಬಲ್ಲಿ ಸಮರ್ಪಣ ಭಾವವಿದೆ.

ಉಪ್ಪರಿಗೆ ಸಂಧಿಯಲ್ಲಿ ಅರಸಿಯರು ನಲ್ಗಾಣಿಕೆಗಳನ್ನರ್ಪಿಸುತ್ತಾರೆ ಇಲ್ಲಿ ಶೃಂಗಾರ ಶರಧಿ ಉಕ್ಕುತ್ತದೆ. ಇಲ್ಲಿ 'ದುರ್ಗದಂತೊಮ್ಮೆ ಗ್ರಾಮಗಳಂತೆ ಹೂವಿನ ಕೂರ್ಗಣೆಯಂತಿಹನೊಮ್ಮೆ | ಸ್ವರ್ಗವೇ ಪುರುಷನಾದಂತೆ ಹೆಂಗಳಿಗೆ ಸಂಸರ್ಗಸುಖವ ತೋರುತಿಹನು |' 'ಅಂಬರದೊಳಗಿದ್ದ ಸೂರ್ಯನೊಬ್ಬನು ಜಲತುಂಬಿದ ಹಲವು ಕುಂಭದೊಳು | ಬಿಂಬಿಸುವಂತೆಲ್ಲ ಪೆಂಗಳೆದೆಯೊಳೀತ ನಿಂಬುಗೊಂಡಿಹ ಪರಿಯೇನು | ಎಂದು ಕೇಳುವಂತಿದೆ. ಅವನ ಸಮಾನ ಪ್ರೇಮ ಒಟ್ಟಿನಲ್ಲಿ ಭರತೇಶನು 'ಉಂಡುಪವಾಸಿ, ಬಳಸಿ ಬ್ರಹ್ಮಚಾರಿ, ಘೂಮಂಡಲವಿದ್ದು ನಿಸ್ಸಂಗ | ಮಂಡೆ ಬೆಳೆದು ಮನಬೋಳಾದ ತಪಸಿ |' ಯಾಗಿದ್ದನು.

ಮನ್ನಣೆಯ ಸಂಧಿಯಲ್ಲಿ ಅವನು ಧ್ಯಾನಸ್ಥನಾಗಿದ್ದರೆ ಸರಸ ಸಂಧಿಯಲ್ಲಿ ಭರತೇಶ ಕುಸುಮಾಜಿಯರ ದಿವ್ಯ ಪ್ರಣಯವು ಸುರತದಲ್ಲಿ ನೆನೆಕೊನೆಯಾಗುತ್ತದೆ. ಸಂಗೀತದಲ್ಲಿ ಫಲಿಸುತ್ತದೆ., 'ಒಳಗುಮ್ಮಿದಾನಂದರಸ ತನು ತುಂಬಿ ತುಳುಕಿ' ಹೊರಸೂಸುತ್ತದೆ ಆನಂದ ಸಾಗರದ ತೊಂಬನುರ್ಚಿದಂತೆ.

ಬಾಹುಬಲಿಯೊಡನೆ ಯುದ್ಧ ಮಾಡದೆ 'ಸ್ವಕುಂಬ ದ್ರೋಹವ ಮಾಳ್ಪುದು ಗುಣವೇ,' 'ನಿಷ್ಕಾರಣ ಕದನವ ಜನಪರೆಸಗುವರೆ', ಮೊದಲಾದ ಮಾತುಗಳಲ್ಲಿಯೇ ಗೆಲ್ಲುತ್ತಾನೆ. ಗೆದ್ದು ಸೋಲುತ್ತಾನೆ. ಬಾಹುಬಲಿಯೂ ಸೋತು ಗೆಲ್ಲುತ್ತಾನೆ. ಇದು ರತ್ನಾಕರನ ಪವಾಡವೇ ಸರಿ.

ಇಲ್ಲಿ ವರ್ಣನೆಗೆ ಇತಿ ಮಿತಿಯಿಲ್ಲ. ಶೃಂಗಾರ ವರ್ಣನೆ ಭೋಗ ವಿಜಯದಲ್ಲಿ ಪರಾಕಾಷ್ಠೆಯನ್ನೂ ಮುಟ್ಟಿದೆ. ಭರತೇಶನ ರಾಜವೈಭವ, ವಿಜಯ ಶಾಲಿತ್ವ, ಶೃಂಗಾರ ರಸಿಕತೆ, ಆಧ್ಯಾತ್ಮ ನಿಷ್ಠೆ, ಜಿನಭಕ್ತಿ ಇವೇ ವರ್ಣ್ಯ ವಿಷಯಗಳಾಗಿವೆ. ಸಂಗೀತ ವರ್ಣನೆ ತಿರುತಿರುಗಿ ಬರುತ್ತದೆ.

ರತ್ನಾಕರನ ಶೈಲಿ ಛಂದಸ್ಸುಗಳ ಅದ್ಭುತವಾದ ಸಂಪತ್ತಿಯನ್ನೂ ಸಹಯೋಗವನ್ನೂ ಎಷ್ಟು ವರ್ಣಿಸಿದರೂ ಸಾಲದು. ಜಾನಪದವಾದ ಸಾಂಗತ್ಯ ದಾಟಿ ಮತ್ತು ಅಚ್ಚಗನ್ನಡ ದೇಸಿ ಅವನ ಪ್ರತಿಭೆಯ ಪರುಷದಿಂದ ಹೊಳೆಹೊಳೆಯುವ ಹೊನ್ನಾಗಿದೆ. ಅವನ ಬರೆವಣಿಗೆಯ ಓಘದಲ್ಲಿ ಸರಸ್ವತಿಯ ಪ್ರಸನ್ನತೆಯಿದೆ, ನಿರ್ಮಲತೆಯಿದೆ. ದರ್ಶನದ ಉನ್ನತಿ, ವ್ಯಕ್ತಿಯ ಉದಾತ್ತತೆ ಇವನ್ನು ಚಿತ್ರಿಸುವ ಭಾಷೆ ಮತ್ತು ನುಡಿಯುವ ಛಂದ ಎಷ್ಟು ಸರಳವೋ ಅಷ್ಟು ಭವ್ಯವಾಗಿವೆ. ಭರತೇಶ ವೈಭವವು ಮಹಾಕವಿಯ ಮಹಾಕಾವ್ಯವಾಗಿದೆ.

(೫೦) ಚೆನ್ನಬಸವ ಪುರಾಣ— ಇದೊಂದು ಗಣ್ಯವಾದ ಚರಿತ್ರ ಗ್ರಂಥ. ವಿರುಪಾಕ್ಷ ಪಂಡಿತನು ಇದರ ಕೃರ್ತ. ಚೆನ್ನಬಸವೇಶ್ವರನ ಚರಿತ್ರೆಗಾಗಿಯೇ ಮೀಸಲಾದ ಮೊದಲ ಗ್ರಂಥವಿದು. ಇದು ೫ ಕಾಂಡ, ೬೩ ಸಂಧಿ, ೨೯೦೬ ವಾರ್ಧಕ ಷಟ್ಪದಿಗಳ ಹಿರಿಯ ಹೊತ್ತಿಗೆ 'ವೀರಶೈವಾಮೃತ ಪುರಾಣ'ದಂತೆ ಇದು ವೀರಶೈವ ವಿಶ್ವಕೋಶವಾಗಿದೆ.

'ಕರ್ನಾಟಕ ವ್ಯಾಕರಣ ಛಂದಸ್ಸಲಂಕಾರ ಶಬ್ದಂಗಳ ಆನುಗೊಳಿಸಿ ವರ್ಣಕಕ್ಕಿಲ್ಲ ಲಕ್ಷಣವೆಂಬ ನಾಣ್ಣುಡಿಯನಲ್ಲೆನಿಸಿ ಪೇಳ್ದ ವಿನೂತನ ಕಾವ್ಯಮಂ ಜಗತ್ಸೇವ್ಯಮಂ ಕಿವಿಗೊಟ್ಟು ಕೇಳ್ವುದೆಲ್ಲಾ ಸುಜನರು' ಎಂದು ಪ್ರೌಢ ಮಹಾಕಾವ್ಯದ ೧೮ ವರ್ಣನೆ, ನವ ರಸಗಳ ನಿರೂಪಣೆಗಳಿಗೂ ಕವಿಯು ಇಲ್ಲಿ ಅವಕಾಶವನ್ನು ಕಲ್ಪಿಸಿಕೊಂಡಿದ್ದಾನೆ.

ಚೆನ್ನ ಬಸವೇಶ್ವರನ ಚರಿತ್ರೆಯಿಂದ ಪ್ರಾರಂಭವಾಗಿ ಶಿವಲೀಲೆಗಳು, ಇತರ ಶರಣರ ಚರಿತೆ, ವೀರಶೈವ ಸಿದ್ಧಾಂತ ಸಂಪ್ರದಾಯ ಮುಂತಾಗಿ ಅನೇಕ ವಿಷಯಗಳನ್ನೊಳಗೊಂಡು ಇದು ವೀರಶೈವ ಮತದ ಕೈಪಿಡಿಯಾಗಿ ಪರಿಣಮಿಸಿದೆ. ಚೆನ್ನಬಸವನು ಸಿದ್ಧರಾಮುನಿಗೆ 'ಪರಶಿವ ತತ್ವಮಂ ತಿಳಿಸಿ ದೀಕ್ಷೆಯನ್ನಿತ್ತ ಪರಮ ಸತ್ಕಥೆ' ಎಂದು ಮೊದಲ ಪದ್ಯದಲ್ಲಿಯೇ ಹೇಳಲಾಗಿದೆ.

ಲ್ಲಿಗೆ ಶಿವತತ್ವ ತಿಳಿಸುವಾಗ ಎಲ್ಲ ಮತೀಯ ವಿಷಯಗಳೂ ಬರುವದು ಸ್ವಾಭಾವಿಕವೇ ಆಗಿದೆ.

ಮತೀಯ ಪ್ರಪಂಚವನು ಪ್ರಾಢಕಾವ್ಯದ ಸರಣಿಯಲ್ಲಿ ಹೇಳಿದ ನೂತ ನತೆಯಿಲ್ಲಿದೆ 'ಶಿವ ಕವಿ, ಸದಮಲಜ್ಞಾನಿ, ಸಕಲಾಗಮ ಪುರಾಣ ಕೋವಿದ ನಾದ' ವಿರುಪಾಕ್ಷ ಪಂಡಿತನು ಈ 'ಮಹಾಕೃತಿಯಲ್ಲಿ, ಒಂದು ಪವಾಡ ವನ್ನೇ ಮೆರೆದಿದ್ದಾನೆ. ಇಲ್ಲಿ ಮೇಲಾದ ಪಾಂಡಿತ್ಯವಿದೆ, ಕವಿತ್ವವಿದೆ, ಸಮಯ ನಿಷ್ಠೆಯಿದೆ ಶೈಲಿ ಸೌಷ್ಟವವಿದೆ. 'ಕಡುಜಾಣರಂ ಮೆಚ್ಚಿಸುವ ವಾಗ್ವಿಲಾಸ ವಂತೂ ಇದ್ದೇ ಇದೆ.

ವಿರುಪಾಕ್ಷ ಪಂಡಿತನು ಮತ ಮತ್ತು ಕಾವ್ಯ ಎರಡೂ ದೃಷ್ಟಿಯಿಂದ ತುಂಬ ಸಾಂಪ್ರದಾಯಕನು ಅವನ ಸೌಂದರ್ಯ ಪ್ರಜ್ಞೆಗಿಂತ ಅವನ ಮತಾ ಸಕ್ತಿ, ಪಾಂಡಿತ್ಯ ಪ್ರೌಢಿಮೆಗಳು ಹೆಚ್ಚು ಬಲಿಷ್ಠವಾಗಿವೆ. ಲಕ್ಷ್ಮೀಶನಿಗೂ ವಿರುಪಾಕ್ಷ ಪಂಡಿತನಿಗೂ ಸಾಕಷ್ಟು ಸಾಮ್ಯಗಳು ಕಂಡುಬಂದಿವೆ.

ಪ್ರಶ್ನೆ ೨೨— ಟಿಪ್ಪಣೆ ಬರೆಯಿರಿ— (ಅ) ರಾಜಶೇಖರ ವಿಲಾಸ (ಆ) ಶಬರ ಶಂಕರ ವಿಲಾಸ (ಇ) ಅಪ್ರತಿಮ ವೀರ ಚರಿತೆ (ಈ) ಚಿಕ್ಕ ದೇವರಾಯ ವಂಶಾವಳಿ (ಉ) ಅನುಭವಾಮೃತ (ಊ) ಚಿತ್ರವಿಂದಾ ಗೋವಿಂದ (ಋ) ಹದಿಬದೆಯ ಧರ್ಮ (ೠ) ಸರ್ವಜ್ಞ (ಎ) ಸಂಚಿಯ ಹೊನ್ನಮ್ಮ.

ಉತ್ತರ-(ಅ) ರಾಜಶೇಖರ ವಿಲಾಸ— ಚಿಕ್ಕದೇವರಾಯನ ಕಾಲದ ಕನ್ನಡ ಸಾಹಿತ್ಯಕ್ಕೆ 'ರಸಗಾನ'ವನ್ನು ಬರೆಯಿಸಿದಶ್ರೇಷ್ಠಕವಿ ಷಡಕ್ಷರ ದೇವನು ಇದರ ಕವಿಯು. ಗಿಡಕ್ಕೆ ಎಲೆಗಳು, ಹೂಗಳು ಬರುವಂತೆ ಕವಿಗೆ ಕವಿತೆ ಬರಬೇಕೆಂಬ ಕೀಟ್ಸ ಕವಿಯ ಉಕ್ತಿ ಇವನಿಗೆ ಚನ್ನಾಗಿ ಅನ್ವಯಿಸುತ್ತದೆ. ಇಲ್ಲಿ ಮಲ್ಲಣಾರ್ಯನು 'ಭಾವ ಚಿಂತಾರತ್ನದಲ್ಲಿ ವರ್ಣಕವಾಗಿ ಹೇಳಿದ ಕಥೆಯನ್ನು ವಸ್ತುಕವಾಗಿ ಹೇಳಲಾಗಿದೆ, ೧೪ ಅಶ್ವಾಸಗಳೂ ವರ್ಣನಾಮಯವಾಗಿವೆ.

ಮೃದುಮಧುರಪದ ವಿಲಾಸಾ | ಸ್ಪದ ರಸವಿಸರ ಪ್ರಕಾಶ ಕರ್ನಾಟಕ ಕವಿ || ತ್ವದೊಳೊರ್ವನೆ ಪೆಸರ್ವಡೆದ | ಗ್ಗದ ಹರಿಹರನ ಉದಿತ ಮಾರ್ಯಗರ್ಗ ದಿಂದಿದನೊಳೆ ವೆಂ || || ಎಂಬ ತನ್ನದು ಹರಿಹರ ಮಾರ್ಗವೆಂದು ಸ್ಪಷ್ಟವಾಗಿ

ಸಾಗಿದ್ದಾನೆ ಹರಿಹರನನ್ನು ಅನುಸರಿಸಿ ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ತಿಳಿಸುವ ಶಿವಭಕ್ತನ ಕಥೆಯನ್ನು ಆಯ್ದುಕೊಂಡಿದ್ದಾನೆ.

ಇಲ್ಲಿರುವ ಅಲ್ಪ ಕಥೆಯ ಹಂದರದ ಮೇಲೆ ವರ್ಣನೆಯ ಬಳ್ಳಿಯನ್ನು ದಾಂಗುಡಿಬಿಡಿಸಿದ್ದಾನೆ. ಕಥೆ ಮೆಲ್ಲನೆ ಸಾಗುತ್ತದೆ. ತಿರುಕೊಳವಿನಾಚಿಯ ಪ್ರಲಾಪದ ಕರುಣ ರಸಮಯವಾದ ಸನ್ನಿವೇಶವೊಂದನ್ನು ಬಿಟ್ಟರೆ ಉಳಿದುದೆಲ್ಲವೂ ಶಿವ ಸಮಯ, ಇಲ್ಲವೆ ಕವಿ ಸಮಯ, ಉತ್ಪ್ರೇಕ್ಷೆ, ಪ್ರೌಢಿಮೆ.

ಈ ಕಾವ್ಯದಲ್ಲಿ ಶೃಂಗಾರ ಕರುಣ ಭಕ್ತಿರಸಗಳು ತಲೆದೋರಿವೆ. ಅದ್ಭುತ ರಸವು ಸಹ ಕರುಣೆಯಲ್ಲಿ, ಭಕ್ತಿಯಲ್ಲಿ ಮುಚ್ಚಿಹೋಗಿವೆ. ಶೃಂಗಾರವೇ ಪ್ರಮುಖವೆಂದೆನಿಸಿದರೂ ಭಕ್ತಿಯೇ ಇದರ ಜೀವ, ಜೀವಾಳ, ಪಂಚಾಕ್ಷರೀ ಮಹಿಮೆಯೇ ಇಲ್ಲಿ ಮುಖ್ಯ.

ತಿರುಕೊಳವಿನಾಚಿಯ ಸಂದರ್ಭವು ಹೃದಯಸ್ಪರ್ಶಿಯಾಗಿದೆ. ಕರುಣರಸ ಇಲ್ಲಿ ಕೋಡಿಯಾಗಿ ಹರಿದಿದೆ. ಇಲ್ಲಿ ಬಳಸಿದ ರಗಳೆ ಅದನ್ನು ತೀವ್ರಗೊಳಿಸಿದೆ. 'ಎಲೆಸುಕುಮಾರ ಶಂಕರ ಕುಮಾರಕಬಾ ಮದೀಯ ಲೋಚನೋತ್ಪಲ ರಜನೀಶ ನಿನ್ನ ಮುಖದಾವರೆಯುಂ ಮಿಗತೋರದೆತ್ತ ಪೋದೆ' ಎಂದು ಪ್ರಾರಂಭಿಸುತ್ತಾಳೆ. ತಿರುಕೊಳವಿನಾಚಿ; 'ತನೂಭವನೆಲ್ಲಿದ ನೆಲ್ಲಿದ ನಿನಿವಾತಿನ ನೀರನೆಲ್ಲಿದಂ ಮೆಲ್ನಗೆಯಿಂಪಿನ ಸೊಬಗನೆಲ್ಲಿದಂ ಚೆಲ್ವಿನ ಕಣಿಯೆಲ್ಲಿದನೋ ಮನ್ಮನೋಂಬುಜ ಹಂಸಂ' ಎಂದು ಹಲುಬುತ್ತ ಸತ್ತ ಮಗನನ್ನು ನೋಡಿ ಆಡವಿಗಿಚ್ಚುಗೊಂಡ ಪುಲ್ಲೆಯಂತೆ ಹರಣಂ ಹಮ್ಮೈಸಿ ಪರ್ದೆರಗಿದುರಗಿಯಂತೆ ಮಿಡುಮಿಡನೆ ಮಿಡುಕು ಕಡಿವಡೆದೆಳೆವಳ್ಳಿಯಂತೆ ಕಂದಿ ಕುಂದಿ ....'ಶೋಕಿದಳು.

ಇವೆಲ್ಲ ಕಲ್ಪನೆ ಭಾವನೆಗಳು ಸಹಕರಿಸಿ ಬಂದು ಉತ್ಕಟ ರಮ್ಯಚಿತ್ರವನ್ನು ಒದಗಿಸಿರುತ್ತವೆ. ಇಲ್ಲಿ ತಾಯಿಕರುಳಿನ ಸಹಜವಾದ ಮೊರೆಯಿದೆ. ಅರಸ, ಅರಸುಗುವರ, ಮಂತ್ರಿ, ಮಂತ್ರಿಸುತ, ಹೀಗೆಯೇ ಎಲ್ಲರೂ ತಮ್ಮ ರುಂಡಗಳನ್ನು ಕೊಯ್ದಿಡುತ್ತ ಹೊರಟಾಗ ಭಕ್ತಿರಸ ಉಕ್ಕುತ್ತ ಹೊರಟುದು ಸವಾಡವೇ ರಾಜನ ಉದಾತ್ತ ವ್ಯಕ್ತಿತ್ವ ಎಲ್ಲೆಲ್ಲಿಯೂ ವ್ಯಕ್ತವಾಗಿದೆ.

ಸುರನದಿಯಲ್ಲಿ ಮಿಂದು ಸುರಮಾರ್ಗಿ ಕಚೌಘಮನ್ನೆದೆ ಬಿರ್ಚಿವಿ
ಸ್ಫುರಿತ ತದುತ್ತ್ರತಾಪತ ಪನಾತ ಪದಾರಿಸಿ ಸೂಡಿ ತಾರಕೋ।
ತ್ಕರ ಕುಸುಮಂಗಳಂ ತಳೆದು ಚಂದ್ರಿದೆ ಎಂಬ ವಿಶಾಲ ಚೇಲಮಂ
ಧರಣಿಪ ಕೀರ್ತಿಕಾಂತೆ ವಿಧುದರ್ಪಣಮಂ ನೆರಿನಿಂದು ನಿಟ್ಟಾಪಳ್ ॥

..ಬ ರಾಜನ ಕೀರ್ತಿಯ ಭವ್ಯ ಕಲ್ಪನೆಯಿದೆ. ಈ ಕಾವ್ಯದಲ್ಲೆಲ್ಲ ವಿದಗ್ಧತೆ, ..ತ್ಕೃತಿಗಳ ಪ್ರಾಬಲ್ಯವಿದೆ, ಪ್ರತಿಭೆಯ ಉಜ್ವಲತೆಯಿದೆ. ವರ್ಣನಾಶಕ್ತಿ ..ನೆಯ ಕುದರೆಯನ್ನೇರಿ ಬೇಕಾದಲ್ಲಿ ನಿರ್ಭಯವಾಗಿ, ನಿರರ್ಗಳವಾಗಿ ..ಪಾಳಿಸುತ್ತದೆ. ಕಂದವೃತ್ತ ಗದ್ಯಗಳಲ್ಲಿ ಪರಿಪಕ್ವವಾದ ರಚನಾ ಸಾಮರ್ಥ್ಯ .. ಮಾರ್ದವ ಮಾಧುರ್ಯವಿದೆ.

ಆ) ಶಬರಶಂಕರವಿಲಾಸ– ಇದು ಷಡಕ್ಷರದೇವನ, ಶಿವಲೀಲೆಯನ್ನು ..ರ್ಣಸುವ ೫ ಅಶ್ವಾಸಗಳ ಚಿಕ್ಕ ಗ್ರಂಥ. ಪಾಶ–ಪತಾಸ್ತ್ರ ಪಡೆಯಲು ಅರ್ಜು ..ನು ಶಿವನನ್ನು ಕುರಿತು ತಪಸ್ಸು ಮಾಡಿದುದು, ಬೇಡನಾಗಿ ಶಿವನು ಬಂದು ..ನನ್ನು ಪರೀಕ್ಷಿಸಿ ವರವನ್ನು ನೀಡಿದುದು ಇಲ್ಲಿಯ ಕಥೆಯಾಗಿದೆ. ಭಾರವಿ, ..ಪ, ಕುಮಾರವ್ಯಾಸ, ವಿರೂಪಾಕ್ಷ ಪಂಡಿತರ ಕಾವ್ಯಗಳಲ್ಲಿಯೂ ಈ ಕಥೆ ..ದಿದೆ. ಇಲ್ಲಿ ಮುಖ್ಯವಾಗಿ ಶೈವ ಸಂಪ್ರದಾಯದ ಮೂಲವನ್ನು ಅನುಸರಿಸ ..ಾಗಿದೆ. ಆದರೂ ಕಥೆಯ ವಿವರಗಳಲ್ಲಿ ಕುಮಾರವ್ಯಾಸ ಭಾರತಕ್ಕೂ ಶಬರ ..ಕರ ವಿಲಾಸಕ್ಕೂ ಹೋಲಿಕೆಯಿದೆ. ಆದರೆ 'ಈ ಹೋಲಿಕೆಗಳು ಹೊರ ..ಯ ಹೋಲಿಕೆಗಳೆಂದು ಹೇಳಬಹುದೇ ಹೊರತು ಒಳದಿರುಳಿನವಲ್ಲ' ಎಂದು .. ಬಸವನಾಳರು ಹೇಳಿದ್ದಾರೆ.

ಇಲ್ಲಿ ವರ್ಣನಾ ವಿಲಾಸವೇ ಅಧಿಕವಾಗಿದೆ. ಶಬ್ದಶ್ಲೇಷೆ, ಸಂಸ್ಕೃತ ..ಹವು ಸಾಕಷ್ಟಿದೆ. ಕಿರಾತ ಅರ್ಜುನರ ಸಂದರ್ಶನ, ಸಂವಾದ, ಸಂಗ್ರಾಮ, ..ಮರಸ್ಯ ಇವುಗಳೇ ಈ ಕಾವ್ಯದ ಜೀವಾಳ-ಅರ್ಜುನನ ಪಾತ್ರದಲ್ಲಿ ತಪೋ ..ಷ್ಠೆ, ಶೌರ್ಯ, ಸ್ವಾಭಿಮಾನ, ಶಿವಭಕ್ತಿ ಇವುಗಳನ್ನು ಚನ್ನಾಗಿ ಚಿತ್ರಿಸ ..ಾಗಿದೆ. ಶಿವನೇ ಅರ್ಜುನನನ್ನು ಮುಕ್ತಕಂಠದಿಂದ ಹೊಗಳಿದ್ದಾನೆ.

ಕಿರಾತನು ಶಿವನೆಂದು ಗೊತ್ತಾದೊಡನೆ 'ಪಡೆದೆರೆದಂತೆ ತಾರಿತೆರ್ದೆ ಪವ್ವನೆ, ..ಮ್ಮನೆ ಮೆಯ್ಮವಿರ್ ಪೊದಳ್ದಿಡಿಕಿರಿದಿತ್ತು' ಎಂಬುದನೂ 'ಉಳಿವೆಳಗು

ಸಂಜೆ ನಸುಮಾರ್ಬಳರ್ದಂಬಕದಂತೆ ತಿಳಿವುರಾಗಂ ನೆಗಳ್ದಮ್ಮಳಮನೊಳ ಕೊಂಡ ಒಗೆಯಿಂ ತಳವೆಳಗಾಗುತ್ತೆ ಪಾರ್ಥನಂದಿದೆಂದಂ' ಎಂಬಲ್ಲಿ ಮಾತು ಮಾಣಿಕ್ಯವಾಗಿದೆ.

ಚಮತ್ಕೃತಿ ಪ್ರಧಾನವಾದ ಸ್ವತಂತ್ರ ಕಲ್ಪನೆಗಳ ಸನ್ನಾಹದಲ್ಲಿ ಷಡಕ್ಷರಿಯದು ಎತ್ತಿದ ಕೈ. ಇವನ ಕಾವ್ಯ ಮಂದಿರವು ನೂರಾರು ಚಿತ್ರಕಾರರಿಗೆ ಚಿತ್ರಗಳನ್ನು ಒದಗಿಸಬಲ್ಲ ಸಂಪತ್ತಿಯನ್ನೊಡಗೊಂಡಿದೆ.

ವಿಳಸ್ಮಂದಾರ ಭೂಜಾತದ ಬಳಿನೆಳಲೊಳ್ ನಿಂದು ಚಂದ್ರಾಶ್ಮ ಪೀಠ |
ಸ್ಥಳದೊಳ್ ಪೂಗೊಂಚಲೊಂದಂ ಪಿಡಿದಡಿಗಡಿಗಾಘ್ರಾಣಿ
ಸೊತ್ತೊಲ್ಮೆಯಿಂಚಂ |
ದಳಿರುದ್ಯತ್ತಾಲವೃಂತಂಬಿಡಿದು ಪದಪಿನಿಂ ಬೀಸೆ ಕಲ್ಯಾಣಿ ತಾಂ ಕಣ್ ||
ಗೊಳಿಸಿರ್ದ ನೋಡುತಂ ಬೆಂಟೆಯ ಪೊಸಪರಿಯಂ ಲೀಲೆಯಿಂ
ಭಾಳನೇತ್ರಂ ||

ಎಂಬುದು ತುಂಬ ರಮಣೀಯವಾಗಿದೆ.

ಇಲ್ಲಿ ಚಂಪೂ ಶೈಲಿಯ ಯೆಡೆಯಿದ್ದರೂ ಪ್ರಸಾದಕ್ಕೆ ಬಾಧೆಯಿಲ್ಲ ಸಂಸ್ಕೃತ ಮಾರ್ಗದ ಬಿಗುವಿಗೂ ಕನ್ನಡ ದೇಸಿಯ ಸರಲತೆಗೂ ಅವೆರಡರ ಲಲಿತವಾದ ಮಿಶ್ರಣಕ್ಕೂ ಒಳ್ಳೆಯ ಉದಾಹರಣೆಗಳನ್ನು ಇಲ್ಲಿ ಕಾಣಬಹುದು. ಇದೊಂದು ವಿದಗ್ಧ ಕಾವ್ಯ. ಇದರಲ್ಲಿ ಷಡಕ್ಷರಿಯ ಕಲ್ಪನಾಶಕ್ತಿ, ರಚನಾ ಶಕ್ತಿ ಮತ್ತು ಶಬ್ದ ಶಕ್ತಿಗಳು ತಮ್ಮ ತಮ್ಮ ಮೇಳ್ಮೆಯನ್ನು ಸಾಧಿಸಿ ರಸಿಕರನ್ನು ಬೆರಗುಗೊಳಿಸುತ್ತವೆ.

ಇ) ಅಪ್ರತಿಮ ವೀರ ಚರಿತ್ರೆ– ಸಂಸ್ಕೃತ ಕನ್ನಡ ಪಂಡಿತನಾದ ತಿರುಮಲಾರ್ಯನು ರಚಿಸಿದ ಗ್ರಂಥವಿದು. ಚಿಕ್ಕದೇವರಾಯನ ಆಸ್ಥಾನದಲ್ಲಿ ಬರೆದ ಕಾವ್ಯವಿದು. ಇದರಲ್ಲಿ ಚಿಕ್ಕದೇವರಾಯನೇ ಪರ್ಯಾಯವಾಗಿ ಕಾಣಿಸಿಕೊಂಡಿದ್ದಾನೆ, ಅವನೇ ವಸ್ತು, ಅವನೇ ನಾಯಕ.

'ಕುವಲಯಾನಂದ'ವನ್ನು ಮುಖ್ಯವಾಗಿ ಅನುಸರಿಸಿ ಬರೆದ ಅರ್ವಾಚೀನ ಅಲಂಕಾರ ಗ್ರಂಥಕ್ಕೂ 'ಅಪ್ರತಿಮ ವೀರ ಚರಿತ' ವೆಂಬ ಅಪ್ರತಿಮ ಹೆಸರು ಕೊಡಲು ಕಾರಣವೆಂದರೆ ಅದರಲ್ಲಿಯ ಲಕ್ಷ್ಯಪದ್ಯಗಳೆಲ್ಲ ಅಪ್ರತಿಮ ವೀರನೆಂಬ

ಮದುಳ್ಳ ಚಿಕ್ಕದೇವರಾಯನ ಚರಿತ್ರೆಯನ್ನು ತಿಳಿಸುತ್ತವೆ. ಗುಣಗಳನ್ನು ಗಳುತ್ತವೆ. ಲಕ್ಷ್ಯಪದ್ಯಗಳಲ್ಲಿಯು ಈ ವಿಷಯವೇ ಕತೆ, ಅವುಗಳಲ್ಲಿಯು ತ್ರಿಕ ವಿಷಯುಗಳು ಮಹತ್ವವಾದವುಗಳಾಗಿವೆ. ಈ ದೃಷ್ಟಿಯಿಂದಲೇ ಈ ಥ ವೈಶಿಷ್ಟ್ಯ ಪಡೆದಿದೆ.

ಅಲಂಕಾರ ಶಾಸ್ತ್ರ ದೃಷ್ಟಿಯಿಂದ ಮಮ್ಮಟ, ವಾಮನ, ಕುವಲಯಾ ದಕಾರ ಇವರ ಅನುಸರಣೆಯೇ ಇಲ್ಲಿ ಕಾಣುತ್ತದೆ. ಇತಿಹಾಸದ ಮೇಲ್ಮೈ ಎದ್ದು ಕಾಣುತ್ತದೆ. ಕೆಲವೆಡೆಗೆ ಲಕ್ಷ್ಯ ಪದ್ಯಗಳು ಸಮರ್ಪಕವಾಗಿಲ್ಲ.

ಈ) ಚಿಕ್ಕದೇವರಾಯ ವಂಶಾವಳಿ— ಇದು ತಿರುಮಲಾರ್ಯನ ಸರ್ವಸ್ವವನ್ನು ಮೆರೆಯುವ ಗದ್ಯಗ್ರಂಥ. ಮೈಸೂರು ಅರಸರ ವಂಶಾ ಯ ಚಾರಿತ್ರಿಕ ಅಂಶಗಳು ಇಲ್ಲಿವೆ. ಮೈಸೂರು ಅರಸರನ್ನು ಆದರ್ಶ ಪರೆಂದು ಚಿತ್ರಿಸುವ ಹೇತು ಸಫಲವಾಗಿದೆ. ಮೈಸೂರು ರಾಜವಂಶದ ಸಿದ್ಧರಾಜರ ಚರಿತ್ರೆಯಲ್ಲಿದೆ.

ಹಿಂದಿನ ಅರಸರ ಚರಿತ್ರೆಯಲ್ಲಿ ಕಲ್ಪನಾಂಶ ಬೆರಿಸಿ ವರ್ಣಿಸಿದ್ದರೂ ತ್ಕಾಲಿಕ ಚರಿತ್ರೆಯ ನಿರೂಪಣೆಯಲ್ಲಿ ಚಾರಿತ್ರಿಕ ಸತ್ಯಕ್ಕೆ ಬಹುಶಃ ಕುಂದು ದಿಲ್ಲ. ಅಂದಿನ ಘಟನೆಗಳು ಹಾಗೂ ವಿವರಗಳು ಸ್ಪಷ್ಟವಾಗಿ ಮೂಡಿವೆ.

ದೊಡ್ಡ ದೇವರಾಜನ ವರ್ಣನೆಯು ಅತಿಯಾಗಿದ್ದರೂ ‹ಚರಿತ್ರ ಮತ ತ್ವ, ಕಾವ್ಯ ಇವುಗಳ ಮುಪ್ಪುರಿಯೇ ಚಿಕದೇವರಾಯ ವಂಶಾವಳಿ ಎಂದು ಳುವದಕ್ಕೆ ಬಲವಾದ ಪ್ರಮಾಣವಾಗಿದೆ, ಎಂದು ಶ್ರೀ ಮಾಳವಾಡರು ಭಿಪ್ರಾಯ ಪಟ್ಟಿದ್ದಾರೆ. ಈ ಭಾಗ ಅತ್ಯುಕ್ತಿಗಳ ಮಾಲಿಕೆಯಾಗಿದೆ.

ಈ ಕಾವ್ಯದ ಮುಖ್ಯ ಗುಣ ಇದರ ಗದ್ಯ ಶೈಲಿಯಲ್ಲಿ ಹಾಗೂ ಬಿಡಿ ಮಾದ ವರ್ಣನೆ ಮತ್ತು ಸಾದೃಶ್ಯ ಮಾಲಿಕೆಗಳಲ್ಲಿದೆ. ಭಕ್ತಿರಸದಲ್ಲಿ ಕವಿ ಲ್ಲೀನನಾಗಿ ತನ್ನ ಪ್ರತಿಭಾ ಶಕ್ತಿಯನ್ನೆಲ್ಲ ಸೂರೆ ಮಾಡಿದ್ದಾನೆ. ‹‹ತಿರುಮ ಲಾರ್ಯನ ಶೈಲಿಯೇ ಅವನ ಜೀವಾಳ, ರೀತಿಯೇ ಅವನ ಕಾವ್ಯಕ್ಕೆ ಆತ್ಮ, ಸಂಸ್ಕೃತ ಹಾಗೂ ಕನ್ನಡ ಕಾವ್ಯ ಶೈಲಿಗಳ ಒಳದಿರುಳುಗಳನ್ನು ಹೀರಿ ಪುಷ್ಪವಾ ಗಿಯೂ ಹೊಸ ನಡೆಯ ಬೆಡಗುಳ್ಳದು ಅವನ ಗದ್ಯ" ಸಮತೂಕ ಹಾಗೂ ಲಾಲಿತ್ಯ ಇವುಗಳ ಸರಿಬೆರಕೆಗೆ ಅಡಿಗಡಿಗೆ ಸಹಜವಾಣಿಯ ಸ್ಫುರಣದಿಂದ ಹೊರ

ಹೊಮ್ಮಿದೆ. ಇದೊಂದು ವಿರಳವಾದ ಗ್ರಂಥವೆಂದು ಉನ್ನತ ಸ್ಥಾನವನು ಪಡೆದಿದೆ.

ಉ) ಅನುಭವಾಮೃತ- ಶಾಂಕರ ತತ್ವಜ್ಞಾನವನ್ನು, ಅದ್ವೈತ ಮತ ಪ್ರತಿಪಾದನೆಯನ್ನು ಭಾಮಿನಿಷಟ್ಪದಿಯಲ್ಲಿ ರಂಗನಾಥ ಇಲ್ಲವೆ ಮಹಾ ಲಿಂಗರಂಗನು ಮಾಡಿ ಯಶಸ್ವಿಯಾಗಿದ್ದಾನೆ. ಇದರಲ್ಲಿ,

ಅಖಿಲ ವೇದಾಂತಾರ್ಥ ವ- | ಯುಕುತಿಯಲಿ ಸಂಗ್ರಹಿಸಿ ಹೇಳುವೆ |
ಸಕಲರಿಗೆ ತಿಳಿವಂತೆ ಸುಲಭೋಪಾಯದಿಂದೊಲಿದು ||

ಎಂದು ಕವಿಯು ತನ್ನ ನಿರೂಪಣ ಪದ್ಧತಿಯನ್ನು ಹೇಳಿದ್ದಾನೆ. 'ಸುಲಿದ ಬಾಳೆಯ ಹಣ್ಣಿನಂದದಿ' ಮುಂತಾದ ಪದ್ಯಗಳಲ್ಲಿ ಕನ್ನಡದ ಶ್ರದ್ಧೆ ಹೊಮ್ಮಿದೆ.

ಅನುಭವಾಮೃತದಲ್ಲಿ ಅಧಿಕಾರಲಕ್ಷಣ, ವೈರಾಗ್ಯ, ತ್ವಂಪದ, ತತ್‌ಪದ, ಆಸಿಪದ, ಸಪ್ತಭೂಮಿಕೆ, ಪರಮಾತ್ಮ, ಮಾಯಾವಾದ, ಜೀವತ್ರಯ, ಜೀವನ್ಮುಕ್ತಿ, ನಿರ್ಗುಣಾರಾಧನೆ ಇವುಗಳ ಅಧಿಕಾರಯುಕ್ತವಾದ ವಿವರಣೆಯಿದೆ. ಸಂಸ್ಕೃತವರಿಯದ ಕನ್ನಡಿಗರಿಗೆ ಅದ್ವೈತ ಮತದ ಪ್ರಮುಖ ತತ್ವಗಳನ್ನು ತಿಳಿದುಕೊಳ್ಳಲು ಇಷ್ಟು ತಿಳಿಯಾದ, ದೃಷ್ಟಾಂತ ಸಂಪತ್ತಿಯಿಂದ ಸೊಗಸಾದ ಗ್ರಂಥವು ಇನ್ನೊಂದಿಲ್ಲ. ಲೋಕಾನುಭವ ಪ್ರತಿ ಪದ್ಯದಲ್ಲಿಯೂ ಪ್ರತಿಬಿಂಬಿತವಾಗಿದೆ.

ಭಗವದ್ಗೀತೆ, ಭಾರತ, ರಾಮಾಯಣ, ಶಾಂಕರಭಾಷ್ಯ ಮುಂತಾದ ಗ್ರಂಥಗಳಿಗೆ ರಂಗನಾಥನು ಋಣಿಯಾಗಿದ್ದಾನಾದರೂ ಕವಿಯಲ್ಲಿ ಸ್ವತಂತ್ರವಾದ, ಲೋಕಾನುಭವ ಪೂರ್ಣವಾದ ವಿವರಣ ಶಕ್ತಿಯಿದೆ, ಕವಿತಾಶಕ್ತಿಯಿದೆ. 'ಇರುಳು ಮನೆಯಲಿ ಮಲಗಿ.... ನಿದ್ರೆಯ|' 'ಕೆಂಡ ಮನೆಯೊಳಗಿರಲು ಕತ್ತಲೆ|....' 'ಮಣ್ಣ ಬೆನಕಗೆ ಮಜ್ಜನದೊಳೇ | ತನ್ನ ಮರಣವದೆಂಬ ಗಾದೆಯ | ಲಿನ್ನು ಮಾಯೆಗೆ ತನ್ನ ಮೂಲವನರಿಯೆ ಲಯವಹುದು ||' ಮುಂತಾದ ಪದ್ಯಗಳಲ್ಲಿ ಅತ್ಯಂತ ಗಹನವಾದ ಪ್ರತಿಮೆಯುಗಳನ್ನು ಸುಲಭವಾಗಿ ಹೇಳುವಲ್ಲಿ ರಂಗನಾಥನ ಶಕ್ತಿ ವ್ಯಕ್ತವಾಗಿದೆ.

ಊ) ಮಿತ್ರವಿಂದಾ ಗೋವಿಂದ- ಇದು ಉಪಲಬ್ಧವಾದ ಕನ್ನಡದಲ್ಲಿ ಬರೆದ ಮೊದಲನೆಯ ನಾಟಕ ನಾಟಕಕಾರನ ಹೆಸರು ಸಿಂಗಾರ್ಯ

ದು. ಇದು ಸಹ ರತ್ನಾವಳಿ ನಾಟಕದ ಭಾಷಾಂತರವಾಗಿದೆ. ಆದರೂ ಷಾಂತರವೆಂದು ಕವಿಯು ಒಪ್ಪಿಕೊಂಡಿಲ್ಲ. ಪಾತ್ರಗಳ ಹೆಸರುಗಳನ್ನು ಬದ ಸಿಕೊಳ್ಳಲಾಗಿದೆ. ಕೃಷ್ಣನೇ ನಾಯಕನಾಗಿದ್ದಾನೆ. ಇಲ್ಲಿ ಇದೊಂದು ಕೃತಿ ಾರ್ಯದ ಮಾದರಿ.

ಮಾಡಿಕೊಂಡ ವ್ಯತ್ಯಾಸಗಳಿಂದ ಕೃತಿಗೆ ಕಳೆಬಾರದೆ ಕುಂದು ಬಂದಿದೆ. ಾಯಕನ ಪಾತ್ರ ಸುಸಂಗತವಾಗಿಲ್ಲ. ಅವನೊಮ್ಮೆ ಸಾಮಾನ್ಯ ಮನುಷ್ಯ ಾದರೆ ಇನ್ನೊಮ್ಮೆ ವಿಷ್ಣುವಿನ ಅವತಾರವಾಗಿ ತೋರುತ್ತಾನೆ.

ಭಾಷಾಂತರ ದೃಷ್ಟಿಯಿಂದ ವರ್ಜಸುಳ್ಳ, ತಿರುಮಲಾರ್ಯನ ತಿಳಿಯಾದ ನ್ನಡ ಶೈಲಿಯಿಲ್ಲಿದೆ. ಮೂಲಕ್ಕಿಂತ ಹೆಚ್ಚಿನ ಸೊಗಸು ಅಲ್ಲಲ್ಲಿ ಬಂದಿದ್ದರೂ ಲವು ಕಡೆಗೆ ಭಾಷಾಂತರದಲ್ಲಿ ದೋಷಗಳಾಗಿವೆ. ಇದರಲ್ಲಿ ಗುಣ ಭಾಗವು ಚ್ಚಾಗಿ ಇದೆಯೆಂದರೆ ಅದಿರುವದು ಭಾಷಾ ಶೈಲಿಯಲ್ಲಿಯೇ.

ಖು) ಹದಿಬದಿಯ ಧರ್ಮ—ಇದನ್ನು ಬರೆದವಳು 'ಸರಸ ಸಾಹಿತ್ಯ ವರ ದೇವತೆ' ಎಂಬ ಬಿರುದ ಪಡೆದ ಸಂಚಿಯ ಹೊನ್ನಮ್ಮ, ಚಿಕ್ಕ ದೇವ ಾಯರ ಆ ಸ್ಥಾನ ಪಂಡಿತರಾದ ಅಳಸಿಂಗಾರ್ಯರ ಶಿಷ್ಯಳು 'ಹದಿನೆಂಟು ಣ್ಣನೆಯೆಂದು ಬವಣಿಗೊಂಡು ಪದಗೆಟ್ಟ ಬಯಲ ಬಣ್ಣಿಸದೆ ಪದಿಬದೆಯ ರ್ಮವನ್ನು ಬಣ್ಣಿಸಿದ್ದಾಳೆ ಹೊನ್ನಮ್ಮ. ಇದರಲ್ಲಿ ಕಥೆಯೇ ಇಲ್ಲ. ರಾಮಾ ಯಣ, ಭಾರತ, ಮನ್ವಾದಿಧರ್ಮಶಾಸ್ತ್ರಗಳಲ್ಲಿ ಹೇಳಿದ ಸತೀಧರ್ಮವನ್ನೇ ಲ್ಲಿ ನಿರೂಪಿಸಲಾಗಿದೆ.

ಧರ್ಮದ ತನಿಗಂಪು ತಲೆದೋರೆ, ಕಾವ್ಯದ|ಪೆರ್ಮೆ ಬೇರ್ವರಿದು ಬಿತ್ತರಿಸೆ|| ನಿರ್ಮಲ ಸತಿಯರ ಧರ್ಮವ ಕೃತಿಯಾಗಿ | ನಿರ್ಮಿಸಿ ನೆಗಳಿಪೆನೆಂದು ||.|| ಲ್ಲಿವರಿಂದಾನು ಕೇಳಿದುದಕೆ ಪೆರ್ಚುಕುಂ | ದಿಲ್ಲದಂತೆಚ್ಚರಗೂಡಿ || ಎಲ್ಲರು ರಿವಂತೆಳವಾಗುಗಳಿಂದ | ಸೊಲ್ಲಿಸುವೆನು ಸೊಗಸುವೊಲು ||.||" "ಸಂದ ಸತೀಧರ್ಮವನು ಸಾಹಿತ್ಯದೋ | ಳೊಂದು ಗೋಳಸಿ ಪೇಳಿದೆನು" ಎಂದು ಕಾವ್ಯ ರಚನೆಯನ್ನು ಕುರಿತು ವಿನಯದಿಂದ ಹೇಳಿದ ಮಾತುಗಳಿವು.

'ಏಳೆ ವೆಣ್ಣಲೀ ಕೃತಿಗೇಳೆ ತಮ್ಮನಿಯರ | ನೆಳಮೆಯೊಳ್ಳುವು ಗೆಡಿಸದೆ| ಳಿಸಂದು ಬಾಳುವರತ್ತೆ ಮಾವಂದಿರ | ನೊಳವುಗೈದೊಳ್ಪು ಪಡೆವರು ||.||"

'ಇದು ಪಾತಿವೃತ್ಯ ಧರ್ಮ ತತ್ವದ ಸಾರ | ವಿದೆ ಸಂಜೀವನ ಮಂತ್ರ|| ಇದು ಪರಮಾರ್ಥ ಹಿತೋಪದೇಶದ ತಿರುಳಿದನು ಸತಿಯರೋದುವುದು|| ||" ಎಂಬ ಮಾತುಗಳಲ್ಲಿ ಹೆಣ್ಣುಮಕ್ಕಳಿಗೆ ಇದರ ಅಗತ್ಯ ಹಾಗೂ ಮಹತ್ವ ಎಷ್ಟಿದೆ ಎಂಬುದನ್ನು ಹೇಳಲಾಗಿದೆ.

ಈ ಕಾವ್ಯದಲ್ಲಿ ಹೆಣ್ಣಿನ ಹಿರಿಮೆ, ಸತಿಪತಿಯರ ಅನ್ಯೋನ್ಯದ ಸೊಗಸು, ಅತ್ತೆಸೊಸೆಯರು ಪರಸ್ಪರ ಪ್ರೀತಿಯಿಂದ ಇರುವ ಬಗೆ, ದೇವರಲ್ಲಿ ಭಕ್ತಿ, ಹಿರಿಯರಲ್ಲಿ ಗೌರವ, ಕಿರಿಯರಲ್ಲಿ ವಾತ್ಸಲ್ಯ ಇವುಗಳನ್ನು ಮಾರ್ಮಿಕವಾಗಿ ಹೇಳಲಾಗಿದೆ. ಅಲ್ಲಲ್ಲಿ ಉದಾಹರಣೆಗಾಗಿ ಕಿರುಗತೆಗಳೂ ಹೆಣೆಯಲ್ಪಟ್ಟವೆ. ಸತೀ ಧರ್ಮಸಾಂಪ್ರದಾಯಕವಾದ ವಿಚಾರಗಳನ್ನೇ ಇಲ್ಲಿ ಎತ್ತಿ ತೋರಿಸಲಾಗಿದೆ. ಈ ಕಾವ್ಯದಲ್ಲಿ ಕಂಗೊಳಿಸುವ ಪತಿವ್ರತೆ ತತ್ವದ ಪುಥ್ಥಳಿಯಲ್ಲಿ ಜೀವಕಾಂತಿಯ ಹೆಣ್ಣು' ಎಂದು ಡಿ. ಚಂಪಾಬಾಯಿಯವರು ಹೇಳಿದ್ದಾರೆ.

'ಪೆಣ್ಣಲ್ಲವೇ ತಮ್ಮನ್ನೆಲ್ಲ ಪಡೆದ ತಾಯಿ । ಪೆಣ್ಣಲ್ಲವೆ ಪೊರೆದವಳು' ಎಂಬಲ್ಲಿ ಹೆಣ್ಣಿನ ಹಿರಿಮೆಯಿದೆ. 'ಕುವರನಾದಡೆ ಬಂದ ಗುಣವೇನದರಿಂದ | ಕುವರಿಯಾದಡೆ ಕುಂದೇನು' || ''ಎಂಬಲ್ಲಿ ಮಗನೂ ಮಗಳೂ ನೀತಿವಂತರಿರಬೇಕಾದ ಮಹತ್ವವನ್ನು ಸ್ಪಷ್ಟಪಡಿಸಲಾಗಿದೆ. 'ಸುಗಣನಾವನು ಸುಚರಿತ್ರನಾವನು ಕಣ್ಣೆ || ಸೊಗಸುವ ಸೊಒಗನಾರೆಂದು ..."ತಿಳಿದು ಮಗಳನ್ನು ಕೊಡಬೇಕೆಂಬಲ್ಲಿ ವರನ ಆಯ್ಕೆಯ ಬಗ್ಗೆ ಹೇಳಲಾಗಿದೆ" ಪಣದಾಸೆ ನಂಟುತನದ ಪತ್ತುಗೆ ನೇಹ । ದೆಣೆಕೆಗಳಿಂದೆದೆಗರಗಿ||" ಅಯೋಗ್ಯರಿಗೆ ಮಗಳನ್ನು ಕೊಡಬಾರದು. "ತನ್ನ ಮನೆಯೊಳುಂಡು ತವರು ಮನೆಯು ಸಂಪನ್ನತಕ್ಕೆಂದು" ಹರಕೆ ಹೊರುವ ಮನೆ ನೋಡಿ ಕೊಡಬೇಕು.

"ಎಂತು ನಡೆದೊಡಮಿನಿಯನಿಗಿಂಬು ದೋರುವು। ದೆಂದು ನಡೆದೊಡೇಳ್ಗೆಯಹುದು || ಎಂತು ನಡೆದೊಡೆಲ್ಲರುಮದು ಲೇಸೆಂಬ | ರಂತಿರ" ಬೇಕು, ''ಇನಿಯನ ಸೇವೆಯೊಳೆಣೆಯಿಲ್ಲದ ಧರ್ಮ । ಮನೆವಾಳೆಯೊಳರ್ಥ ಕಾಮ|| ಮನದನ್ನನೊಳು ಮಾಧವನ ಭಾವಿಸೆ ಮೋಕ್ಷ । ವೆನೆಸತಿಯರಿಗರಿದೇನು || ಎಂದು ಕೇಳಿ ಕೊನೆಗೆ ''ತನ್ನೊಡಲಿಗೆ ತನ್ನ ಮನವ ಕಾಪಿಡುವುದು | ತನ್ನ ಮನಕೆ ತನ್ನ ಮತಿಯ || ತನ್ನ ಮತಿಗೆ ತನ್ನ ಸಾತ್ವಿಕ ಧೈರ್ಯವ । ನುನ್ನತಿ

ಡಿದೊಪ್ಪುವದು'' ಸುಖ ಶಾಂತಿಗಳಿಂದ ಬಾಳಲು ಸಹಾಯವಾಗಲು ರ್ಗವನ್ನು ತೋರಿಸಲಾಗಿದೆ ಹದಿಬದೆಯ ಧರ್ಮದಲ್ಲಿ.

ಹದಿಬದೆಯ ಶೈಲಿ ತಿರುಮಲಾರ್ಯ, ಸಿಂಗರಾರ್ಯರ ಪ್ರಭಾವ ದಲೂ ಹೊನ್ನಮ್ಮನ ಸ್ವಂತ ಸತ್ವದಿಂದಲೂ ಮಾದರಿಯ ಅಚ್ಚಗನ್ನಡ ವೆ, ಇಲ್ಲಿ ಬಿಗುವಿದೆ ಆದರೆ ಬಿಗಿಯಿಲ್ಲ. ಸಹಜ ಪ್ರಾಸವಿದೆ, ತಿಳಿಯಾದ ವಿದೆ. ಹೊನ್ನಮ್ಮ ಈ ನೀತಿ ಕಾವ್ಯವನ್ನು ಪ್ರಾಸಾದಿಕವಾಣಿಯಿಂದ ದಿದ್ದಾಳೆ. ಇಲ್ಲಿ ಸಾಂಗತ್ಯ ರಚನೆ ಹೃದ್ಯವಾಗಿದೆ. ಹೊನ್ನಮ್ಮನ ಈ ಕೃತಿ ಣಿಯರ ಕೈಪಿಡಿಯಾಗಿದೆ, ಕನ್ನಡಸಾಹಿತ್ಯಕ್ಕೆ ಚಿರವಾದ ಕೊಡುಗೆ ಗಿದೆ.

ಋ) ಸರ್ವಜ್ಞ— ವ್ಯವಹಾರ ಜ್ಞಾನ ವಿವೇಕಗಳ ಮೂರ್ತಿಯಾಗಿ ಳಿದ ಸರ್ವಜ್ಞನು ಸಮಾಜ ವೈದ್ಯನಾಗಿ ರೋಗ ಪರೀಕ್ಷೆ ಮಾಡಿದ್ದಾನೆ, ಟ್ಟು ಮಾತಿನ ಔಷಧಿಯನ್ನು ನೀಡಿದ್ದಾನೆ, ಕಾಂತಾ ಸಮ್ಮತಿಯಿಂದ ಉಪ ಶವನ್ನು ಮಾಡಿದ್ದಾನೆ, ಸುಮಾರು ೨೦೦೦ ತ್ರಿಪದಿಗಳಲ್ಲಿ. ಅವನ ಹೆಸರಿನ ಪದಿಗಳಲ್ಲಿ ಅನ್ಯಕೃತವಾದವುಗಳೆಷ್ಟೋ ಸೇರಿರಲು ಸಾಧ್ಯವೂ ಇದೆ.

'ನಾ ಶಿವನ ಮಗನೆಂದು' ಹೇಳಿಕೊಂಡಿದ್ದಾನೆ ಸರ್ವಜ್ಞ. ಬಾಲ್ಯದಿಂದಲೇ ಬೈದ್ದಾನೆ. ಆದರೆ ಸದ್ಗುರುವಿನ ಲಾಭದಿಂದ ಅವನ ಬುದ್ಧಿ ಬೆಳೆಯಿತು, ವೇಕ ಜಾಗ್ರತವಾಯಿತು. ಉದಾತ್ತ ಭಾವವನ್ನು ಬೆಳೆಸಿಕೊಂಡನು. ಸ್ವಾರ್ಥ ರಹಿತನೂ ವೈರಾಗ್ಯ ಪೂರ್ಣನೂ ಆದನು. ಒಳಗಣ್ಣು ತೆರೆಯಿತು, ನನ ಸತ್ಯವನ್ನು ಕಂಡುಕೊಂಡನು, ಸರ್ವಜ್ಞನಾದನು 'ಸರವೆ ಸುರಲತೆ ಕ್ಕು ಗೊರವ ಸುರಪತಿಯಕ್ಕು । ಹರಕೊಟ್ಟ ಗರಿಯು ಗಿರಿಯಿಕ್ಕು ಗುರು ನಾ । ಕರುಣವಿರುವನಕ ಸರ್ವಜ್ಞ ||' ಇಲ್ಲಿ ಗುರುವಿನ ಹಿರಿಮೆಯನ್ನು ರ್ಣಿಸಲಾಗಿದೆ.

ಸರ್ವಜ್ಞನೆಂಬುದು ಅವನ ಹೆಸರಲ್ಲದಿದ್ದರೂ ಅವನ ಜ್ಞಾನ ಭಾಂಡಾರದ ಯ ಆಳವನ್ನು ಅನುಭವಿಸಿದ ಜನರೇ ಅವನಿಗೆ ಆ ಬಿರುದನ್ನು ಕೊಟ್ಟರ ಕು. ಅಲ್ಲದೆ ಅವನಿಗೆ ದೊರೆತ ವಿವಿಧವಾದ ಲೋಕಾನುಭವ, ಪರಿಪಕ್ವ ದ ವಿವೇಕ, ವಿಶಾಲವಾದ ಮನೋಭಾವ ಇವುಗಳಲ್ಲಿ ಅವನ ಸರ್ವಜ್ಞತ್ವ . ಒಂದೇ ಮಾತಿನಲ್ಲಿ ಹೇಳುವದಾದರೆ ಅನುಭವವೇ ಅವನ ವೇದ,

ಜೀವನವೇ ಅವನ ಪಾಠಶಾಲೆ "ಸರ್ವಜ್ಞನೆಂಬವನು ಗರ್ವದಿಂದಾವನೆ। ಸರ್ವರೊಳಗೊಂದೊಂದು ನುಡಿಗಲಿತು ವಿದ್ಯೆಯ। ಪರ್ವತವೆ ತಾನಾದ ಸರ್ವಜ್ಞ ॥" ಎಂದು ನಮ್ರತೆಯಿಂದ ಸೂಚಿಸಿದ್ದಾನೆ. ಇಲ್ಲಿ ಸೋಮೇಶ್ವರ ಕವಿಯ 'ಕೆಲವಂ ಬಲ್ಲವರಿಂದ ಕಲ್ತು ಕೆಲವಂ ....' ಎಂಬ ಪದ್ಯವನ್ನೂ ನೆನೆಯಬಹುದು.

ದೇವ, ಧರ್ಮ, ಪೂಜೆ, ಗುರು, ದಾನ, ಮತ, ನೀತಿ ಮುಂತಾದ ಅನೇಕ ವಿಷಯಗಳಲ್ಲಿ ಸರ್ವಜ್ಞನದು ಸಮಯ ಸ್ವತಂತ್ರವಾದ ಸರ್ವಕಾಲಿಕವಾದ ಮೌಲ ಪ್ರಜ್ಞೆ. ಜೀವನ ಧರ್ಮವೇ ಇಲ್ಲಿ ರೂಪುಗೊಂಡಿದೆ. ಭಾರತೀಯ ಮತ್ತು ಕನ್ನಡ ಸಂಸ್ಕೃತಿ ತುಂಬಾ ಪ್ರತಿಬಿಂಬಿತವಾಗಿದೆ.

'ಸರ್ವಜ್ಞನ ಪದ್ಯಗಳಲ್ಲಿ ಜೀವನವನ್ನೂ ಭಾವನಿರ್ಭರತೆಯನ್ನೂ ವಕ್ರೋಕ್ತಿ ಪ್ರಕಾರವನ್ನೂ' ಕಂಡವರು ಅವನು ಕವಿಯನ್ನುವದಕ್ಕೆ ಹಿಂದೆ ಮುಂದೆ ನೋಡುತ್ತಾರೆ. ಆದರೆ ಸರ್ವಜ್ಞನು 'ಸಂಸ್ಕೃತರ ಸಂಸ್ಕೃತ ಕವಿಯಲ್ಲ, ಪ್ರಾಕೃತರ ಪ್ರಾಕೃತ ಕವಿ- ಸಂಗ್ರಹಶಕ್ತಿ, ಬಿರುಸು, ಚಿತ್ತಾಕರ್ಷಣ, ಹಿಡಿನುಡಿಗಳ ಪ್ರಯೋಗ, ಸ್ವಾಭಾವಿಕತೆ ಇವು ಸರ್ವಜ್ಞನ ಕಾವ್ಯದ ಲಕ್ಷಣಗಳಾಗಿವೆ. ಅವನು ದರ್ಶಕ ಕವಿ. ಅವನು ನೀತಿ ಒರುಡು ಮಾತಲ್ಲ, ರಸಮಯವಾದ ಸಂಭಾಷಿತ, ಹಾಸ್ಯವು ಕರುಣಾಶಾಲಿಯ ಶಲ್ಯತಂತ್ರವಾಗಿದೆ.

ಸರ್ವಜ್ಞನ ಕಾವ್ಯ ಒಟ್ಟಿನ ಮೇಲೆ ನೀತಿ ಕಾವ್ಯ, ರಸಿಕತೆಯೇ ಕವಿಯ ಜೀವ. ಆದ್ದರಿಂದಲೇ ಅವನ ನೀತಿಕಾವ್ಯವು ಕಾವ್ಯವಾಗಿದೆ ಉತ್ತಮ ಕಾವ್ಯವಾಗಿದೆ. ಸರ್ವಜ್ಞನಲ್ಲಿ ತಾ ಕಂಡ ಸತ್ಯವನ್ನು ರಸಾನುಭವವಾಗಿ ಹೇಳುವ ಕವಿಯ ಮನೋಧರ್ಮವಿದೆ ಎಂದು ಅವನನ್ನು ಕವಿಯೆನ್ನಬೇಕು. 'ರಸಿಕ ನಾಡಿದ ಮಾತು ಶಶಿಯುದಿಸಿ ಬಂದಂತೆ। ರಸಿಕನಲ್ಲದ ಬರಿ ಮಾತು ಕಿವಿಯೊಳ್ಗೊ। ರ್ದಸಿಯು ಬಡಿದಂತೆ ಸರ್ವಜ್ಞ ॥ ಮುಂತಾದ ಪದ್ಯಗಳಲ್ಲಿ ಕವಿತೆಯ ಲಕ್ಷಣವಿದೆ.

ಕಿರಿದದೊಳ್ ಪಿರಿದು ಮರ್ಥಮ ನರಿಪಲ್ ನೆರೆವಾತ' ನಾದ ಸರ್ವಜ್ಞ ಸಂಕ್ಷೇಪ ಸ್ವಾರಸ್ಯ, ತ್ರಿಪದಿಯ ತ್ರಿವಿಕ್ರಮ, ಅಚ್ಚಗನ್ನಡ ಸೊಬಗು ಇವನ್ನು ಎಷ್ಟು ಹೊಗಳಿದರೂ ಸಾಲದು. ಅವನ ವಚನಗಳು ಜನತೆಯ

ಕೋಶವಾಗಿವೆ, ಸ್ಫೂರ್ತಿವಾಕ್ಯಗಳಾಗಿವೆ, ಗಾದೆ ಮಾತುಗಳ ಸಮತೆ
ತ ಸಾಹಿತ್ಯದ ದೇಸಿ ತತ್ವವು ಸತ್ವವು ಸರ್ವಜ್ಞನಲ್ಲಿ ಸಾರ್ಥಕ್ಯವ,
ದೆ.

ಎ) ಹೊನ್ನಮ್ಮ— ಚಿಕ್ಕದೇವರಾಜರ ಪಟ್ಟದರಸಿಯಾದ ದೇವಮ್ಮಣ್ಣಿ
ಅರ ದಾಸಿಯಾಗಿ ಎಳವಂದೂರಿನಿಂದ ಬಂದ ಅವಳು ಬುದ್ಧಿಯಿದ್ದರೂ
ಯಿಲ್ಲದ ಹೆಂಗಸು. ಸನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ
, ಆಸ್ಥಾನ ವಿದ್ವಾಂಸರೂ ಸಂಸ್ಕೃತ ಕನ್ನಡ ಸಾಹಿತ್ಯದಲ್ಲಿ ಪ್ರವೀಣರೂ
ಅಳಸಿಂಗಾಚಾರ್ಯರಿಂದ ಕಾವ್ಯ, ನಾಟಕ, ಪುರಾಣ ವೇದಾಂತಗಳನ್ನು
ಸಿಸುತ್ತ ಎಲೆಯ ಮರೆಯ ಹೂವಿನಂತೆ ವಿದ್ಯಾಸಂಪನ್ನೆಯಾದಳು.

ಅರಸಿ ಕೇಳಿ ಹೊನ್ನಿ ಸರಸ ಸಾಹಿತ್ಯದ। ವರದೇವತೆ ತಾನೆಂದು ||
ಸಾರ್ಥವಾದಿಯಳಸಿಂಗರಾರ್ಯನು | ಪರಿಪರಿಯೊಳು ಬಣ್ಣಿಪನು || ||
ನು ಕಾವ್ಯಲಂಕಾರ ನಾಟಕಗಳ | ಬರವಣಿಗೆಯಿರಬಲ್ಲವಳು || ಇವಳ
ತ್ಯದ ಸೇವಿಪೆಳಸುತ್ತೆನ್ನ | ಕಿವಿಗಳು ಕುದುಬು ಗೊಂಬಿಹವು ||.|| ಎಂದು
ನಿಂದ ಹೊಗಳಿಸಿಕೊಂಡು ಹೊನ್ನಮ್ಮ ಆದಳು, ಅರಸನ ಕುತೂಹಲ
ಹೊಗಳಿಸಿಕೊಂಡು ಹೊನ್ನಮ್ಮ ಆದಳು, ಅರಸನ ಕುತೂಹಲ
ಕೆರಳಿಸಿದಳು.

ರಾಣಿಯಾದರೂ 'ಕಂದಬಾರೆನ್ನ, ಕಟ್ಟಾಣಿ, ಪೆಣ್ಮಣಿಯೆ ಬಾ
ಾಗ ನಾಚಿದ ಹೊನ್ನಮ್ಮನಿಗೆ 'ಹೊನ್ನಿ ಬಾ, ಹೊನ್ನಕ್ಕ ಬಾರೆಂದು
ಪಿಡಿದು' ಬಳಿಗೆ ಕರೆದು 'ಕಲಿತ ಬಿಜ್ಜೆಯ ಬಲ್ಲವರಿಗೆ ಕೇಳಿ ಪೂದೈಸೆ ಫಲ'
ವು ಕಾವ್ಯ ಹೇಳಲು ಪ್ರೋತ್ಸಾಹಿಸಿದಳು. ಆಗ ಹೊನ್ನಮ್ಮ ವಿನಯದಿಂದ,
ಅರಸ ಕೇಳೆನಗೆ ನಿಮ್ಮಡಿಯೂಳಿಗವೊಂ | ದರಸಿಯರಡಿಯೊಲೆ
ಂದು || ಪರಕಿವೊಡೆಖಿಳಾರ್ಥ ಸಾಧನಂಗಳಿವು | ನೆರವಾಗಿಹು ನೇಮ
ಳು ||.|| ಎಂದು ಕೇಳಿ, 'ಮುದದೊಡನಿಹಪರದೇಳ್ಗೆ ವಡೆಯ ಹದಿಬದೆಯ
ವ' ಬಣ್ಣಿಸಲು ಒಪ್ಪಿ, 'ಧರ್ಮದ ತನಿಗಂಪು ತಲೆದೋರೆ ಕಾವ್ಯದ |
ಬೇರ್ವರಿದು ಬಿತ್ತರಿಸಿ| ನಿರ್ದುಲ ಸತಿಯರ ಧರ್ಮವ ಕೃತಿಯಾಗಿ| ನಿರ್ಮಿಸಿ
ಪೆನಿಂದು ||.|| ಎಲ್ಲರು ಮರಿವಂತೆಳವಾತುಗಳಿಂದ | ಸೊಲ್ಲಿಸುವೆನು
ಗಸುವೊಮ್ಮ," "ಸಂದ ಸತೀಧರ್ಮವನು ಸಾಹಿತ್ಯದೊ। ಳೊಂದು ಗೊಳಿಸಿ

ಜೀವನವೇ ಅವನ ಪಾಠಶಾಲೆ "ಸರ್ವಜ್ಞನೆಂಬವನು ಗರ್ವದಿಂದಾವನೆ | ಸರ್ವರೊಳಗೊಂದೊಂದು ನುಡಿಗಲಿತು ವಿದ್ಯೆಯ | ಪರ್ವತವೆ ತಾನಾದ ಸರ್ವಜ್ಞ ||" ಎಂದು ನಮ್ರತೆಯಿಂದ ಸೂಚಿಸಿದ್ದಾನೆ. ಇಲ್ಲಿ ಸೋಮೇಶ್ವರ ಕವಿಯ 'ಕೆಲವಂ ಬಲ್ಲವರಿಂದ ಕಲ್ತು ಕೆಲವಂ ....' ಎಂಬ ಪದ್ಯವನ್ನೂ ನೆನೆಯಬಹುದು.

ದೇವ, ಧರ್ಮ, ಪೂಜೆ, ಗುರು, ದಾನ, ಮತ, ನೀತಿ ಮುಂತಾದ ಅನೇಕ ವಿಷಯಗಳಲ್ಲಿ ಸರ್ವಜ್ಞನದು ಸಮಯ ಸ್ವತಂತ್ರವಾದ ಸರ್ವಕಾಲಿಕವಾದ ಮೌಲ ಪ್ರಜ್ಞೆ. ಜೀವನ ಧರ್ಮವೇ ಇಲ್ಲಿ ರೂಪುಗೊಂಡಿದೆ. ಭಾರತ್ರಿಯ ಮತ್ತು ಕನ್ನಡ ಸಂಸ್ಕೃತಿ ತುಂಬಾ ಪ್ರತಿಬಿಂಬಿತವಾಗಿದೆ.

'ಸರ್ವಜ್ಞನ ಪದ್ಯಗಳಲ್ಲಿ ಜೀವನವನ್ನೂ ಭಾವನಿರ್ಭರತೆಯನ್ನೂ ವಕ್ರೋಕ್ತಿ ಪ್ರಕಾರವನ್ನೂ' ಕಂಡವರು ಅವನು ಕವಿಯನ್ನುವದಕ್ಕೆ ಹಿಂದೆ ಮುಂದೆ ನೋಡುತ್ತಾರೆ. ಆದರೆ ಸರ್ವಜ್ಞನು 'ಸಂಸ್ಕೃತರ ಸಂಸ್ಕೃತ ಕವಿಯಲ್ಲ, ಪ್ರಾಕೃತರ ಪ್ರಾಕೃತ ಕವಿ. ಸಂಗ್ರಹಶಕ್ತಿ, ಬಿರುಸು, ಚಿತ್ತಾಕರ್ಷಣ, ಹಿಡಿನುಡಿಗಳ ಪ್ರಯೋಗ, ಸ್ವಾಭಾವಿಕತೆ ಇವು ಸರ್ವಜ್ಞನ ಕಾವ್ಯದ ಲಕ್ಷಣಗಳಾಗಿವೆ. ಅವನು ದರ್ಶಕ ಕವಿ. ಅವನು ನೀತಿ ಒರುಡು ಮಾತಲ್ಲ, ರಸಮಯವಾದ ಸಂಭಾಷಿತ, ಹಾಸ್ಯವು ಕರುಣಾಶಾಲಿಯ ಶಲ್ಯತಂತ್ರವಾಗಿದೆ.

ಸರ್ವಜ್ಞನ ಕಾವ್ಯ ಒಟ್ಟಿನ ಮೇಲೆ ನೀತಿ ಕಾವ್ಯ, ರಸಿಕತೆಯೇ ಕವಿಯ ಜೀವ. ಆದ್ದರಿಂದಲೇ ಅವನ ನೀತಿಕಾವ್ಯವು ಕಾವ್ಯವಾಗಿದೆ ಉತ್ತಮ ಕಾವ್ಯವಾಗಿದೆ. ಸರ್ವಜ್ಞನಲ್ಲಿ ತಾ ಕಂಡ ಸತ್ಯವನ್ನು ರಸಾನುಭವವಾಗಿ ಹೇಳುವ ಕವಿಯ ಮನೋಧರ್ಮವಿದೆ ಎಂದು ಅವನನ್ನು ಕವಿಯೆನ್ನಬೇಕು. 'ರಸಿಕ ನಾಡಿದ ಮಾತು ಶಶಿಯುದಿಸಿ ಬಂದಂತೆ | ರಸಿಕನಲ್ಲದ ಬರಿ ಮಾತು ಕಿವಿಯೊಳ್ಕು | ರ್ದಸಿಯು ಬಡಿದಂತೆ ಸರ್ವಜ್ಞ || ಮುಂತಾದ ಪದ್ಯಗಳಲ್ಲಿ ಕವಿತೆಯ ಲಕ್ಷಣವಿದೆ.

ಕಿರಿದದೊಳ್ ಪಿರಿದು ಮರ್ಥಮ ನರಿಪಲ್ ನೆರೆವಾತ' ನಾದ ಸರ್ವಜ್ಞ ಸಂಕ್ಷೇಪ ಸ್ವಾರಸ್ಯ, ತ್ರಿಪದಿಯ ತ್ರಿವಿಕ್ರಮ, ಅಚ್ಚಗನ್ನಡ ಸೊಬಗು ಇವನ್ನು ಎಷ್ಟು ಹೊಗಳಿದರೂ ಸಾಲದು. ಅವನ ವಚನಗಳು ಜನತೆಯ

ಕೋಶವಾಗಿವೆ, ಸ್ಫೂರ್ತಿವಾಕ್ಯಗಳಾಗಿವೆ, ಗಾದೆ ಮಾತುಗಳಾಗಿವೆ. ತ ಸಾಹಿತ್ಯದ ದೇಸಿ ತತ್ವವು ಸತ್ವವು ಸರ್ವಜ್ಞನಲ್ಲಿ ಸಾರ್ಥಕ್ಯವನ್ನು ದೆ.

ಎ) ಹೊನ್ನಮ್ಮ— ಚಿಕ್ಕದೇವರಾಜರ ಪಟ್ಟದರಸಿಯಾದ ದೇವಮ್ಮಣ್ಣಿ ರ ದಾಸಿಯಾಗಿ ಎಳವಂದೂರಿನಿಂದ ಬಂದ ಅವಳು ಬುದ್ಧಿಯಿದ್ದರೂ ಯಿಲ್ಲದ ಹೆಂಗಸು. ಸನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ , ಆಸ್ಥಾನ ವಿದ್ವಾಂಸರೂ ಸಂಸ್ಕೃತ ಕನ್ನಡ ಸಾಹಿತ್ಯದಲ್ಲಿ ಪ್ರವೀಣರೂ ಅಳಸಿಂಗಾಚಾರ್ಯರಿಂದ ಕಾವ್ಯ, ನಾಟಕ, ಪುರಾಣ ವೇದಾಂತಗಳನ್ನು ಸಿಸುತ್ತ ಎಲೆಯ ಮರೆಯ ಹೂವಿನಂತೆ ವಿದ್ಯಾಸಂಪನ್ನೆಯಾದಳು.

ಅರಸಿ ಕೇಳಿ ಹೊನ್ನಿ ಸರಸ ಸಾಹಿತ್ಯದ | ವರದೇವತೆ ತಾನೆಂದು || ಸಾರ್ಥವಾದಿಯಳಸಿಂಗರಾರ‍್ಯನು | ಪರಿಪರಿಯೊಳು ಬಣ್ಣಿಪನು || || ನು ಕಾವ್ಯಲಂಕಾರ ನಾಟಕಗಳ | ಬರವಣಿಗೆಯಿಂ ಬಲ್ಲವಳು || ಇವಳ ತ್ಯದ ಸೇವಿಪೆಳಸುತ್ತೆನ್ನ | ಕಿವಿಗಳು ಕುದುಬು ಗೊಂಬಿಹವು ||.|| ಎಂದು ನಿಂದ ಹೊಗಳಿಸಿಕೊಂಡು ಹೊನ್ನಮ್ಮ ಆದಳು, ಅರಸನ ಕುತೂಹಲ

ಹೊಗಳಿಸಿಕೊಂಡು ಹೊನ್ನಮ್ಮ ಆದಳು, ಅರಸನ ಕುತೂಹಲ

ಕೆರಳಿಸಿದಳು.

ರಾಣಿಯಾದರೂ ‹ ಕಂದಬಾರೆನ್ನ, ಕಟ್ಟಾಣಿ, ಪೆಣ್ಮಣಿಯೆ ಬಾ ಾಗ ನಾಚಿದ ಹೊನ್ನಮ್ಮನಿಗೆ ‹ ಹೊನ್ನಿ ಬಾ, ಹೊನ್ನಕ್ಕ ಬಾರೆಂದು ಪಿಡಿದು' ಬಳಿಗೆ ಕರೆದು ‹ಕಲಿತ ಬಿಜ್ಜೆಯ ಬಲ್ಲವರಿಗೆ ಕೇಳಿ ಪೂದೈಸೆ ಫಲ' ು ಕಾವ್ಯ ಹೇಳಲು ಪ್ರೋತ್ಸಾಹಿಸಿದಳು. ಆಗ ಹೊನ್ನಮ್ಮ ವಿನಯದಿಂದ,

ಅರಸ ಕೇಳೆನಗೆ ನಿಮ್ಮಡಿಯೂಳಿಗವೊಂ | ದರಸಿಯರಡಿಯೊಲೆ ಂದು || ಪರಕಿವೊಡೆಖಿಳಾರ್ಥ ಸಾಧನಂಗಳಿವು | ನೆರವಾಗಿಹು ನೇಮ ಳು ||.|| ಎಂದು ಕೇಳಿ, ‹ಮುದದೊಡನಿಹಪರದೇಳ್ಗೆವಡೆಯ ಹದಿಬದೆಯ ರ್ಮವ' ಬಣ್ಣಿಸಲು ಒಪ್ಪಿ, 'ಧರ್ಮದ ತನಿಗಂಪು ತಲೆದೋರೆ ಕಾವ್ಯದ | ಬೇರ್ವರಿದು ಬಿತ್ತರಿಸೆ| ನಿರ್ಮಲ ಸತಿಯರ ಧರ್ಮವ ಕೃತಿಯಾಗಿ| ನಿರ್ಮಿಸಿ ಳಿಪೆನೆಂದು ||.|| ಎಲ್ಲರು ಮರಿವಂತೆಳವಾತುಗಳಿಂದ | ಸೊಲ್ಲಿಸಿ:ವೆನು ಗಸುವೊಮ್ಮ," "ಸಂದ ಸತೀಧರ್ಮವನು ಸಾಹಿತ್ಯದೊ | ಳೊಂದು ಗೊಳಿಸಿ

ಪೇಳಿದೆನು " ಎಂದು ತನ್ನ ಕಾವ್ಯದ ವಿಷಯ, ಭಾಷೆ, ಮೊದಲಾದವುಗಳ ಪ್ರಸ್ತಾವನೆ ಮಾಡಿದ್ದಾಳೆ.

ಹೊನ್ನಮ್ಮ ಚಿಕ್ಕದೇವರಾಯನ ಕೃಪಾರಸದಿಂದ 'ಕಬ್ಬೊನ್ನು ಚೆಂಬೊನ್ನಾದಂತೆ' ಆಗಿ ಬೆಲೆಯುಳ್ಳ ಕೃತಿಯೊಂದನ್ನು ರಚಿಸಿದ ಕಥೆ ಹೆಂಗಳೆಯರ ವಿಕಾಸಕ್ಕೆ ಅನುಮಾಡಿಕೊಟ್ಟರೆ ಏನು ಸಾಧ್ಯ ಎಂಬುದಕ್ಕೆ ನಿದರ್ಶನವಾಗಿದೆ. ಹೊನ್ನಮ್ಮನು ಹೊನ್ನಿನಂಥ ಕಾವ್ಯ ರಚಿಸಿ ಮಹಿಳಾಲೋಕಕ್ಕೆ ಆದರ್ಶಳಾಗಿದ್ದಾಳೆ. ಕೊನೆಗೆ ಆದರ್ಶ ಸ್ತ್ರೀ ಜೀವನದಿಂದಾಗಿ. 'ಕನ್ನಡ ನಾಡೊಳು ಕಲಿಯುಗವುಗದಿರ್ಕೆ । ಕನ್ನಡಿಗರು ಘನಕಕ್ಕೆ ||, ಎಂಬಲ್ಲಿ ತನ್ನ ಪೋಷಕರಾದ ಮೈಸೂರೊಡೆಯರ ಹಾಗೂ ತನ್ನ ನಾಡ ಬಂಧು-ಭಗಿನಿಯರ ಶ್ರೇಯೋಭಿಲಾಷೆಯನ್ನು ಪ್ರಾರ್ಥಿಸಿದ್ದಾಳೆ. ಹೊನ್ನಮ್ಮ ಕನ್ನಡ ನಾಡಿನ ಪೆಣ್ಮಣಿ, ಕಟ್ಟಾಣಿ.

ಪ್ರಶ್ನೆ ೨೩. ಟಿಪ್ಪಣಿ ಬರೆಯಿರಿ— (ಅ) ಮುದ್ರಾಮಂಜೂಷ, (ಆ) ರಾಮಾಶ್ವಮೇಧ, (ಇ) ಜಗನ್ನಾಥದಾಸರು, (ಈ) ಮುದ್ದಣ್ಣ.

ಉತ್ತರ ಅ) ಮುದ್ರಾಮಂಜೂಷ— ಇದನ್ನು ಬರೆದವರು ಕೆಂಪು ನಾರಾಯಣನು. ಇದರ ಕಾಲ ೧೮೨೩ ಎಂದಿದೆ. ಮುದ್ರಾರಾಕ್ಷಸವೆಂಬ ಸಂಸ್ಕೃತ ನಾಟಕ ಅನುವಾದವಿದೆಂದು ಹೇಳುವಲ್ಲಿ ತಥ್ಯವಿಲ್ಲ. ಇಲ್ಲಿ ಮೊದಲಿನ ೧೨ ಪ್ರಕರಣಗಳ ಕಥೆ ಸಂಸ್ಕೃತ ನಾಟಕದ ಉಪೋದ್ಘಾತದಲ್ಲಿ ಸೂಚಿಸಲಾಗಿದೆ. ತನ್ನ ಅವತರಣಿಕೆಯಲ್ಲಿ 'ಪುರಾಣದಲ್ಲೆ ಹೇಳಿದ ಕಥೆಯನ್ನು ಈಗ ಕೆಂಪು ನಾರಾಯಣನೆಂಬ ಕವಿ ಕರ್ಣಾಟ ಭಾಷೆಯಿಂ ವಿಸ್ತರಿಸಿ ಇದಕ್ಕೆ ಮುದ್ರಾಮಂಜೂಷವೆಂಬ ಪೆಸರಿಟ್ಟು ಪೇಳ್ವನದೆಂತೆನೆ' ಎಂದಿದ್ದಾನಲ್ಲದೆ ಇಲ್ಲಾ. ಮುದ್ರಾರಾಕ್ಷಸ ನಾಟಕದ ಉಲ್ಲೇಖವೇ ಇಲ್ಲ.

ಕಥೆಯಲ್ಲಿ ಕೆಲವು ಸ್ವತಂತ್ರ ಕಲ್ಪನೆಗಳನ್ನೂ ಸೇರಿಸಿದ್ದಾನೆ. ಮೂಲದಲ್ಲಿಯ ಕೆಲವನ್ನು ಬಿಟ್ಟಿದ್ದಾನೆ, ಕೆಲವನ್ನು ವ್ಯತ್ಯಾಸ ಮಾಡಿಕೊಂಡಿದ್ದಾನೆ. ಭಾಷೆಯ ದೃಷ್ಟಿಯಿಂದ ಹಳಗನ್ನಡ ಹೊಸಗನ್ನಡಗಳ ತೀರ ವಿಚಿತ್ರ ಮಿಶ್ರಣ ಇಲ್ಲಿ ತಲೆದೋರಿದೆ. ಆದರೂ ಕೆಂಪು ನಾರಾಯಣನಲ್ಲಿ ಶಬ್ದ ಶಕ್ತಿಯಿದೆ,

ನ ದೃಷ್ಟಿಯಿದೆ, ಭಾಷಾಶೈಲಿ ಏಕರೂಪವಾಗಿಲ್ಲ. ಸಂಧಿಕಾಲದ ವಿಷಮತೆ ಇದು ಒಳಗೊಂಡಿದೆ.

ಬಾಣ ಕಾದಂಬರಿ. ಸಂಸ್ಕೃತ ಪ್ರೌಢ ಕಾವ್ಯ ಇವುಗಳ ಪ್ರಭಾವದಿಂದ ಭಾಗಗಳು ಉದ್ದಾನುದ್ದವಾಗಿದ್ದು ಸಂಸ್ಕೃತಮಯವಾಗಿವೆ, ಕೆಲ ಚಿಕ್ಕ ಗಳೂ ಇಲ್ಲದಿಲ್ಲ. ಶೈಲಿ ಒಮ್ಮೆ ಪ್ರೌಢವಾದರೆ ಒಮ್ಮೆ ಸರಳವಾಗು . ಈ ಶೈಲಿಯ ವಿಶಿಷ್ಟ ರೂಪಕ್ಕೆ ಪ್ರೇರಕವಾದ ತತ್ವ ಯಾವದೂ ಇಲ್ಲ. ನ್ನಡವನ್ನು ಹೊಸಗನ್ನಡಕ್ಕೆ ಪರಿವರ್ತಿಸುವಾಗ ತೋರುವ ಸಂಧಿಕಾಲ ಮ ಗೊಂದಲವೆಲ್ಲ ಇದರಲ್ಲಿದೆ.

ಅ) ರಾಮಾಶ್ವಮೇಧ-ಇದು ಮುದ್ದಣನ ಶ್ರೇಷ್ಠ ಕೊಡುಗೆಯಾದ ಕಾವ್ಯ. ಇಲ್ಲಿ ಗದ್ಯವು ಪಳಗಿದೆ, ಕಲ್ಪನಾ ಚಮತ್ಕೃತಿ ಸ್ವಚ್ಛಂದವಾಗಿ ಸಿದೆ. ಪದ್ಮಪುರಾಣದಲ್ಲಿಯ 'ಶೇಷ ರಾಮಾಯಣ' ವೇ ಇದರ ಮುಖ್ಯ ನಕಕ್ಕೆ ಆಧಾರ. ಇದಕ್ಕೂ ಮೂಲಕ್ಕೂ ಭೇದ ಕಡಿಮೆ. ಇದ್ದ ಭೇದ ವರ್ಣನೆ, ಕಥಾಕ್ರಮ, ವಸ್ತುವಿಸ್ತರ ಮುಖ್ಯವಾಗಿ ಮುದ್ದಣ್ಣ ಮನೋ ಯರ ಸರಸ ದಾಂಪತ್ಯದ ಸಂವಾದ ಸ್ವಾರಸ್ಯದ ಹೊರಕಟ್ಟು ಇವುಗಳಲ್ಲಿದೆ.

'ಓವೋ ಕಾಲಪುರುಷಂಗೆ ಗುಣಮಣಮಿಲ್ಲಂ ಗಡ' ಎಂದು ಮಳೆ ದ ವರ್ಣನೆಯ ಸ್ವತಂತ್ರ ರೂಪಕದಲ್ಲಿ ಮೊದಲಾಗುವ ಈ ಗದ್ಯಕಾವ್ಯ ತಿಕಾರಕವಾಗಿದೆ. ಮುದ್ದಣ್ಣ ಮನೋರಮೆಯರ ಸಂವಾದವು ನಗೆಯ ಗಳನ್ನು ಎಬ್ಬಿಸಲು ಕವಿಯ ಬಗ್ಗೆ ಹೆಮ್ಮೆ ಹೆಚ್ಚುತ್ತದೆ. ಮುದ್ದಣ್ಣನು ಈ ಸ ತಂತ್ರವರಿತ ಮಾಂತ್ರಿಕನಾಗಿದ್ದಾನೆ. ಈ ನವದಂಪತಿಗಳ ಸಂಭಾಷಣೆ ದಲ್ಲೆಲ್ಲ ಕಾವ್ಯವು ಮೋಹಕವಾಗಿದೆ. ಕನ್ನಡ ಕಾವ್ಯ ಸೃಷ್ಟಿಗೆ ಈ ರಸಿಕ ಪತಿಗಳು ಹೊಸ ಜೀವವನ್ನು ತುಂಬಿದ್ದಾರೆ.

ಕಥೆಯ ಉದ್ದ ಹೆಚ್ಚು ಆದರೆ ಅದರ ಆಳ ಕಡಿಮೆ. ಅಲ್ಲದೆ ಅದು ಗುಣ ರ್ಣವಾಗಿಯೂ ಇಲ್ಲ ಉಜ್ವಲವಾಗಿಯೂ ಇಲ್ಲ. ಪ್ರಾರಂಭದಲ್ಲಿ ಇಲ್ಲಿ ರ್ಥನೆ, ಗುರುಸ್ತುತಿ, ಕುಕವಿನಿಂದೆ, ಆತ್ಮಸ್ತುತಿ ಯಾವುದೂ ಇಲ್ಲದುದೂ ದು ಹೊಸತನವೇ ಆಗಿದೆ. ಮುಖ್ಯ ಕಥೆಯ ಕಲೆ ಸಾಂಪ್ರದಾಯಕವಾಗಿ ಮಾನ್ಯ ಕೌಶಲದಿಂದ ಕೂಡಿದೆ.

ಪಾತ್ರಗಳನ್ನು ಚಿತ್ರಿಸುವಲ್ಲಿ ಪುರಾಣ ವೃತ್ತಿ ತೋರಿದೆಯಾದರೂ ರಾಮ-ಸೀತೆ, ಮುದ್ದಣ್ಣ ಮನೋರಮೆ ಈ ಆದರ್ಶ ದಂಪತಿಗಳಲ್ಲಿ ಕವಿಯು ಪಾತ್ರ ಕಲ್ಪನೆಯನ್ನು ಪೂರ್ಣಗೊಳಿಸಲು ಪ್ರಯತ್ನಿಸಿದ್ದಾನೆ. ರಾಮನ ಪಾತ್ರ ವಾದ ಗ್ರಸ್ತವಾಗಿದೆ. ರಾಮನು ಒಮ್ಮೆ ದೇವನಾದರೆ ಇನ್ನೊಮ್ಮೆ ಮಾನವನಾಗಿದ್ದಾನೆ, ಸೀತೆ ಸ್ವಭಾವ ಚಿತ್ರ ಸಮರ್ಪಕವಾಗಿದೆ.

"ಕರ್ಮಣಿ ಸರದೊಳ್ ಚಿಂಬವಳಂ ಕೋದಂತಿರೆ, ರಸಮೊಸರೆ, ಲಕ್ಕಣಂ ಮಿಕ್ಕಿರೆ, ಕಿಡೆಯುಡೆಯೊಳ್ ಸಕ್ಕದದ ನಲ್ನುಡಿ ಮೆರೆಯೆ, ತಿರುಳ್ಗನ್ನಡದೊಳೆ ಕತೆಯನುಸಿವೆಂ" ಎಂದುದಲ್ಲದೆ 'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ ಲ್ಲಿದರಿಂ ಹೃದ್ಯಮಪ್ಪ ಗದ್ಯದೊಳೆ ಪೇಳ್ವೆಂ' ಎಂದು ಹೃದ್ಯವಾದ ಗದ್ಯ ಶೈಲಿಯ ಆದರ್ಶವನ್ನು ಸಾರಿದ್ದಾನೆ. ತಿರುಳ್ಗನ್ನಡವು ಅವನಿಗೆ ಬಹುಮಟ್ಟಿಗೆ ಸಾಧಿಸಿದೆ. ಆದರೂ ನಿಷ್ಕಾರಣವಾದ ಸಂಸ್ಕೃತದ, ಕ್ಲಿಷ್ಟತೆಯೂ ಅಲ್ಲಲ್ಲಿ ಇಣಿಕಿ ಹಾಕಿದೆ. 'ಸಾಮಾನ್ಯ ಚಿತ್ರಕ್ಕೆ ಸುವರ್ಣದ, ಚೌಕಟ್ಟು' ಎಂದು ಶ್ರೀ ಎಸ್. ವಿ. ರಂಗಣ್ಣನವರ ತೀರ್ಮಾನವು ರಾಮಾಶ್ವಮೇಧಕ್ಕೆ ಒಟ್ಟಿನಲ್ಲಿ ಸರಿಹೋಗುತ್ತದೆ.

ಇ) ಜಗನ್ನಾಥದಾಸರು— ಪುರಂದರ ದಾಸರ ನಂತರ ದಾಸಕೂಟ ಪರಂಪರೆಯನ್ನೂ ಉಜ್ವಲವಾಗಿ ಬೆಳಗಿಸಿದವರಲ್ಲಿ ಇವರು ಹಿರಿಯರು. ಸಂಸ್ಕೃತ ಪಾಂಡಿತ್ಯದೊಡನೆ ಕನ್ನಡ ಶ್ರದ್ಧೆ, ಸಂಪ್ರದಾಯ ನಿಷ್ಠೆಯೊಡನೆ ವಿಶಾಲ ಮನೋಭಾವ, ಅಪರೋಕ್ಷಜ್ಞಾನದೊಡನೆ ಭಕ್ತಿ ಇವರಲ್ಲಿ ಬೆರೆತುಕೊಂಡಿದ್ದವು. 'ತಂತ್ರಸಾರ' 'ಹರಿಕಥಾಮೃತಸಾರ' ಹಾಗೂ 'ಕೀರ್ತನೆ' ಗಳನ್ನು ಇವರು ರಚಿಸಿದ್ದಾರೆ. ಭಗವದ್ಗೀತೆ, ಬ್ರಹ್ಮಸೂತ್ರ, ದಶೋಪನಿಷತ್ತು ಎಂಬ ಪ್ರಸ್ಥಾನತ್ರಯಿಯನ್ನು ಇವರು ಕನ್ನಡಿಸಿರಬೇಕೆಂಬ ಪ್ರತೀತಿಯಿದೆ.

'ತಂತ್ರ ಸಾರ'ವು ೨೭ ನುಡಿಗಳಲ್ಲಿ ವಿಷ್ಣು ಸ್ತುತಿ ಮತ್ತು ಮಂತ್ರ ಸ್ವರೂಪವನ್ನು ಒಳಗೊಂಡ ಹಾಡು. 'ಹರಿಕಥಾಮೃತ ಸಾರ'ವು ೩೨ ಸಂಧಿ ಹಾಗೂ ಒಂದು ಸಾವಿರದಷ್ಟು, ಭಾಮಿನಿಷಟ್ಪದಿ ಪದ್ಯಗಳುಳ್ಳ ಗ್ರಂಥ ಕೀರ್ತನೆಗಳಲ್ಲಿ ಹರಿಗುರು ಸ್ತುತಿ, ಆಧ್ಯಾತ್ಮಿಕ ಅನುಭವ ಇವಕ್ಕೆ ಮಿಗಿಲಾದ ಸ್ಥಾನವಿದೆ.

‘ ಹರಿಕಥಾಮೃತಸಾರ ’ ದಲ್ಲಿ ಮಧ್ವ ಮತದ ತತ್ವಗಳನ್ನು ವಿವರ ..ಾಗಿ ಅಧಿಕಾರ ವಾಣಿಯಿಂದ ವಿವೇಚಿಸಲಾಗಿದೆ. ತತ್ವವನ್ನು ತಿಳಿಸಿ ಹೇಳು ..ಲ್ಲಿ ಸಾಹಿತ್ಯದಲ್ಲಿ ದೃಷ್ಟಿ ಮಾತ್ರವಲ್ಲ, ಅನಭಿಜ್ಞನಿಗೂ ತಿಳಿಸಿ ಕೊಡಬೇಕೆಂಬ ..ದ್ದೇಶವು ಈ ಗ್ರಂಥದಲ್ಲಿದೆ. ಇದರ ವಿವೇಚನೆಯ ಸೊಗಸು, ಸಾದೃಶ್ಯಗಳ ..ಚಿತ್ಯ, ಚಿತ್ರವನ್ನು ಎಳೆದುಕೊಂಡು ಹೋಗುತ್ತವೆ. ಇಲ್ಲಿಯ ಉತ್ಕಟ ಭಕ್ತಿ, ..ದಾರ ಹೃದಯಗಳು ಜಗನ್ನಾಥದಾಸರ ವ್ಯಕ್ತಿತ್ವದ ಘನತೆಯನ್ನು ಎತ್ತಿ ..ೋರುತ್ತವೆ.

“ಬುದ್ಧಿ ವಿದ್ಯಾ ಬಲದಿ ಪೇಳಿದ ಶುದ್ಧ ಕಾವ್ಯವಿದಲ್ಲ, ತತ್ವ ಸುಪದ್ಧತಿ ..ನು ತಿಳಿದ ಮಾನವನಲ್ಲ' ಎಂದು ವಿನಯದಿಂದ ಹೇಳಲಾಗಿದೆ. ‘ಮನ ..ನಕತಿದೂರ,’ ‘ವುಲಗಿ ಪರಮಾದರದಿ ಪಾಡಲು’, ‘ಜನನಿಯನು ಕಾಣದಿಹ ..ಲಕ’, ಮುಂತಾದ ಪದ್ಯಗಳು ಸರಳವೂ ಹೃದ್ಯವೂ ಆಗಿವೆ. ‘ಸರ್ವ ದೇಶವು ..ಣ್ಯ ದೇಶವು । ಸರ್ವಕಾಲವು ಪುಣ್ಯ ಕಾಲವು । ಸರ್ವದೇವರು ಜ್ಞಾನ ..ತ್ರರು ಮೂರು ಲೋಕದೊಳು ಸರ್ವ ಮಾತುಗಳೆಲ್ಲ ಮಂತ್ರವು । ಸರ್ವ ..ಸಗಳೆಲ್ಲ ಪೂಜೆಯು । ಶರ್ವ ವಂದ್ಯನ ವಿಮಲಮೂರ್ತಿ ಜ್ಞಾನವುಳ್ಳವಗೆ ..॥ ಎಂಬಲ್ಲಿ ವಿಶಾಲ ದೃಷ್ಟಿಗೋಚರವಾಗಿದೆ.

‘ ದಾಸೋಽಹಂ ತವ ದಾಸೋಽಹಂ’, ‘ಸಿರಿರಮಣ ತವಚರಣ ’ ‘ಕಂಡೆ ..ಡೆ ಕೃಷ್ಣನ ಕಂಡೆ’, ಮೊದಲಾದ ಕೀರ್ತನೆಗಳಲ್ಲಿ ಅವರ ಭಕ್ತಿಯ ಆಳವನ್ನು ..ರುತಿಸಬಹುದು. ‘ಅರಿತವರಿಗತಿ ಸುಲಭ ಹರಿಯ ಪೂಜೆ’ ಈ ಕೀರ್ತನೆ ..ನ್ನಾಥದಾಸರ ಮಹಾ ವ್ಯಕ್ತಿತ್ವದ ಮತ್ತು ಸರ್ವಾರ್ಪಣಸಿದ್ಧಿಯ ಭವ್ಯ ..ಪಕವಾಗಿದೆ, ದಾಸ ಸಾಹಿತ್ಯದ ಹಿರಿಯ ಗೀತೆಗಳಲ್ಲಿ ಒಂದಾಗಿದೆ. ..ಗನ್ನಾಥದಾಸರ ಮತೀಯ ತತ್ವವನ್ನು ಸಮಗ್ರವಾಗಿ ತಿಳಿದುಕೊಂಡು ..ಚರಣೆಯಲ್ಲಿ ತಂದಿರುವ ವಿಶಾಲ ಹೃದಯದ ರಸಯೋಗಿಗಳಲ್ಲಿ ಒಬ್ಬರಾದುದು ..ನ್ನಡ ಸಂಸ್ಕೃತಿಯ ಚರಿತ್ರೆಯಲ್ಲಿ ಚರಿತಾರ್ಹವಾದುದಾಗಿದೆ.

ಈ) ಮುದ್ದಣ್ಣ — ೧೯೦೧ ರಲ್ಲಿ ಕಾಲವಾದ ಮುದ್ದಣ್ಣನು ಹಳೆಯ ..ತ್ತು ಹೊಸ ಸಾಹಿತ್ಯಗಳ ಸಂಕೇತವಾಗಿದ್ದಾನೆ. ಅವನದು ೩೧ ವರ್ಷಗಳ ..ಲ್ಪ ಜೀವನದ ಅವಧಿ. ಅವನ ಹೆಸರು ನಂದಳಿಕೆ ಲಕ್ಷ್ಮೀನಾರಾಯಣ.

ಅವನೊಬ್ಬ ವ್ಯಾಯಾಮ ಶಿಕ್ಷಕನಾಗಿದ್ದನು. ಅವನು ಕಾವ್ಯರಚನಾ ಪರಿಣತಿಯನ್ನು ಪಡೆವ ಸಾಹಸ ಮಾಡಿ 'ರತ್ನಾವತೀ ಕಲ್ಯಾಣ', 'ಕುಮಾರ ವಿಜಯ' ಎಂಬ ಯಕ್ಷಗಾನ ಪ್ರಸಂಗಗಳನ್ನೂ, 'ಅದ್ಭುತ ರಾಮಾಯಣ', 'ರಾಮ ಪಟ್ಟಾಭಿಷೇಕ' ಮತ್ತು 'ರಾಮಾಶ್ವಮೇಧ' ಎಂಬ ಕಾವ್ಯಗಳನ್ನೂ ರಚಿಸಿದ್ದಾನೆ. 'ಗೋದಾವರಿ' ಎಂಬ ಕಾದಂಬರಿಯ ಕೆಲಭಾಗ, ಭಗವದ್ಗೀತೆ, ರಾಮಾಯಣಗಳ ಕನ್ನಡ ಅನುವಾದ, ಸಂಶೋಧನೆಯ ಲೇಖ, ಕಾಮಶಾಸ್ತ್ರವನ್ನು ಕುರಿತು ಗ್ರಂಥವನ್ನೂ ಬರೆದಿದ್ದಾನೆ. ವ್ಯಾಕರಣ, ನಿಘಂಟುಗಳನ್ನೂ ಬರೆಯುವ ಯೋಜನೆಯನ್ನೂ ಮಾಡಿದ್ದನಂತೆ. ಇದೆಲ್ಲ ಅದ್ಭುತ ಸಾಹಸವೇ, ಪವಾಡವು.

'ಅದ್ಭುತ ರಾಮಾಯಣ'ವು ಶಾಕ್ತ ಸಂಪ್ರದಾಯದ ರಾಮಾಯಣ ಕಥೆಯನ್ನು ಗದ್ಯದಲ್ಲಿ ಸಂಗ್ರಹಗೊಳಿಸಲಾಗಿದೆ. ಇವರಲ್ಲಿ ಮುದ್ದಣ್ಣನು ತನ್ನ ನುಡಿ ಒಲ್ಮೆಯನ್ನೂ, ಸಂಗ್ರಹ ಚಾತುರ್ಯವನ್ನೂ ಅರಿತುಕೊಳ್ಳಲು ಹವಣಿಸಿದ್ದಾನೆ. ರೀತಿ ಪ್ರಧಾನವಾದ ಚಿಕ್ಕ ಗ್ರಂಥವಿದು. ಇದರ ಗುಣ ಭಾಗವೆಲ್ಲ ಚೊಕ್ಕಟವಾದ ಬಿಗಿಯಾದರೂ ತಿಳಿಯಾದ ಹಳಗನ್ನಡ ಗದ್ಯದಲ್ಲಿದೆ. ಅಲ್ಲಲ್ಲಿ ಹೊಸಗನ್ನಡದ ಪ್ರಯೋಗಗಳೂ ಬಂದಿವೆ, ಪ್ರೌಢ ಪ್ರಸನ್ನ ಪದ್ಯದ ಹೊಳವೂ ಅಲ್ಲಲ್ಲಿ ಕಾಣದೇ ಇಲ್ಲ.

'ರಾಮ ಪಟ್ಟಾಭಿಷೇಕ'ವು ವಾರ್ಧಕ ಷಟ್ಪದಿಯಲ್ಲಿದೆ. ಇಲ್ಲಿ ಕಥಾಭಾಗಕ್ಕಿಂತ ವರ್ಣನಾ ಭಾಗವೇ ಹೆಚ್ಚು. ರಾಮನ ನಿರೀಕ್ಷೆಯನ್ನು ಮಾಡುತ್ತಿರುವ ಭರತನ ಪ್ರೇಮಾದರ, ಉತ್ಸುಕತೆ, ಸಂಭ್ರಮ ಇವುಗಳ ಚಿತ್ರ ಸೊಗಸಾಗಿದೆ. ಇದು 'ರಾಮನಾಮಾಮೃತದ ಬಿಂದಿಗೆ' ಆಗಿದೆ. ರಾಮಭಕ್ತಿ, ರಾಮನಾಮಸ್ಮರಣೆಗಳಿಗೆ ಇಲ್ಲಿ ಪ್ರಾಮುಖ್ಯತೆ ಬಂದಿದೆ. ವರ್ಣನೆಗಳು ಚಮತ್ಕೃತಿ ಪ್ರಧಾನವಾಗಿವೆ. ಇಲ್ಲಿ ಸುಲಭತೆಯಿರುವಂತೆ ಕ್ಲಿಷ್ಟತೆಯೂ ಇದೆ, ಶಬ್ದ ಚಮತ್ಕಾರಗಳಿರುವಂತೆ ಅರ್ಥ ಚಮತ್ಕಾರಗಳೂ ಇವೆ. ಮುದ್ದಣ್ಣನ ಬೆಳೆಯುತ್ತಿರುವ ಪ್ರತಿಭೆ ಪಳಗುತ್ತಿರುವ ಶೈಲಿ ಕಾಣ ದೊರೆಯುತ್ತವೆ.

'ರಾಮಾಶ್ವಮೇಧ'ದಲ್ಲಿ ಶೇಷ ರಾಮಾಯಣದ ಕಥೆಯೇ ಮುಖ್ಯ. ಇದರ ಪ್ರಾರಂಭ, ಮುದ್ದಣ್ಣ ಮನೋರಮೆಯರ ಸಂವಾದ ಇದಕ್ಕೆ ನೂತನತೆಯನ್ನು ತಂದುಕೊಟ್ಟಿವೆ. ಓದುಗರ ಕುತೂಹಲವನ್ನು ಕೆರಳಿಸಿವೆ. ಮುದ್ದಣ್ಣ ಮನೋರಮೆಯರ ಸಂವಾದ ಕನ್ನಡ ಸಾಹಿತ್ಯಕ್ಕೆ ಮುದ್ದಣ್ಣನ ಅಪೂರ್ವ ಕಾಣಿಕೆ

ಾಗಿದೆ. ತಿರುಳ್ಗನ್ನಡ ಇಲ್ಲಿ ತನ್ನ ವಿಜಯಧ್ವಜವನ್ನು ಎತ್ತರಕ್ಕೆ ಮೆರೆ ದೆ. ಇಲ್ಲಿ ಗದ್ಯ ಶೈಲಿಯ ಹೃದ್ಯವಾದ ಆದರ್ಶವಿದೆ. ಅಲ್ಪಾಯುಷಿಯಾದ ಳಿನಲ್ಲಿ, ದಿನದಿನದ ಜೀವನಕುಲಕಹದಲ್ಲಿ ಮುದ್ದಣ್ಣನು ಈ ನೆಲೆಯನ್ನು ುಟ್ಟಿ ಮೆರೆದಿದ್ದು ಅಲೌಕಿಕವೇ ಸರಿ.

ಪ್ರಶ್ನೆ ೨೪— ೧೯ ನೆಯ ಶತಮಾನದ ಸಾಹಿತ್ಯ ರೂಪರೇಷೆಗಳೇನು? ವರಿಸಿರಿ.

ಉತ್ತರ— ಸಂಕೀರ್ಣತೆಯೇ ಈ ಶತಮಾನದ ವೈಶಿಷ್ಟ್ಯವಾಗಿದೆ. ಜಾಶ್ರಯ, ಮೈಸೂರು ಒಡೆಯರ-ಮತ್ತು ಪ್ರೇರಣೆಯಿಂದ ಕನ್ನಡ ಸಾಹಿ ವು ಹೊಮ್ಮಿದೆ. ಅಭಿವ್ಯಕ್ತಿಯ ಸ್ವಾತಂತ್ರ್ಯ ಮತ್ತು ಜನತಾ ದೃಷ್ಟಿ ಷ್ಟ ಪ್ರಮಾಣದಲ್ಲಿ ವ್ಯಕ್ತವಾಗಿವೆ. ಭಾಗವತ ಸಾಂಪ್ರದಾಯ ಇಲ್ಲಿ ಎದ್ದು ಣುತ್ತದೆ. ಸಾಂಗತ್ಯ, ಷಟ್ಪದಿಗಳು ಅಲ್ಲಲ್ಲಿ ಕಂಡರೂ ಗದ್ಯ ಸಾಹಿತ್ಯ, ೆ ಹೊಸ ರೂಪಗಳನ್ನೊಳಗೊಂಡು ಹುಲುಸಾಗಿ ಬೆಳೆದಿದೆ.

ನೇರವಾಗಿ ತಾತ್ಕಾಲೀನ ಇತಿಹಾಸ ಹಾಗೂ ಜನಜೀವನವನ್ನು ನಿರೂ ಸುವ ಗ್ರಂಥಗಳು ಜನ್ಮತಾಳಿದವು. ಗದ್ಯದತ್ತ ಒಲವು ಅಧಿಕವಾಗಿದೆ. ಜರು ಕವಿಗಳಾಗಿಯೂ ಕವಿ ಪೋಷಕರಾಗಿಯೂ ಇತರ ಕಲೆಗಳ ಅಭಿ ದ್ಧಿಗೆ ಕಾರಣರಾದಂತೆ ಸಾಹಿತ್ಯ ನಿರ್ಮಿತಿಗೂ ಕಾರಣರಾಗಿದ್ದಾರೆ. ಆದರೂ ುದ್ದಣ್ಣನಂತೆ ಬಡತನದ ಕುಲುಮೆಯಲ್ಲಿ ಸುಟ್ಟು, ಚೊಕ್ಕ ಚಿನ್ನವಾಗಿ ಮೌಲ್ಯವಾದ ಸಾಹಿತ್ಯ ಕೃತಿಗಳನ್ನು ಒದಗಿಸಿಕೊಟ್ಟವರೂ ಇಲ್ಲದಿಲ್ಲ.

'ರಾಜಾವಳೀ ಕಥೆ', ಮುದ್ರಾ ಮಂಜೂಷ', 'ರಾಮಾಶ್ವಮೇಧ' ಗದ್ಯ ಗ್ರಂಥಗಳಲ್ಲಿ ಗದ್ಯದ ಬೆಳವಣಿಗೆಯನ್ನು ಗುರುತಿಸಬಹುದು. 'ಪದ್ಯಂ ವ್ಯಂ, ಗದ್ಯಂ ಹೃದ್ಯಂ' ಎಂಬ ಮುದ್ದಣ್ಣನ ಸೂತ್ರದಲ್ಲಿ ಗದ್ಯವನ್ನೇ ಚ್ಚಾಗಿ ಬಯಸುವ ಹೊಸಗನ್ನಡ ವಾಚಕರ ಪ್ರತಿಕ್ರಿಯೆ.ಯನ್ನೂ ಕಾಣ ಹುದು. ಚಾರಿತ್ರಿಕಾಂಶವು ಅಧಿಕವಾಗಿ ಸಾಹಿತ್ಯದ ಪೀಠವನ್ನು ಈ ಶತ ಾನದಲ್ಲಿ ಏರಿದೆ.

ಈ ಶತಮಾನದಲ್ಲಿ ಕಾಲ ತೇಲಿದಂತೆ ಹೊಸ ಪ್ರೇರಕ ಶಕ್ತಿಗಳೂ ಹೊಸ ಸಾಹಿತ್ಯ ರೂಪಗಳೂ ಹತ್ತಿರ ಬರತೊಡಗಿದವು. ಈ ಸಂಧಿ ಕಾಲದಲ್ಲಿ ತೀರ ಳೆಯ ಮಾರ್ಗದಲ್ಲಿ ಬರೆದವರಿದ್ದಾರೆ. ಹಳೆಯದನ್ನೂ ಹೊಸದನ್ನೂ ಮಿಶ್ರ

ಗೊಳಿಸಿ ಬರೆದವರಿದ್ದಾರೆ. ಸಂಧಿಕಾಲದ ವಿಷಮತೆ ಹಿರಿಯ ಕವಿಗಳಲ್ಲಿಯೂ ಕಾಣದೇ ಇಲ್ಲ.

ಸಂಸ್ಕೃತದ ಪ್ರಭಾವವು ಸಾಕಷ್ಟು ಇದ್ದರೂ ವ್ಯಾಪಕವಾಗಿಲ್ಲ. ಕನ್ನಡ ಛಂದಸ್ಸಿನ, ಭಾಷೆಯ, ಶಕ್ತಿ ನಿಚ್ಚಳವಾಗಿದೆ. ನವೀನ ದೃಷ್ಟಿ ಸಾಹಿತ್ಯ ನಿರ್ಮಾಣದಲ್ಲಿ ಕಂಡು ಬರುತ್ತದೆ. ಸಂಸ್ಕೃತದ ಉದ್ಗ್ರಂಥಗಳ ಭಾಷಾಂತರ ಮೊದಲು ಬಾರಿ ಆದಂತೆ, ಇಂಗ್ಲೀಷ ಸಾಹಿತ್ಯದ ಪ್ರಭಾವವೂ ಆಗದೇ ಇಲ್ಲ. ಸಾಹಿತ್ಯದ ವೈಪುಲ್ಯವಿದೆ. ಹಲವಾರು ಗ್ರಂಥಗಳನ್ನು ಒಬ್ಬೊಬ್ಬರೇ ಬರೆದ ಉದಾಹರಣೆಗಳು ಇಲ್ಲಿವೆ.

ಚರಿತ್ರಕಾರ ಕವಿಯಾದ ದೇವಚಂದ್ರನು ಚಾರಿತ್ರದ ದೃಷ್ಟಿಯಿಂದ 'ರಾಜಾವಳಿ ಕಥೆ'ಯನ್ನು ಬರೆದಿದ್ದಾನೆ. ಮುಮ್ಮಡಿ ಕೃಷ್ಣರಾಜನು ಕನ್ನಡ ಸಂಸ್ಕೃತಗಳಲ್ಲಿ ಪಂಡಿತನಾಗಿ ಸುಮಾರು ಐವತ್ತರವರೆಗೆ ಗ್ರಂಥಗಳನ್ನು ಬರೆದಿದ್ದಾನೆ. ಇಲ್ಲಿಂದ ಹೊಸಗನ್ನಡ ಗದ್ಯರೂಪದ ಗಾಳಿ ಬೀಸತೊಡಗಿದೆ ಎನ್ನಬಹುದು. ಕೆಂಪುನಾರಾಯಣನು ಮುದ್ರಾರಾಕ್ಷಸದ ಆಧಾರದಿಂದ ಮುದ್ರಾ ಮಂಜೂಷವನ್ನು ಬರೆದು ಹಳೆಗನ್ನಡ – ಹೊಸಗನ್ನಡದ ದರ್ಶನ ಮಾಡಿಸಿದ್ದಾನೆ. ಅವನ ಶಕ್ತಿ ನವೀನ ದೃಷ್ಟಿ ಗಮನಾರ್ಹವಾಗಿದೆ.

'ಅಭಿನವ ಕಾಲಿದಾಸ' ಎಂಬ ಬಿರುದಿಗೆ ಸುಯೋಗ್ಯರಾದ 'ಬಸವಪ್ಪ ಶಾಸ್ತ್ರಿ'ಗಳು ಕಾಲಿದಾಸನ ಸಂಸ್ಕೃತ ನಾಟಕ, ಕಾವ್ಯಗಳನ್ನು ಮೊದಲು ಬಾರಿ ಭಾಷಾಂತರ ಮಾಡಿ ಕನ್ನಡದ ಸತ್ವವನ್ನು ಮೆರೆದದ್ದಲ್ಲದೆ ಶೇಕ್ಸಪಿಯರನ ಅಥೆಲ್ಲೊ ನಾಟಕವನ್ನು 'ಶೂರಸೇನ ಚರಿತ್ರೆ' ಎಂಬ ಹೆಸರಿನಿಂದ ಭಾಷಾಂತರ ಮಾಡಿ ಮೊದಲು ಬಾರಿ ಆಂಗ್ಲ ನಾಟಕದ ಸವಿಯನ್ನು ಉಣಿಸಿದ್ದಾರೆ, ಇದು ಹೊಸಗನ್ನಡ ಸಾಹಿತ್ಯಕ್ಕೆ ಇಂಗ್ಲೀಷ್ ಸಾಹಿತ್ಯಕೊಟ್ಟ, ಸ್ಫೂರ್ತಿಯ ದ್ಯೋತಕವಾಗಿದೆ. ಮುದ್ದಣ್ಣನಂತೂ ಬೆಳ್ಳಿಯಂತೆ ಬೆಳಗಿದ್ದಾನೆ.

ಈ ಶತಮಾನದಲ್ಲಿ ಗದ್ಯ ಬೆಳಗಿದೆ, ಚಾರಿತ್ರಿಕಾಂಶ ಸಾಹಿತ್ಯರಂಗವನ್ನು ಪ್ರವೇಶಿಸಿದೆ, ಕನ್ನಡತನ ಎಲ್ಲೆಲ್ಲಿಯೂ ನಿಚ್ಚಳವಾಗಿ ಕಾಣುತ್ತಿದೆ. ಆಧುನಿಕ ಸಾಹಿತ್ಯಕ್ಕೆ ಹರಿಕಾರನಾಗಿ ಈ ಶತಮಾನ ಕನ್ನಡಿಗರನ್ನು ಕೈಮಾಡಿ ಕರೆಯುತ್ತಿದೆ.

— ಮುಗಿದುದು —

